# ಇತಿಹಾಸ ಸಂಶೋಧಕ

## ಡಾ. ಎ. ಕೆ. ಶಾಸ್ತ್ರಿ ಅಭಿನಂದನ ಗ್ರಂಥ



ಆತ್ಮೀಯ ಮಿತ್ರರಾದ ಡಾ। ಸೂರ್ಯನಾಥ ಕಾಮತ್ ಅವರಿಗೆ,
ಪ್ರೀತ್ಯಾದರಗಳಿಂದ –

ಬೆಂಗಳೂರು
15 - 11 - 1998

A.L. [signature]

ಡಾ. ಸೂರ್ಯನಾಥ ಕಾಮತರ ಕೊಡುಗೆ
13/10/10



# ಇತಿಹಾಸ ಸಂಶೋಧಕ

## ಡಾ. ಎ. ಕೆ. ಶಾಸ್ತ್ರಿ ಅಭಿನಂದನ ಗ್ರಂಥ



ಸಂಪಾದಕರು

**ಡಾ. ಜಿ. ಎಂ. ಹೆಗಡೆ**

ರಂಜನಾ ಪ್ರಕಾಶನ, ಧಾರವಾಡ

ITIHASA SANSHODHAKA
Felicitation volume presented to Dr. A. K. Shastri on the eve of his 58tn birth day, Edited by Dr. G. M. Hegde, Dept. of Kannada, Kittel Arts College, Dharwad-580001

First Edition : 1998

Price : 120/-                Pages : xvi + viii + 182

**ಡಾ. ಎ. ಕೆ. ಶಾಸ್ತ್ರಿ ಅಭಿನಂದನ ಸಮಿತಿ**

ವಿ. ಎಸ್. ಸೋಂದೆ, ಅಧ್ಯಕ್ಷರು, ಎಂ. ಇ. ಸೊಸೈಟಿ,, ಶಿರಸಿ
ಎಂ. ಆರ್. ಹೆಗಡೆ, ಉಪಾಧ್ಯಕ್ಷರು, ಕಾರ್ಯದರ್ಶಿ ಕರ್ನಾಟಕ ಸರಕಾರ, ವಿಧಾನ ಸೌಧ, ಬೆಂಗಳೂರು
ಜಿ. ಎಂ. ಹೆಗಡೆ, ಅಧ್ಯಕ್ಷರು, ಟಿ. ಎಂ. ಎಸ್. ಶಿರಸಿ
ಜಿ. ಟಿ. ಹೆಗಡೆ, ಅಧ್ಯಕ್ಷರು, ಕೆ. ಡಿ. ಸಿ. ಸಿ. ಬ್ಯಾಂಕ್,, ಶಿರಸಿ
ಶಾಂತಾರಾಮ ಹೆಗಡೆ, ಅಧ್ಯಕ್ಷರು, ಟಿ. ಎಸ್. ಎಸ್., ಶಿರಸಿ
ಎಂ. ಟಿ. ನಾಯಕ, ಎ. ಸಿ. ಪಿ., ಬೆಂಗಳೂರು
ಎನ್. ಎಂ. ಹೆಗಡೆ, ಪ್ರಾಚಾರ್ಯರು, ಸರಕಾರಿ ಪದವಿ ಕಾಲೇಜು, ಮುಂಡಗೋಡ
ಜಿ. ಎನ್. ಹೆಗಡೆ, ಗಡೀಮನೆ ಉಪಾಧ್ಯಕ್ಷರು, ಎಂ. ಇ. ಸೊಸೈಟಿ, ಶಿರಸಿ
ಜಿ. ಆರ್. ತಲಗೇರಿ, ಪ್ರಾಚಾರ್ಯರು, ಕಾನೂನು ಮಹಾವಿದ್ಯಾಲಯ, ಶಿರಸಿ
ಎನ್. ಎಂ. ಹೆಗಡೆ, 'ಕೇದಾರ' ಭೈರುಂಬೆ ಅಸೋಸಿಯೇಟ್ಸ್, ಶಿರಸಿ
ಜಿ. ವಿ. ಭಟ್ಟ, ಕೊಂಕೇರಿ, ನಿವೃತ್ತ ಪ್ರಾಚಾರ್ಯರು, ದಿವೇಕರ ಕಾಮರ್ಸ ಕಾಲೇಜು, ಕಾರವಾರ
ಡಿ. ಪಿ. ಹೆಗಡೆ, ಇಂಗ್ಲೀಷ್ ವಿಭಾಗದ ಮುಖ್ಯಸ್ಥರು, ಕಲಾ ವಿಜ್ಞಾನ ಕಾಲೇಜು, ಶಿರಸಿ

ಕಾರ್ಯದರ್ಶಿ ಹಾಗೂ ಅಭಿನಂದನ ಗ್ರಂಥದ ಸಂಪಾದಕರು :
ಡಾ. ಜಿ. ಎಂ. ಹೆಗಡೆ, ಪಾಧ್ಯಾಪಕರು, ಕಿಟೆಲ್ ಕಲಾ ಮಹಾವಿದ್ಯಾಲಯ, ಧಾರವಾಡ

ಕೋಶಾಧಿಕಾರಿಗಳು :
ಪಿ. ಆಯ್. ಹೆಗಡೆ, ಭೌತಶಾಸ್ತ್ರ ವಿಭಾಗದ ಮುಖ್ಯಸ್ಥರು, ಕಲಾ ವಿಜ್ಞಾನ ಕಾಲೇಜು, ಶಿರಸಿ

ಮುದ್ರಕರು : ಮನೋಹರ ಮುದ್ರಣಾಲಯ, ಮಾರ್ಕೆಟ, ಧಾರವಾಡ-೧



## ಶ್ರೀಮದ್ ಗಂಗಾಧರೇಂದ್ರ ಸರಸ್ವತಿ ಶ್ರೀಸ್ವಾಮಿಭಿಃ ಅಸ್ಮಾಕಂ

ಶ್ರೀ ಸ್ವರ್ಣವಲ್ಲಿ ಮಹಾಸಂಸ್ಥಾನ ಸೋಂದಾ ೮-೨-೧೯೯೮
ಮಠದೇವಳ, ಶಿರಸಿ
ಉತ್ತರಕನ್ನಡ - ೫೮೧೩೩೬

### ಆಶೀರ್ವಚನ

ಬಹುದೀರ್ಘಕಾಲ ಶಿರಸಿಯ ಎಂ. ಎಂ. ಕಲಾ ಮತ್ತು ವಿಜ್ಞಾನ ಮಹಾ ವಿದ್ಯಾಲಯದಲ್ಲಿ ಶಿಕ್ಷಕರಾಗಿ, ಅನಂತರ ವಿಭಾಗದ ಮುಖ್ಯಸ್ಥರಾಗಿ ಸೇವೆ ಸಲ್ಲಿಸಿ ನಿವೃತ್ತರಾಗುತ್ತಿರುವ ಡಾ. ಎ. ಕೆ. ಶಾಸ್ತ್ರಿಗಳ ಕುರಿತಾಗಿ 'ಇತಿಹಾಸ ಸಂಶೋಧಕ' ಎಂಬ ಅಭಿನಂದನ ಗ್ರಂಥವನ್ನು ಹೊರತರುತ್ತಿರುವ ವಿಷಯ ತಿಳಿದು ತುಂಬಾ ಸಂತೋಷವಾಯಿತು. ಕರ್ನಾಟಕದ ಖ್ಯಾತ ಹಿರಿಯ ಇತಿಹಾಸ ತಜ್ಞರೂ, ರಾಜ್ಯ ಮತ್ತು ರಾಷ್ಟ್ರಮಟ್ಟದ ಇತಿಹಾಸ ಗೋಷ್ಠಿಗಳಿಗೆ ಅಧ್ಯಕ್ಷರಾಗಿ ಮತ್ತು ಭಾರತೀಯ ಇತಿಹಾಸ ಅನುಸಂಧಾನ ಪರಿಷತ್ತಿನ ಸಂಶೋಧನಾ ಕಾರ್ಯದ ನಿರ್ದೇಶಕರಾಗಿ ಕಾರ್ಯ ನಿರ್ವಹಿಸಿದ ಡಾ. ಶಾಸ್ತ್ರಿಯವರ ಕುರಿತಾಗಿ ಅಭಿನಂದನ ಗ್ರಂಥವನ್ನು ಹೊರತರುತ್ತಿರುವದು ಶ್ಲಾಘನೀಯವಾಗಿದೆ.

ಡಾ. ಶಾಸ್ತ್ರಿಯವರು ತಮ್ಮ ವೃತ್ತಿಯೊಂದರಲ್ಲಿಯೇ ತೊಡಗಿಕೊಳ್ಳದೆ, ಶ್ರೀ ಶೃಂಗೇರಿ ಮಠದ, ಶ್ರೀ ಸ್ವರ್ಣವಲ್ಲೀ ಮಠದ, ಮಂಜಗುಣಿ ಶ್ರೀ ಕ್ಷೇತ್ರದ ಇತಿಹಾಸಗಳನ್ನು ಸಂಶೋಧಿಸಿ ಅನೇಕ ಗ್ರಂಥಗಳನ್ನು ಬರೆದಿರುತ್ತಾರೆ. ವಿಶೇಷವಾಗಿ ಶ್ರೀ ಸ್ವರ್ಣವಲ್ಲೀ ಮಠದ ದಾಖಲೆಗಳನ್ನು ಕಲೆಹಾಕಿ ಸುಂದರವಾದ ಎರಡು ಗ್ರಂಥ ಗಳನ್ನು ಬರೆದುಕೊಟ್ಟಿರುವದು ಗಮನಾರ್ಹ. ಅವರು 'ಇತಿಹಾಸ ಸಂಶೋಧನೆ' ಒಂದು ತಪಸ್ಸು ಎಂದು ತಿಳಿದುಕೊಂಡು ಕಾರ್ಯ ನಿರ್ವಹಿಸುತ್ತಾ ಬಂದಿದ್ದಾರೆ.

ಇತಿಹಾಸ ಅಧ್ಯಯನ, ಸಂಶೋಧನೆ ಮಾಡುವದು ಎಂದರೆ ಹಿಂಜರಿಯು ತ್ತಿರುವ ಈ ಕಾಲದಲ್ಲಿ ತಮ್ಮ ವೃತ್ತಿಯ ಜೊತೆಗೆ ಅಧ್ಯಯನ, ಸಂಶೋಧನೆ ನಡೆಸುತ್ತಾ ಬಂದಿರುವ ಡಾ. ಶಾಸ್ತ್ರಿಯವರಿಗೆ ಆರಾಧ್ಯ ಶ್ರೀ ದೇವರಾದ ಶ್ರೀ ಲಕ್ಷ್ಮೀ ನರಸಿಂಹ, ಶ್ರೀ ಚಂದ್ರಮೌಳೀಶ್ವರ, ಶ್ರೀ ರಾಜರಾಜೇಶ್ವರೀ ಇನ್ನೂ ಹೆಚ್ಚಿನ ರೀತಿ ಯಲ್ಲಿ ಇತಿಹಾಸ ಸಂಶೋಧನೆಗೆ ಪ್ರೇರಣೆ ನೀಡಲಿ ಮತ್ತು ಆಯುರಾರೋಗ್ಯವನ್ನು ನೀಡಲಿ ಎಂದು ಪ್ರಾರ್ಥಿಸಿ, ನೀವು ಹೊರತರಲುದ್ದೇಶಿಸಿರುವ ಗ್ರಂಥ ಸುಂದರವಾಗಿ ಪ್ರಕಟಗೊಳ್ಳಲಿ ಎಂದು ಆಶಿಸುತ್ತೇವೆ.

# ಶ್ರೀ ಶ್ರೀ ಜಗದ್ಗುರು ಶಂಕರಾಚಾರ್ಯ ಮಹಾಸಂಸ್ಥಾನ
# ಶ್ರೀ ಶಾರದಾಪೀಠ, ಶೃಂಗೇರಿ

ಎ. ಆರ್. ಗೌರಿಶಂಕರ
ಆಡಳಿತಾಧಿಕಾರಿಗಳು,
ಶ್ರೀ ಶೃಂಗೇರಿಮಠ, ಶೃಂಗೇರಿ–೫೭೭೧೩೯

೩–೨–೧೯೯೮

## ಸಂದೇಶ

ಕರ್ನಾಟಕ ರಾಜ್ಯದ ಹೆಸರಾಂತ ಇತಿಹಾಸಕಾರರಲ್ಲಿ ಒಬ್ಬರಾದ ಡಾ. ಎ. ಕೆ. ಶಾಸ್ತ್ರಿಗಳವರು ೩೫ ವರ್ಷಗಳ ಕಾಲ ಉಪನ್ಯಾಸಕರಾಗಿ ಸೇವೆ ಸಲ್ಲಿಸಿ ಅಪಾರ ಜನಪ್ರಿಯರಾಗಿರುತ್ತಾರೆ. ಅತಿ ವಿರಳವಾದ ಕಡತಗಳನ್ನು ಅಧ್ಯಯನ ಮಾಡಿ ಐತಿಹಾಸಿಕವಾಗಿ ಹಲವಾರು ಮುಖ್ಯ ವಿಚಾರಗಳನ್ನು ಬೆಳಕಿಗೆ ತಂದಂಥವರಾಗಿರುತ್ತಾರೆ. ಇವರ ಕೃತಿಯಾದ 'ಶೃಂಗೇರಿ ಧರ್ಮಸಂಸ್ಥಾನ' (ಎ ಹಿಸ್ಟರಿ ಆಫ್ ಶೃಂಗೇರಿ) ಎಂಬ ಗ್ರಂಥವು ಶ್ರೀಮಠದ ಶಿಷ್ಯಸಮುದಾಯಕ್ಕೆ ಅತಿ ಮುಖ್ಯವಾದ ವಿಷಯಗಳನ್ನು ತಿಳಿಸುವಂತಹದ್ದಾಗಿದೆ. ಶ್ರೀ ಶ್ರೀ ಜಗದ್ಗುರು ಅಭಿನವ ವಿದ್ಯಾತೀರ್ಥ ಮಹಾಸ್ವಾಮಿಗಳವರು ಇವರ ಮೇಲೆ ವಿಶೇಷವಾದ ಪ್ರೀತಿಯನ್ನು ಇಟ್ಟುಕೊಂಡವರಾಗಿದ್ದರು.

ಇತ್ತೀಚೆಗೆ ಶೃಂಗೇರಿ ಮಠದಲ್ಲಿರುವ ಹಳೆಯ ಅತಿ ಮುಖ್ಯವಾದ ಪತ್ರಗಳನ್ನೆಲ್ಲಾ ಕ್ರೋಢೀಕರಿಸಿ ಕರ್ನಾಟಕ ರಾಜ್ಯ ಪತ್ರಾಗಾರದ ಮೂಲಕ ಪ್ರಕಟಿಸಿ, ಶ್ರೀ ಶ್ರೀ ಜಗದ್ಗುರು ಭಾರತೀತೀರ್ಥ ಮಹಾಸ್ವಾಮಿಗಳವರ ಕೃಪಾಶೀರ್ವಾದಕ್ಕೆ ಪಾತ್ರರಾದವರು. ಇವರು ಸೇವೆಯಿಂದ ನಿವೃತ್ತಿ ಹೊಂದುತ್ತಿರುವ ಸಂದರ್ಭದಲ್ಲಿ ಅವರ ಅಭಿಮಾನಿ ಬಳಗದವರಿಂದ ದೊರೆಯುತ್ತಿರುವ ವಿಶೇಷ ಗೌರವದ ಸಮಾರಂಭದಲ್ಲಿ ಹೊರತರುತ್ತಿರುವ 'ಇತಿಹಾಸ ಸಂಶೋಧಕ' ಅಭಿನಂದನ ಗ್ರಂಥವು ಒಳ್ಳೆಯ ಲೇಖನಗಳನ್ನು ಹೊಂದಿ ಬಹುಜನೋಪಯೋಗವಾಗುವಂತಾಗಲಿ ಎಂದು ಶ್ರೀ ಶ್ರೀಗಳವರು ಆಶೀರ್ವದಿಸಿರುತ್ತಾರೆ.

# ಶುಭ ಹಾರೈಕೆ

ಡಾ. ಎ. ಕೆ. (ಅನಂತ ಕೃಷ್ಣ) ಶಾಸ್ತ್ರಿಗಳು ತಮ್ಮ ವೃತ್ತಿಯಿಂದ ನಿವೃತ್ತರಾಗುತ್ತಿರುವ ಸಂದರ್ಭದಲ್ಲಿ ಅವರ ಅಭಿಮಾನಿಗಳು ಅವರಿಗೆ ಈ ಅಭಿನಂದನ ಗ್ರಂಥವನ್ನು ಅರ್ಪಿಸಿ ಸತ್ಕರಿಸುವುದು ಯಥಾಯೋಗ್ಯ. ಈ ಗ್ರಂಥದ ಸಂಪಾದಕರಾದ ಡಾ ಜಿ.ಎಂ. ಹೆಗಡೆಯವರು ಈ ಗ್ರಂಥಕ್ಕೆ ನಾನು ನಾಲ್ಕು ಮಾತುಗಳನ್ನು ಬರೆಯಬೇಕೆಂದು ಸೂಚಿಸಿದಾಗ ನನಗೆ ಆದ ಆನಂದ ಅಷ್ಟಿಷ್ಟಲ್ಲ. ಯಾಕೆಂದರೆ ನನ್ನ ಶಿಷ್ಯರಲ್ಲಿ ಡಾ. ಶಾಸ್ತ್ರಿಗಳು ಅಗ್ರಗಣ್ಯರು. ಈ ಅಭಿನಂದನ ಗ್ರಂಥ ಇವರ ವಿದ್ವತ್ತು ಮತ್ತು ಜನಪ್ರಿಯತೆಗೆ ಸಂಕೇತ. ಇವೆರಡೂ ಗುಣಗಳು ಒಬ್ಬರಲ್ಲಿ ಇರುವುದು ಅತಿ ವಿರಳ. ಇವರಲ್ಲಿ ಅವು ಇರುವುದು ಬಹುಶಃ ಅವರ ಸಂಶೋಧನೆಯ ಕ್ಷೇತ್ರದಿಂದಿರಬಹುದು. ಮಠಗಳ ದಾಖಲೆಗಳ ಅಭ್ಯಾಸದಲ್ಲಿ ಶಾಸ್ತ್ರಿಗಳು ನಿಷ್ಣಾತರು. ಇವರ ಗ್ರಂಥ ಶೃಂಗೇರಿಯ ಇತಿಹಾಸ ಇಂಗ್ಲೀಷ್ ಮತ್ತು ಕನ್ನಡದಲ್ಲಿ ಪ್ರಕಟವಾಗಿ ಇವರಿಗೆ ರಾಷ್ಟ್ರಮಟ್ಟದಲ್ಲಿ ಮತ್ತು ರಾಜ್ಯಮಟ್ಟದಲ್ಲಿ ಖ್ಯಾತಿಯನ್ನು ತಂದಿದೆ. ಇಂತಹ ವಿದ್ವಾಂಸರಿಗೆ, ಶ್ರೀ ಸ್ವರ್ಣವಲ್ಲೀ ಮಠದ ಶ್ರೀಮದ್ ಗಂಗಾಧರೇಂದ್ರ ಸರಸ್ವತಿ ಶ್ರೀ ಸ್ವಾಮಿಗಳು ತಮ್ಮ ಮಠದ ಇತಿಹಾಸವನ್ನು ಬರೆಯಬೇಕೆಂದು ಆದೇಶಿಸಿದ್ದು ಸೂಕ್ತ, ಈ ಆದೇಶದ ಅನುಸಾರವಾಗಿ ಹೊರಬಂದ "ಶ್ರೀ ಸ್ವರ್ಣವಲ್ಲೀ ಮಹಾ ಸಂಸ್ಥಾನ"ವೆಂಬ ಪುಸ್ತಕ ಮಠಗಳ ಇತಿಹಾಸಕಾರರಿಗೆ ಮಾದರಿಯಾಗಿದೆ. ಈ ವಿಷಯದಲ್ಲಿ ಇನ್ನೂ ಆಳವಾದ ಅಭ್ಯಾಸ ಮಾಡುವವರಿಗೆ ನಮ್ಮ ರಾಜ್ಯದ ಪತ್ರಾಗಾರ ಇಲಾಖೆಯವರು ಪ್ರಕಟಿಸಿರುವ "ಶ್ರೀ ಮಂಜಗುಣಿ ಕ್ಷೇತ್ರದ ಚಾರಿತ್ರಿಕ ದಾಖಲೆಗಳು", ನಮ್ಮ ರಾಜ್ಯದ ಪತ್ರಾಗಾರ ಇಲಾಖೆಗೂ, ಶಾಸ್ತ್ರಿಗಳಿಗೂ ಮತ್ತು ಮಠಕ್ಕೂ ಕೀರ್ತಿಯನ್ನು ತಂದಿವೆ. ಇದೇ ರೀತಿ ಶಾಸ್ತ್ರಿಗಳು ಶೃಂಗೇರಿ ಮಠದ ದಾಖಲೆಗಳ ಪಟ್ಟಿಯನ್ನು ಪ್ರಕಟಿಸಿದ್ದಾರೆ. ಶೃಂಗೇರಿ ಮಠದ ಹೆಚ್ಚಿನ ಅಭ್ಯಾಸ ಮಾಡುವವರಿಗೆ ಈ ಪಟ್ಟಿ ಅತ್ಯವಶ್ಯ. ಹೀಗೆ ತಾವು ಮಾಡಿದ ಅಭ್ಯಾಸದ ವಿಷಯದಲ್ಲಿ ಇತರರು ಮುಂದೆ ಹೋಗುವ ಸಲುವಾಗಿ ಇಲ್ಲಿಯ ದಾಖಲೆಗಳನ್ನು ಪ್ರಕಟಿಸುವ ಪದ್ಧತಿಯು ಸಂಶೋಧಕರಿಗೆ ಇವರು ಕಲ್ಪಿಸಿಕೊಟ್ಟಿರುವ ಸೌಕರ್ಯ.

ಇವರ ಸಂಶೋಧನೆ ಮಠಗಳ ಇತಿಹಾಸಕ್ಕೆ ಮಾತ್ರ ಸೀಮಿತವಾಗಿಲ್ಲ. ಬನವಾಸಿ ಕದಂಬರ ಬಗ್ಗೆ ಒಂದು ಗ್ರಂಥವನ್ನು ಸಂಪಾದಿಸಿದ್ದಾರೆ. ತಮ್ಮ ತಾಲೂಕಾದ ಶಿರ್ಸಿ ತಾಲೂಕಿನ ಬಗ್ಗೆ ಬರೆದ 'ಶಿರ್ಸಿ ತಾಲೂಕಿನ ಇತಿಹಾಸ' ಮತ್ತು ಇವರು ಸಂಪಾದಿಸಿದ 'ಶಿರ್ಸಿ ತಾಲೂಕ ದರ್ಪಣ' ಪ್ರಾದೇಶಿಕ ಇತಿಹಾಸಕ್ಕೆ ಇವರ ಕೊಡುಗೆ. ಯಾವ ತಾಲೂಕೂ ಇಂತಹ ವಿದ್ವತ್ಪೂರ್ಣ ಕೈಪಿಡಿಗಳನ್ನು ಹೊಂದಿಲ್ಲ.

ಇವರ ಇತರ ಕೊಡುಗೆಗಳಲ್ಲಿ ಕೆಲವನ್ನು ಪ್ರಸ್ತುತ ಪುಸ್ತಕದಲ್ಲಿ ನೋಡಿದರೆ ಇವರ ಪಾಂಡಿತ್ಯದ ವಿಸ್ತಾರ ಮತ್ತು ಗುಣಮಟ್ಟಗಳನ್ನು ತಿಳಿದುಕೊಳ್ಳಬಹುದು.

ನಮ್ಮ ರಾಜ್ಯದ ಪತ್ರಾಗಾರ ಖಾತೆಯುವರಿಗೆ ಇವರ ಪ್ರಕಟಣೆಗಳಿಂದ ಒಳ್ಳೆಯ ಹೆಸರು ಬಂದಿದೆ. ಈಗ ಇವರು ನಿವೃತ್ತರಾಗುವುದರಿಂದ ಇವರ ಸಹಾಯದಿಂದ ಈ ಖಾತೆಯುವರು ರಾಜ್ಯದ ಇತರ ಮಠಗಳ ದಾಖಲೆಗಳನ್ನು ಪ್ರಕಟಿಸಿದರೆ ಆ ಮಠಗಳಿಗೂ ಮತ್ತು ರಾಜ್ಯದ ಇತಿಹಾಸ ಪ್ರೇಮಿಗಳಿಗೂ ಸಹಾಯವಾಗುತ್ತದೆ. ರಾಷ್ಟ್ರ ಮಟ್ಟದಲ್ಲಿಯೂ ಇವರಿಗೆ ರಾಜ್ಯದಲ್ಲಿ ಸಿಕ್ಕ ಮನ್ನಣೆ ಸಿಗಲೆಂದು ನನ್ನ ಆಶಯ.

ಹೋದ ವರ್ಷ ಶಿರ್ಸಿ ಮತ್ತು ಸ್ವಾದಿಗಳಲ್ಲಿ ಶ್ರೀಮದ್ ಗಂಗಾಧರೇಂದ್ರ ಸರಸ್ವತೀ ಶ್ರೀ ಸ್ವಾಮಿಗಳ ಆದೇಶದ ಮೇರೆಗೆ ಕರ್ನಾಟಕ ಇತಿಹಾಸ ಅಕಾಡೆಮಿಯ ವಾರ್ಷಿಕ ಸಮ್ಮೇಳನವನ್ನು ಅಚ್ಚುಕಟ್ಟಾಗಿ ಶಾಸ್ತ್ರಿಗಳು ನಡೆಯಿಸಿ ಕೊಟ್ಟ ನೆನಪು ಇನ್ನೂ ಹಸಿರಾಗಿ ಉಳಿದಿದೆ.

ಶಾಸ್ತ್ರಿಗಳಿಗೂ ಅವರ ಕುಟುಂಬವರ್ಗದವರಿಗೂ ಭಗವಂತನು ಆಯುರಾರೋಗ್ಯ ಸಂಪತ್ತನ್ನು ಅನುಗ್ರಹಿಸಲೆಂದು ನನ್ನ ಪ್ರಾರ್ಥನೆ.

ಶ್ರೀಮದ್ ಗಂಗಾಧರೇಂದ್ರ ಸರಸ್ವತೀ ಶ್ರೀ ಸ್ವಾಮಿಗಳ ಆದೇಶವನ್ನು ಪಾಲಿಸಿ ತಮ್ಮ ಗುರುಗಳಾದ ಡಾ ಅನಂತ ಕೃಷ್ಣ ಶಾಸ್ತ್ರಿಗಳ ಋಣವನ್ನು ಈ ಗ್ರಂಥದ ಸಂಪಾದಕತ್ವ ಮತ್ತು ಪ್ರಕಟಣೆಗಳ ಮೂಲಕ ತೀರಿಸುತ್ತಿರುವ ಅವರ ಪ್ರಿಯ ಶಿಷ್ಯರಾದ ಡಾ. ಜಿ.ಎಂ. ಹೆಗಡೆಯವರ ಪದ್ಧತಿ ಮತ್ತು ಸಾಹಸದ ಉಪಕ್ರಮ ಸ್ತುತ್ಯರ್ಹ ಮತ್ತು ಅನುಕರಣೀಯ. ಈ ಗ್ರಂಥವು ಶಾಸ್ತ್ರಿಗಳ ಅಭಿಮಾನಿಗಳಿಂದಲೂ, ಇತಿಹಾಸಪ್ರೇಮಿಗಳಿಂದಲೂ ಮನ್ನಣೆ ಪಡೆಯುವುದರಲ್ಲಿ ಸಂದೇಹವಿಲ್ಲ.

'ಸ್ವಸ್ತಿ' ನವೋದಯನಗರ
ಧಾರವಾಡ – ೫೮೦ ೦೦೩

**ಡಾ. ಜಿ. ಎಸ್. ದೀಕ್ಷಿತ್**
ಇತಿಹಾಸ ವಿದ್ವಾಂಸರು

# ಸಂಪಾದಕರ ಮಾತು

ಕರ್ನಾಟಕದ ಇತಿಹಾಸ ಸಂಶೋಧಕರಲ್ಲಿ ಡಾ. ಎ. ಕೆ. ಶಾಸ್ತ್ರಿ ಅವರು ಕಡತಗಳ ವಿದ್ವಾಂಸರೆಂದು ಖ್ಯಾತರಾಗಿದ್ದಾರೆ. ಶಿರಸಿಯ ಎಂ. ಎಂ. ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯದಲ್ಲಿ ಕಳೆದ ಮೂವತ್ನಾಲ್ಕು ವರ್ಷಗಳಿಂದ ಇತಿಹಾಸ ಪ್ರಾಧ್ಯಾಪಕರಾಗಿ, ವಿಭಾಗದ ಮುಖ್ಯಸ್ಥರಾಗಿ ಸುದೀರ್ಘಕಾಲ ಶೈಕ್ಷಣಿಕ ಸೇವೆ ಸಲ್ಲಿಸಿದ ಡಾ. ಎ. ಕೆ. ಶಾಸ್ತ್ರಿ ಅವರು ೩೧ ಮಾರ್ಚ ೧೯೯೮ ರಂದು ನಿವೃತ್ತರಾಗುತ್ತಿದ್ದಾರೆ. ಪ್ರತಿಭೆ ಪಾಂಡಿತ್ಯ ಮತ್ತು ಇತಿಹಾಸ ಸಂಶೋಧನೆಯ ಅಖಂಡ ಶ್ರದ್ಧೆ ಅವರ ವ್ಯಕ್ತಿತ್ವದ ವಿಶಿಷ್ಟತೆಯಾಗಿದೆ. ಆದರ್ಶ ಪ್ರಾಧ್ಯಾಪಕ, ಶ್ರೇಷ್ಠ ಕ್ರೀಡಾಪಟು ಕಡತಗಳ ಪಂಡಿತ, ಇತಿಹಾಸ ಸಂಶೋಧಕ ಎಲ್ಲಕ್ಕಿಂತ ಹೆಚ್ಚಾಗಿ ಶ್ರಮಸಂಸ್ಕೃತಿಯ ಆದರ್ಶವಾಗಿರುವ ಡಾ. ಎ. ಕೆ. ಶಾಸ್ತ್ರಿ ಅವರು ಇತಿಹಾಸ ವಿದ್ವಾಂಸರ ಪ್ರೀತಿ, ಆದರಕ್ಕೆ ಭಾಜನರಾದವರು. ಶೃಂಗೇರಿಯ, ಸ್ವರ್ಣವಲ್ಲಿಯ ಸಾಂಸ್ಕೃತಿಕ ಇತಿಹಾಸವನ್ನು ಅಧ್ಯಯನದ ಶಿಸ್ತಿಗೆ ಅಳವಡಿಸಿದ ಇತಿಹಾಸ ವಿದ್ವಾಂಸರಾದ ಡಾ. ಅನಂತ ಕೃಷ್ಣ ಶಾಸ್ತ್ರಿಗಳ ಇತಿಹಾಸ ಸಂಶೋಧನೆಯ ಕಾರ್ಯವನ್ನು ಗೌರವಿಸುವ ವಿಚಾರವನ್ನು ಕಳೆದ ೩೦ ಜನೆವರಿ ೧೯೯೮ ರಂದು ಸ್ವರ್ಣವಲ್ಲೀ ಮಹಾಸಂಸ್ಥಾನದ ಶ್ರೀ ಗಂಗಾಧರೇಂದ್ರ ಸರಸ್ವತಿಗಳ ಮುಂದೆ ಇಟ್ಟಾಗ ಈ ಅಭಿನಂದನ ಸಮಾರಂಭ ೨೭ ಮಾರ್ಚ ೧೯೯೮ ರಂದು ಅರ್ಥಪೂರ್ಣವಾಗಿ ಜರುಗಿಸಬೇಕೆಂದೂ ಆ ಸಂದರ್ಭದಲ್ಲಿ 'ಇತಿಹಾಸ ಸಂಶೋಧಕ' ಎಂಬ ಅಭಿನಂದನ ಗ್ರಂಥವನ್ನು ಹೊರತರಬೇಕೆಂದೂ, ನಾನು ಅದರ ಸಂಪಾದಕತ್ವದ ಹೊಣೆ ವಹಿಸಿಕೊಳ್ಳಬೇಕೆಂದೂ ಹೇಳಿ ಶ್ರೀಗಳು ಮಾರ್ಗದರ್ಶನ ಮಾಡಿದರು. ಶ್ರೀಗಳ ಸದಾಶಯದಂತೆ ಅತ್ಯಲ್ಪ ಅವಧಿಯಲ್ಲಿ ಈ ಸಂಪುಟ ಸಿದ್ಧವಾಗಿ ಪ್ರಕಟವಾಗುತ್ತಿದೆ.

ಡಾ. ಅನಂತ ಕೃಷ್ಣ ಶಾಸ್ತ್ರಿಗಳು ಶಿರಸಿಯ ಸ್ವಾತಂತ್ರ್ಯ ಹೋರಾಟಗಾರರೂ, ವಿದ್ವಾಂಸರೂ, ಸಂಸ್ಕೃತ ಪಂಡಿತರೂ ಆಗಿದ್ದ ಕೃಷ್ಣ ಶಾಸ್ತ್ರಿಗಳ ಸುಪುತ್ರರಾಗಿ ತಂದೆ ನಡೆದ ದಾರಿಯಲ್ಲಿ ಇತಿಹಾಸದ ವಿದ್ವತ್ತನ್ನು ಬೆಳೆಸಲು ಶ್ರಮಿಸಿದವರು. ಬಾಲ್ಯದಲ್ಲೇ ತಂದೆಯನ್ನು ಕಳೆದುಕೊಂಡು ತಾಯಿ ಭವಾನಿಯ ವಾತ್ಸಲ್ಯದಲ್ಲಿ ವಿದ್ಯಾವ್ಯಾಸಂಗ ನಡೆಸಿದವರು. ಬಡತನದಲ್ಲಿ ನಲುಗಿ ಹೋಗಲಿದ್ದ ಈ ಸಂಸಾರ ಆದರ್ಶಕ್ಕಾಗಿ ಹೋರಾಡಿದ್ದು ನಿಜಕ್ಕೂ ವಿಸ್ಮಯಕರ. ತನ್ನ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸಿ

ಮುಂದೆ ತರಬೇಕೆಂಬ ಗ್ರಾಮೀಣ ವಿಧವೆಯೊಬ್ಬಳ ಛಲ ಹೋರಾಟ ನಮ್ಮ ಸಮಾಜಕ್ಕೆ ಒಂದು ಆದರ್ಶವಾಗಿದೆ. ತಾಯಿ ಭವಾನಿ ಕಂಡ ಕನಸನ್ನು ಸಾಕಾರಗೊಳಿಸಿದ ಅನಂತ ಕೃಷ್ಣ ಶಾಸ್ತ್ರಿ ಅವರ ಬಾಳಪಯಣದ ಸಾಹಸಗಾಥೆಯನ್ನು ಈ ಗ್ರಂಥದ ಮೊದಲ ಭಾಗ ನೀಡುತ್ತದೆ. 'ನೆನಪಿನಂಗಳದಲ್ಲಿ' ಎಂಬ ಈ ಆತ್ಮಚರಿತ್ರೆ ಡಾ. ಶಾಸ್ತ್ರಿ ಅವರ ವ್ಯಕ್ತಿತ್ವ ವಿಕಾಸದ ವಿವಿಧ ಮುಖಗಳನ್ನು ಚಿತ್ರಿಸುತ್ತದೆ. ಇದಕ್ಕೆ ಅವರ ದಿನಚರಿಯಪುಟಗಳೇ ಮುಖ್ಯ ಆಕರ ಸಾಮಗ್ರಿಯಾಗಿವೆ. ಕಳೆದ ನಾಲ್ಕು ದಶಕಗಳಿಂದ ನಿರಂತರವಾಗಿ ದಿನಚರಿ ಬರೆಯುತ್ತ ಬಂದ ಡಾ. ಎ.ಕೆ. ಶಾಸ್ತ್ರಿ ಅವರ ದಿನಚರಿ ಸಂಪುಟಗಳು ಪ್ರಕಟವಾಗಬೇಕಿವೆ. ಇವು ಸಮಕಾಲೀನ ಇತಿಹಾಸ ಬರೆಯುವವರಿಗೆ ವಿರಳ ಸಾಮಗ್ರಿಗಳಾಗುತ್ತವೆ. ಡಾ. ಶಾಸ್ತ್ರಿ ಅವರ 'ನೆನಪಿನಂಗಳದಲ್ಲಿ' ಅವರ ಪ್ರಾಮಾಣಿಕ ಬದುಕಿನ ಕೈಗನ್ನಡಿಯಾಗಿದೆ.

ಕರ್ನಾಟಕದ ಇತಿಹಾಸಪ್ರಪಂಚಕ್ಕೆ ಡಾ. ಎ ಕೆ. ಶಾಸ್ತ್ರಿ ಅವರ ಕೊಡುಗೆ ಬಹುಮುಖವಾದದ್ದು. ಇತಿಹಾಸದ ಸಂರಚನೆಗೆ ಕಡತಗಳು ಮುಖ್ಯ ಆಕರ ಸಾಮಗ್ರಿಯಾಗುವದನ್ನು ತಮ್ಮ ಸಂಶೋಧನೆಯಲ್ಲಿ ಅಳವಡಿಸಿ ತೋರಿಸಿರುವದಲ್ಲದೆ ಕಡತಗಳ ಬೃಹತ್ ಸಂಪ್ರುಟಗಳನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಶೃಂಗೇರಿಯ ಇತಿಹಾಸಕ್ಕೆ ಸಂಬಂಧಿಸಿದಂತೆ ಡಾ. ಎ. ಕೆ. ಶಾಸ್ತ್ರಿ ಅವರು ನಡೆಸಿದ ಅಧ್ಯಯನ ಅವರ ಆಳವಾದ ಸಂಶೋಧನ ನಿಷ್ಠೆಯ ಪ್ರತೀಕವಾಗಿದೆ. ಶೃಂಗೇರಿ ಧರ್ಮ ಸಂಸ್ಥಾನದಲ್ಲಿರುವ ಲಕ್ಷದಷ್ಟು ಕಡತಗಳನ್ನು ಪರಿಶೀಲಿಸಿ ಅವುಗಳ ಐತಿಹಾಸಿಕ ವರ್ಗೀಕರಣ ನಡೆಸಿ ಕಡತಗಳ ಆಕರ ಸಂಪುಟಗಳನ್ನು ಸಿದ್ಧಪಡಿಸಿಕೊಟ್ಟ ಹಿರಿಮೆ ಡಾ. ಎ. ಕೆ. ಶಾಸ್ತ್ರಿಯವರದು. ಅವರ ಸಂಶೋಧನೆಯು ಉಪೇಕ್ಷಿತವಾದ ಕಡತಗಳ ಆಕರ ಸಂಪುಟಗಳ ರಚನೆಯಲ್ಲೂ, ಕಡತಗಳ ಆಧಾರದಿಂದ ಚರಿತ್ರೆಯ ಪುನಃಶೋಧ ನಡೆಸುವ ಅಧ್ಯಯನದಲ್ಲೂ ಮಹತ್ತರ ಕಾರ್ಯ ಮಾಡಲ್ಪಟ್ಟಿದೆ. ಇದೇ ರೀತಿಯಲ್ಲಿ 'ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನದ ಐತಿಹಾಸಿಕ ದಾಖಲೆಗಳು' ಹಾಗೂ 'ಶ್ರೀ ಸ್ವರ್ಣವಲ್ಲಿ ಮಹಾಸಂಸ್ಥಾನದ ಚರಿತ್ರೆ'ಯನ್ನು 'ಮಂಜಗುಣಿ ಕ್ಷೇತ್ರದ ಐತಿಹಾಸಿಕ ದಾಖಲೆಗಳ' ಸಂಪುಟವನ್ನು ರಚಿಸಿ ಕೊಟ್ಟ ಶ್ರೇಯಸ್ಸು ಡಾ. ಎ. ಕೆ. ಶಾಸ್ತ್ರಿಯವರದು. 'ಶಿರಸಿ ತಾಲೂಕಿನ ಇತಿಹಾಸ'ದ ಬಗೆಗೆ ಸಮಗ್ರ ಅಧ್ಯಯನ ಗ್ರಂಥ ತರುವ ಅವರ ಪ್ರಯತ್ನ ಅವರ ಸಂಶೋಧನ ಪ್ರೀತಿಯ ದ್ಯೋತಕವಾಗಿದೆ. ಡಾ. ಶಾಸ್ತ್ರಿ ಅವರ ಜೀವನ ಹಾಗೂ ಸಂಶೋಧನೆಯನ್ನು ಅವರ ವ್ಯಕ್ತಿತ್ವದ ಆದರ್ಶವನ್ನು ಗ್ರಂಥದ ಎರಡನೆಯ ಭಾಗದ ಲೇಖನಗಳು ನೀಡುತ್ತವೆ.

ಡಾ. ಎ. ಕೆ. ಶಾಸ್ತ್ರಿ ಅವರ ಸಂಶೋಧನ ಲೇಖನಗಳು ಕನ್ನಡ ಹಾಗೂ ಇಂಗ್ಲೀಷ್‌ಗಳೆರಡರಲ್ಲೂ ಪ್ರಕಟವಾಗಿದ್ದು ನಾಡಿನ ಇತಿಹಾಸ ಸಮ್ಮೇಳನಗಳಲ್ಲಿ ಅವು ಮಂಡಿತವಾಗಿವೆ ಅವರ ಆಯ್ದ ಲೇಖನಗಳನ್ನು ಗ್ರಂಥದಲ್ಲಿ ಅಳವಡಿಸುವದು ಇತಿಹಾಸ ಸಂಶೋಧಕರಿಗೆ ತೋರುವ ನಿಜವಾದ ಗೌರವವೆಂಬ ಭಾವನೆಯಿಂದ ಈ ಗೌರವ ಗ್ರಂಥದಲ್ಲಿ ಡಾ. ಎ.ಕೆ. ಶಾಸ್ತ್ರಿಯವರ ಆಯ್ದ ಸಂಶೋಧನ ಲೇಖನಗಳನ್ನು ಪ್ರಕಟಿಸಲಾಗಿದ್ದು ಇವು ಉತ್ತರಕನ್ನಡದ ಐತಿಹಾಸಿಕ ಸಾಂಸ್ಕೃತಿಕ ಪರಂಪರೆಯನ್ನೂ, ಧರ್ಮಸಂಸ್ಥಾನಗಳ ಇತಿಹಾಸವನ್ನೂ ರಾಜಕೀಯ, ಧಾರ್ಮಿಕ ಸಂಬಂಧಗಳನ್ನೂ ವಿವರಿಸುತ್ತವೆ. ಡಾ. ಶಾಸ್ತ್ರಿಗಳ ಸಂಶೋಧನ ಲೇಖನಗಳು ಸಂಪುಟ ರೂಪದಲ್ಲಿ ಪ್ರಕಟವಾಗುವ ಅಗತ್ಯವಿದೆ.

ಡಾ. ಎ. ಕೆ. ಶಾಸ್ತ್ರಿಗಳು ಅಸಂಖ್ಯ ಅಭಿಮಾನಿಗಳನ್ನೂ, ಆತ್ಮೀಯರನ್ನೂ ಹೊಂದಿದ್ದು ಅವರು ಕಂಡ ಡಾ. ಶಾಸ್ತ್ರಿಗಳ ವ್ಯಕ್ತಿತ್ವದ ಮುಖಗಳನ್ನು ಗ್ರಂಥದ ನಾಲ್ಕನೆಯ ಭಾಗದಲ್ಲಿ ಅಳವಡಿಸಲಾಗಿದೆ. ಇತಿಹಾಸ ಪ್ರಾಧ್ಯಾಪಕರಾಗಿ ಅವರು ಮೂವತ್ನಾಲ್ಕು ವರ್ಷಗಳಷ್ಟು ಕಾಲ ಅನೇಕ ವಿದ್ಯಾರ್ಥಿಗಳಿಗೆ ಸ್ಫೂರ್ತಿ ನೀಡಿದ್ದಾರೆ. ಶ್ರೇಷ್ಠ ಕ್ರೀಡಾಪಟುವಾಗಿ ಸಾಧನೆ ಮಾಡಿ ಅನೇಕ ಜನರನ್ನು ತರಬೇತಿಗೊಳಿಸಿದ್ದಾರೆ. ಕಡತಗಳ ವಿದ್ವಾಂಸರಾಗಿ ತಮ್ಮ ಬದುಕನ್ನು ಇತಿಹಾಸದ ಸಂರಚನೆಗೆ ತೊಡಗಿಸಿ ಕೊಂಡಿದ್ದಾರೆ. ಹೀಗೆ ಬಹುಮುಖ ವ್ಯಕ್ತಿತ್ವದ ಡಾ. ಎ. ಕೆ. ಶಾಸ್ತ್ರಿ ಇಂದು ವಿರಳ ವಾಗುತ್ತಿರುವ ಶ್ರಮ ಸಂಸ್ಕೃತಿಯ ಆದರ್ಶದ ಪ್ರತೀಕವಾಗಿದ್ದಾರೆ. ಅವರನ್ನು ಗೌರವಿಸುವದೆಂದರೆ ಶ್ರಮಸಂಸ್ಕೃತಿಯನ್ನು ಗೌರವಿಸಿದಂತೆಯೇ ಎನ್ನಬಹುದು.

'ಇತಿಹಾಸ ಸಂಶೋಧಕ' ಗೌರವ ಗ್ರಂಥವನ್ನು ಸಿದ್ಧಪಡಿಸುವಲ್ಲಿ ಮಾರ್ಗ ದರ್ಶನ ಮಾಡಿ ಆಶೀರ್ವದಿಸಿದ ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನದ ಶ್ರೀ ಗಂಗಾ ಧರೇಂದ್ರ ಸರಸ್ವತಿ ಸ್ವಾಮಿಗಳಿಗೆ ನನ್ನ ನಮನಗಳು ಸಲ್ಲುತ್ತವೆ. ಡಾ. ಎ.ಕೆ. ಶಾಸ್ತ್ರಿ ಯವರು ಈ ಗ್ರಂಥ ಪ್ರಕಟಣೆಯ ಕಾಲಕ್ಕೆ ನಮ್ಮೊಡನೆ ಪ್ರೀತಿಯಿಂದ ಸಹಕರಿಸಿ ದ್ದಾರೆ. ಶಿರಸಿಯ ಎಂ. ಎಂ. ಕಾಲೇಜಿನ ಪ್ರಾಚಾರ್ಯರಾದ ಪಿ. ಶಂಕರರಾವ್ ಹಾಗೂ ಎಲ್ಲ ಸಹೋದ್ಯೋಗಿಗಳು ತುಂಬು ಹೃದಯದಿಂದ ಶ್ರಮಿಸಿದ್ದಾರೆ. ಸನ್ಮಾನ ಸಮಿತಿಯ ಅಧ್ಯಕ್ಷರಾಗಿ ಮಾನ್ಯ ಶ್ರೀ ವಿ. ಎಸ್. ಸೋಂದೆ ಅವರು ಕೋಶಾಧ್ಯಕ್ಷ ರಾಗಿ ಪ್ರೊ. ಪಿ. ಆಯ್ ಹೆಗಡೆ ಅವರು ಮತ್ತು ಸಮಿತಿಯ ಸದಸ್ಯರು ಬಹುವಾಗಿ ಶ್ರಮಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯದ ನೂತನ ಕುಲಪತಿಗಳಾದ ಡಾ. ಎಂ.ಎಂ. ಕಲಬುರ್ಗಿ ಅವರು ಗ್ರಂಥದ ಬೆನ್ನುಡಿ ಬರೆದುಕೊಟ್ಟಿದ್ದಾರೆ. ಶೃಂಗೇರಿ ಮಠದ ಆಡಳಿತಾಧಿಕಾರಿಗಳಾದ ಶ್ರೀ ವಿ. ಆರ್. ಗೌರೀಶಂಕರ ಮತ್ತು ಡಾ. ಜಿ. ಎಸ್. ದೀಕ್ಷಿತರು ಶುಭವನ್ನು ಹಾರೈಸಿದ್ದಾರೆ. ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ

ಸಹಾಯ ಮಾಡಿ ಡಾ. ಎ. ಕೆ. ಶಾಸ್ತ್ರಿ ಗೌರವ ಸಮಾರಂಭ ಜರುಗಿಸಲು ಕಾರಣರಾದವರನ್ನು ನಾನು ಕೃತಜ್ಞತೆಯಿಂದ ನೆನೆಯುತ್ತ ಎಲ್ಲರಿಗೂ ಹಾರ್ದಿಕ ವಂದನೆಗಳನ್ನು ಅರ್ಪಿಸುತ್ತೇನೆ. ಈ ಗ್ರಂಥವನ್ನು ಅಂದವಾಗಿ ಮುದ್ರಿಸಿಕೊಟ್ಟ ಧಾರವಾಡದ ಮನೋಹರ ಮುದ್ರಣಾಲಯದ ರವಿಚಂದ್ರ ಸಹೋದರರಿಗೂ, ಸಿಬ್ಬಂದಿಗಳಿಗೂ ನನ್ನ ನೆನಕೆಗಳು ಸಲ್ಲುತ್ತವೆ.

'ಇತಿಹಾಸ ಸಂಶೋಧಕ' ಗ್ರಂಥವು ನಾಡಿನ ಇತಿಹಾಸ ಪ್ರೇಮಿಗಳಿಗೆ ಸಹಾಯಕವಾಗಲೆಂದು ಹಾರೈಸುತ್ತೇನೆ.

೨೭ ಮಾರ್ಚ ೧೯೯೮

**ಡಾ. ಜಿ. ಎಂ. ಹೆಗಡೆ**
ಕಿಟೆಲ್ ಆರ್ಟ್ಸ್ ಕಾಲೇಜು, ಧಾರವಾಡ



# ಪರಿವಿಡಿ

## ಆತ್ಮೀಯರು, ಅಭಿಮಾನಿಗಳು ಕಂಡಂತೆ



## ಅನುಬಂಧಗಳು



ಶೃಂಗೇರಿ ಮಠದ ಚಾರಿತ್ರಿಕ ದಾಖಲೆಗಳನ್ನು
ಎ. ಕೆ. ಶಾಸ್ತ್ರಿಯವರಿಗೆ ಅಧ್ಯಯನಕ್ಕಾಗಿ ನೀಡಿ,
ಆಶೀರ್ವದಿಸಿದ ಜಗದ್ಗುರು
ಶ್ರೀ ಶ್ರೀ ಭಾರತೀತೀರ್ಥ ಮಹಾಸ್ವಾಮಿಗಳು



ಎ. ಕೆ. ಶಾಸ್ತ್ರಿಯವರನ್ನು ಆಶೀರ್ವದಿಸಿದ
ಸ್ವರ್ಣವಲ್ಲೀಮಠದ ಬ್ರಹ್ಮೀಭೂತ ಶ್ರೀ ಶ್ರೀ
ಸರ್ವಜ್ಞೇಂದ್ರ ಸರಸ್ವತೀ ಮಹಾಸ್ವಾಮಿಗಳು



ಎ. ಕೆ. ಶಾಸ್ತ್ರಿಯವರಿಗೆ ಆಕರ ಸಾಮಗ್ರಿಗಳನ್ನು ನೀಡಿ ಆಶೀರ್ವದಿಸಿದ
ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನದ ಶ್ರೀ ಶ್ರೀ ಶ್ರೀ ಗಂಗಾಧರೇಂದ್ರ ಸರಸ್ವತೀ ಸ್ವಾಮಿಗಳು



ಬ್ರಹ್ಮೀಭೂತ ಶೃಂಗೇರಿ ಜಗದ್ಗುರು ಶ್ರೀ ಶ್ರೀ ಶ್ರೀ ಅಭಿನವ ವಿದ್ಯಾತೀರ್ಥ ಮಹಾಸ್ವಾಮಿಗಳೊಂದಿಗೆ ಸಮಾಲೋಚನೆ ನಡೆಸಿರುವ ಡಾ. ಎ. ಕೆ. ಶಾಸ್ತ್ರಿ




ಕರ್ನಾಟಕ ಇತಿಹಾಸ ಅಕಾಡೆಮಿಯ ಹನ್ನೊಂದನೇ ಸಮ್ಮೇಳನದಲ್ಲಿ ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನದ ಶ್ರೀ ಶ್ರೀ ಗಂಗಾಧರೇಂದ್ರ ಸರಸ್ವತೀ ಸ್ವಾಮಿಗಳವರಿಂದ ಸನ್ಮಾನಿಸಲ್ಪಡುತ್ತಿರುವ ಡಾ. ಎ. ಕೆ. ಶಾಸ್ತ್ರಿ 1997



ಕೃಷ್ಣಶಾಸ್ತ್ರಿಗಳು
ಡಾ. ಎ. ಕೆ. ಶಾಸ್ತ್ರಿಯವರ ತಂದೆ



ಭವಾನಿ
ಡಾ. ಎ. ಕೆ. ಶಾಸ್ತ್ರಿಯವರ ತಾಯಿ



ಕರ್ನಾಟಕ ವಿಶ್ವವಿದ್ಯಾಲಯದ ಅಥ್ಲೆಟಿಕ್
ಪಂದ್ಯಾಟಗಳಲ್ಲಿ ಚಾಂಪಿಯನ್ ಮತ್ತು
ನಾಯಕ, ಎ. ಕೆ. ಶಾಸ್ತ್ರಿ ಟೊಣ್ಣೇಮನೆ
1961-1962



ಡಾ. ಎ. ಕೆ. ಶಾಸ್ತ್ರಿಯವರ ಅಕ್ಕ ಮೃಣಾಲಿನಿ



ಪತ್ನಿ ವೀಣಾಳೊಂದಿಗೆ ಡಾ. ಎ. ಕೆ. ಶಾಸ್ತ್ರಿ 1998



ಶಾಸ್ತ್ರಿ ದಂಪತಿಗಳ ಪುತ್ರರು : ನವೀನ ಮತ್ತು ನೀಲೇಶ



ಡಾ. ಎ. ಕೆ. ಶಾಸ್ತ್ರಿಯವರ 'ಅನಿಸಿಕೆಗಳು' ಎಂಬ ಕವನ ಸಂಕಲನವನ್ನು ಬಿಡುಗಡೆ ಮಾಡುತ್ತಿರುವವರು ಚಿತ್ರದುರ್ಗದ ಬೃಹನ್ಮಠದ ಸ್ವಾಮಿಗಳು



ವಿಧಾನ ಸೌಧದಲ್ಲಿ 'ಶ್ರೀ ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನದ ಐತಿಹಾಸಿಕ ದಾಖಲೆಗಳು' ಎಂಬ ಗ್ರಂಥದ ಬಿಡುಗಡೆ

ಎಡದಿಂದ ಬಲಕ್ಕೆ : ಎಂ. ವಿ. ಕೃಷ್ಣಪ್ಪ (ಪತ್ರಪಾಲಕರು). ಡಾ. ಎ. ಕೆ. ಶಾಸ್ತ್ರಿ. ಸಿ. ಎಚ್. ದೇವರಾಜ (ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ) ಶ್ರೀಮತಿ ಪ್ರಮಿಳಾ ನೇಸರ್ಗಿ (ಪರಿಷತ್ ಸದಸ್ಯೆ). ಡಾ. ದೇ. ಜವರೇಗೌಡ (ಮೈಸೂರು ವಿಶ್ವವಿದ್ಯಾಲಯದ ಮಾಜಿ ಕುಲಪತಿಗಳು. ಗ್ರಂಥ ಬಿಡುಗಡೆ ಮಾಡಿದವರು) ಶ್ರೀಮತಿ ಲೀಲಾದೇವಿ ಆರ್. ಪ್ರಸಾದ (ಸಚಿವೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ)



ಧಾರವಾಡದ ಕೃಷಿ ವಿಶ್ವವಿದ್ಯಾಲಯದ ಕುಲಪತಿ ಡಾ. ಆರ್. ಕೆ. ಹೆಗಡೆ ಅವರಿಂದ
ಸೆನಪಿನ ಕಾಣಿಕೆ ಸ್ವೀಕರಿಸುತ್ತಿರುವ ಡಾ. ಎ. ಕೆ. ಶಾಸ್ತ್ರಿ
ಸಂದರ್ಭ : ಶಿರಸಿ ತಾಲೂಕಾ ದರ್ಪಣದ ಬಿಡುಗಡೆ




ಕಾರವಾರ ಜಿಲ್ಲೆಯ ಇತಿಹಾಸ ಸಮ್ಮೇಳನದಲ್ಲಿ 1990



1989ರಲ್ಲಿ ಶಿವಮೊಗ್ಗೆಯಲ್ಲಿ ನಡೆದ ಕರ್ನಾಟಕ ಇತಿಹಾಸ ಕಾಂಗ್ರೆಸ್ ಅಧಿವೇಶನದಲ್ಲಿ ಪ್ರತಿನಿಧಿಗಳನ್ನುದ್ದೇಶಿಸಿ ಮಾತನಾಡುತ್ತಿರುವ ಡಾ. ಎ. ಕೆ. ಶಾಸ್ತ್ರಿ



ಎನ್. ಸಿ. ಸಿ. ನೌಕಾದಳದ ಸಬ್‌ಲೆಫ್ಟಿನೆಂಟ್ ಆಗಿ ಎ. ಕೆ. ಶಾಸ್ತ್ರಿ



# ನೆನಪಿನಂಗಳದಲ್ಲಿ

---

**ಡಾ. ಎ. ಕೆ. ಶಾಸ್ತ್ರಿ**

ಕರ್ನಾಟಕದಲ್ಲಿ ಸರಕಾರಿ ಮತ್ತು ಸರಕಾರದಿಂದ ಅನುದಾನ ಪಡೆಯುವ ಸಂಸ್ಥೆಗಳಲ್ಲಿ ದುಡಿಯುವವನಿಗೆ '೫೮' ಎಂಬುದು ಒಂದು ಆಘಾತಕಾರಿ ಸಂಖ್ಯೆ. ಮನಸ್ಸಿರಲಿ ಅಥವಾ ಇಲ್ಲದೇ ಇರಲಿ, ದೇಹ ಸದೃಢವಾಗಿರಲಿ ಇಲ್ಲವೆ ದುರ್ಬಲ ವಾಗಿರಲಿ, ಇವುಗಳ ಜೊತೆಗೆ ಇತ್ತೀಚಿನ ವರ್ಷಗಳಲ್ಲಿ ಇನ್ನೊಂದು ಮಾತನ್ನೂ ಧಾರಾಳವಾಗಿ ಸೇರಿಸಬಹುದು- ಬುದ್ಧಿ ಇರಲಿ ಅಥವಾ ಇಲ್ಲದೇ ಇರಲಿ, ವಯಸ್ಸು ೫೮ ಆಯಿತೆಂದರೆ ಒಬ್ಬ ವ್ಯಕ್ತಿ ವೃತ್ತಿಯಿಂದ ನಿವೃತ್ತನಾಗಲೇಬೇಕು. ಇದು ಸರಕಾರಿ ನಿಯಮ. ನೌಕರನಾದವನು ಕಡ್ಡಾಯವಾಗಿ ಈ ನಿಯಮವನ್ನು ಪಾಲಿಸಲೇ ಬೇಕು. ಸ್ವತಂತ್ರವಾಗಿ ಉದ್ಯೋಗ ಮಾಡುವವನಿಗೆ ಈ ೫೮ ವಯಸ್ಸಿನ ಭೀತಿಯಿಲ್ಲ. ನೌಕರನಾದವನಿಗೆ ೫೮ ವಯಸ್ಸು ಸಮೀಪಿಸುತ್ತಿದ್ದಂತೆ ಅನೇಕ ವಿಚಾರಗಳು ತಲೆಯಲ್ಲಿ ಸುಳಿಯತೊಡಗುತ್ತವೆ. ಮಕ್ಕಳ ಶಿಕ್ಷಣ, ಮಕ್ಕಳ ಭವಿಷ್ಯ, ಹೆಣ್ಣು ಮಕ್ಕಳ ಮದುವೆ, ಅನಾರೋಗ್ಯ, ಸಮೀಪದ ಬಂಧುಗಳೊಡನೆ ಇರಿಸಿಕೊಳ್ಳ ಬೇಕಾದ ಸಂಬಂಧ, ತನ್ನ ಮತ್ತು ಕುಟುಂಬದ ಭವಿಷ್ಯ, ಹೀಗೆ ಒಂದೇ? ಎರಡೇ?; ಅನೇಕ ವಿಷಯಗಳ ಬಗ್ಗೆ ಚಿಂತನೆ ಪ್ರಾರಂಭವಾಗುತ್ತದೆ. ಅನುದಾನಿತ ಸಂಸ್ಥೆಗಳಲ್ಲಿ ದುಡಿದು ನಿವೃತ್ತನಾಗುವವನಿಗಂತೂ, ಮೇಲ್ಕಾಣಿಸಿದ ವಿಷಯಗಳ ಹೊರತಾಗಿ, ಅಥವಾ ಇವುಗಳ ಜೊತೆಗೆ, ವಿಶ್ರಾಂತಿ ವೇತನ, ಮಿತವ್ಯಯನಿಧಿ, ಜೀವವಿಮಾ ನಿಧಿ, ಪರಿವರ್ತಿತ ಅಥವಾ ವಿನಿಮಯ ನಿಧಿ ಇತ್ಯಾದಿ ತನಗೆ ಸಿಗಲೇಬೇಕಾದ ಸೌಲಭ್ಯ ಗಳನ್ನು ಹೇಗೆ ಸಕಾಲದಲ್ಲಿ ಪಡೆಯಬೇಕೆಂಬುದನ್ನು ಕುರಿತು ಚಿಂತೆ ಪ್ರಾರಂಭ ವಾಗುತ್ತದೆ. ನಿವೃತ್ತನಾದವನಿಗೆ ತನ್ನಷ್ಟಕ್ಕೆ ತಾನೇ ದೊರೆಯಲೇಬೇಕಾದ ಸೌಲಭ್ಯಗಳೆಲ್ಲ ಇತ್ತೀಚಿನ ವರ್ಷಗಳಲ್ಲಿ ದೊರೆಯಲು ಸಾಧ್ಯವೇ ಇಲ್ಲ ಎಂಬ ಪರಿಸ್ಥಿತಿ ನಿರ್ಮಾಣವಾಗಿದೆ. ಜೀವನದಲ್ಲಿ ಅರಿಯದ ಮತ್ತು ಎಂದೂ ಮಾಡದ ಕರ್ಮಾಚರಣೆ ಯನ್ನು ಮಾಡಬೇಕಾಗುತ್ತದೆ. ತನಗಿಂತ ಮೊದಲು ನಿವೃತ್ತರಾದ ಹಿರಿಯರ ಅನುಭವ ಪಡೆದು, ಯಾವ ಯಾವ ಹಂತದಲ್ಲಿ ಎಷ್ಟೆಷ್ಟು ? ಮತ್ತು ಯಾರ್ಯಾರಿಗೆ ದಾನ-ಧರ್ಮಗಳನ್ನು ಮಾಡಬೇಕೆಂಬುದರ ಅಗಾಧ ಜ್ಞಾನವನ್ನು ಹೊಂದಿದವ ನಾಗಿರಬೇಕಾಗುತ್ತದೆ. ಈ ಸತ್ಕಾರ್ಯದಲ್ಲಿ ಕೆಲವೊಮ್ಮೆ ದಲ್ಲಾಳಿಗಳನ್ನೂ ಆಶ್ರಯಿಸಬೇಕಾಗುತ್ತದೆ. ಅವರವರ ವಿಧಿ ಮತ್ತು ಬುದ್ಧಿಮತ್ತೆಗೆ ತಕ್ಕಂತೆ ಕೊನೆ

ಯಲ್ಲಿ ಫಲ ಲಭಿಸುತ್ತದೆ. ನಿವೃತ್ತಿಯಾಗಿ ವಿಶ್ರಾಂತಿ ವೇತನ ಪಡೆಯುವ ಈ ಮಧ್ಯಂತರದಲ್ಲಿ, ರಾಜಧಾನಿಗೆ ಮತ್ತು ಉಪರಾಜಧಾನಿಗಳಿಗೆ ಅದೆಷ್ಟು ಸಲ ಪರ್ಯಟನ ! ಅಲ್ಲಿಯ ಕಚೇರಿಗಳಿಗೆ ಅದೆಷ್ಟು ಸಲ ದಾನ-ಧರ್ಮ !. ಎಂಬುದೆಲ್ಲವು ಗಳ ಪರಿಚಯು ಸ್ವಂತ ಅನುಭವದಿಂದಲೇ ಸಾಧ್ಯ ಎಂಬುದು ಇಂಥ ಸಾಗರದಲ್ಲಿ ಈಸಿ, ದಡ ಸೇರಿದವರ ಖಚಿತ ಅಭಿಪ್ರಾಯ. ಆದರೂ ನಿವೃತ್ತನಾದವನು ತನ್ನ ಜೀವನದ ಅಂತಿಮ ಆಶ್ರಮವನ್ನು ತಲುಪುವ ಮುನ್ನ ಈ ದುಸ್ಸಾಹಸದಲ್ಲಿ ತನ್ನನ್ನು ಅನಿವಾರ್ಯವಾಗಿ ತೊಡಗಿಸಿಕೊಳ್ಳುತ್ತಾನೆ ವೇದಕಾಲದಲ್ಲಿ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸ ಎಂಬ ನಾಲ್ಕು ಅವಸ್ಥೆಗಳಲ್ಲಿ ವ್ಯಕ್ತಿಯ ಜೀವನವನ್ನು ವ್ಯವಸ್ಥೆಗೊಳಿಸಲಾಗಿತ್ತು ಎಂಬುದನ್ನು ಕುರಿತು ನಾವು ಓದಿದ್ದೇವೆ. ಆದರೆ ಇಂದು ನೌಕರಿ ಮಾಡುವವನ ಜೀವನದಲ್ಲಿ ಮಾತ್ರ ಮೂರೇ ಆಶ್ರಮಗಳು-ಪದವಿಗಳನ್ನು ಪಡೆಯುವವರೆಗಿನ ಕಾಲ, ನೌಕರಿ ಮಾಡುವಾಗಿನ ಕಾಲ ಮತ್ತು ಅಂತಿಮವಾಗಿ ವಿಶ್ರಾಂತಿವೇತನ ಪಡೆಯುವಾಗಿನ ಕಾಲ. ಇದೇ ನಮ್ಮ ಇಂದಿನ ಆಶ್ರಮ ಪದ್ಧತಿ. ಇವುಗಳಲ್ಲಿ ಮತ್ತೆ ಉಪವಿಭಾಗಗಳು ಇದ್ದರೂ ಇರಬಹುದು. ಮೇಲ್ಕಾಣಿಸಿದ ವಿಷಯಗಳನ್ನೆಲ್ಲ ತಲೆಯಲ್ಲಿ ತುಂಬಿಕೊಂಡು, ಅವುಗಳ ಬಗ್ಗೆ ಚಿಂತನೆ ಮಾಡುತ್ತಾ, ದಿನಾಂಕ ೧೭-೩-೧೯೪೦ ರಂದು ಜನಿಸಿದ ನಾನು, ಮುಂಬರುವ ಅನೇಕ ಅಡೆತಡೆಗಳನ್ನು ಯಶಸ್ವಿಯಾಗಿ ದಾಟುವ ಕುರಿತು ಚಿಂತಾಕ್ರಾಂತನಾಗಿದ್ದೇನೆ. ಆದರೂ, ಬದುಕಿನಲ್ಲಿ ಹೋರಾಟದ ಅನುಭವ ಇರುವ ನಾನು ದಡ ಸೇರುವ ಆಸೆಯನ್ನಿರಿಸಿಕೊಂಡಿದ್ದೇನೆ. ಈ ೫೮ ವರ್ಷಗಳ ಅವಧಿಯಲ್ಲಿ ಎಲ್ಲರ ಜೀವನದಲ್ಲಿ ನಡೆದಂತೆ ನನ್ನ ಜೀವನದಲ್ಲಿಯೂ ಅನೇಕ ಘಟನೆಗಳು ಜರುಗಿವೆ. ಅವುಗಳನ್ನೆಲ್ಲ ಪ್ರಸ್ತುತದಲ್ಲಿ ನಿವೇದಿಸುವದು ಸಾಧ್ಯವೂ ಇಲ್ಲ, ಸೂಕ್ತವೂ ಅಲ್ಲ. ನನ್ನ ನೆನಪಿನಂಗಳದಲ್ಲಿಯ ಕೆಲವನ್ನು ಮಾತ್ರ ಈ ಕಿರು ಆತ್ಮಕತೆಯಲ್ಲಿ ಬರೆಯುತ್ತಿದ್ದೇನೆ.

## ಮನೆತನದ ಹಿನ್ನೆಲೆ ಮತ್ತು ಜನನ

ಜ್ಯೋತಿಷ್ಯ ಶಾಸ್ತ್ರದ ಬಗ್ಗೆ ನನಗೆ ಗೌರವವಿದೆ. ಆದರೆ ನನ್ನ ಜಾತಕವನ್ನು ಹಿಡಿದುಕೊಂಡು ಜ್ಯೋತಿಷಿಗಳನ್ನು ಸಂಪರ್ಕಿಸುತ್ತ, ಫಲ ಕೇಳುತ್ತ ಹೋಗುವದು ನನ್ನ ಮನಸ್ಸಿಗೆ ಎಂದೂ ಒಗ್ಗಿಲ್ಲ ಮತ್ತು ನನ್ನ ಜಾತಕ ಫಲವನ್ನು ತಿಳಿಯುವ ಉತ್ಸುಕತೆಯೂ ನನಗಿಲ್ಲ ಸಂದರ್ಭಕ್ಕೆ ತಕ್ಕಂತೆ ಯಾವ ರೀತಿ ವರ್ತಿಸಬೇಕು ಎಂಬುದರ ಸಾಮಾನ್ಯ ಜ್ಞಾನ ನನಗಿದೆಯೆಂದು ಭಾವಿಸಿದ್ದೇನೆ. ತೊಂದರೆಯಲ್ಲಿದ್ದಾಗ ನನಗಿಂತ ಹಿರಿಯರನ್ನು ಮತ್ತು ಜ್ಞಾನಿಗಳನ್ನು ಸಂಪರ್ಕಿಸುತ್ತೇನೆ; ಮತ್ತು ಅಂಥವರಿಂದ ಅನುಭವದ ಮಾರ್ಗದರ್ಶನ ಪಡೆಯುತ್ತೇನೆ. ಹೀಗಾಗಿ ನನ್ನ ಜಾತಕದ ಫಲವನ್ನರಿಯಲು ನನಗೆ ವಿಶೇಷ ಆಸಕ್ತಿ ಇಲ್ಲ. ನನಗೆ ನನ್ನ ಕೆಲಸದಲ್ಲಿಯೇ ವಿಶೇಷ ಆಸಕ್ತಿ. ಆದರೆ ನನ್ನ ತಂದೆಯವರು ಸಂಪ್ರದಾಯಸ್ಥರಾಗಿದ್ದ

ರಿಂದ ಅವರು ನನ್ನ ಜಾತಕವನ್ನು ಬರೆಸಿಟ್ಟಿದ್ದಾರೆ. ಜಾತಕ ತಯಾರಿಸಿದವರು ಬನವಾಸಿಯ ಒಬ್ಬ ಪ್ರಸಿದ್ಧ ಜ್ಯೋತಿಷಿಗಳು ಎಂಬುದಾಗಿ ನಾನು ನನ್ನ ತಾಯಿಯಿಂದ ತಿಳಿದುಕೊಂಡಿದ್ದೆ. ಆದರೆ ಅವರ ಹೆಸರು ಏನೆಂಬುದು ಗೊತ್ತಿಲ್ಲ. ನನ್ನ ತಂದೆಯವರೇ ಸ್ವತಃ ಜ್ಯೋತಿಷ್ಯ ಶಾಸ್ತ್ರದಲ್ಲಿ ತಜ್ಞರಾಗಿದ್ದರು. ಅನೇಕರ ಜಾತಕಗಳನ್ನು ಅವರು ತಯಾರಿಸಿಕೊಟ್ಟಿದ್ದರು. ಆದರೆ ತನ್ನ ಮಗನ ಜಾತಕವನ್ನು ತಾನೇ ತಯಾರಿಸುವಂತಿಲ್ಲವಲ್ಲ! ಕೆಲವು ವರ್ಷಗಳ ಹಿಂದೆ ಮೂಲಜಾತಕವಿದ್ದ ಕಾಗದವು ಶಿಥಿಲವಾಗಿದ್ದರಿಂದ, ನನ್ನ ಆತ್ಮೀಯ ಬಂಧುಗಳಾದ, ಪ್ರಸಿದ್ಧ ಜ್ಯೋತಿಷಿಗಳೂ, ಕರ್ನಾಟಕ ವಿಜ್ಞಾನ ಮಹಾವಿದ್ಯಾಲಯದ ಭೌತಶಾಸ್ತ್ರದ ನಿವೃತ್ತ ಪ್ರಾಧ್ಯಾಪಕರೂ ಆದ ಶ್ರೀ ಉಮಾಮಹೇಶ್ವರ ಹೆಗಡೆಯವರು ಅದರ ಪ್ರತಿಯನ್ನು ಮಾಡಿ ಕೊಟ್ಟಿದ್ದಾರೆ. ಅದು ಇಂತಿದೆ :

ಶ್ರೀ ಗಣೇಶಾಯನಮಃ

ಜನ್ಮಸ್ಥಳ ಮತ್ತು ದಿನಾಂಕ : ಶಿರಸಿ ೧೭-೩-೧೯೪೦

ರವಿವಾರ ದಿವಾಘಟಿ ೫-೨೧ ೮-೫೦ ಬೆಳಿಗ್ಗೆ ಜನ್ಮ

ಜನ್ಮನಕ್ಷತ್ರ-ಮೃಗಶಿರಾ ೪ನೇ ಚರಣ. ಜನ್ಮಾದಿ ಕುಜದಶಾ ವಷ್ಯವರ್ಷ ೧-೮-೨೪

| ಲಗ್ನ ಮೇಷ | ರವಿ | ಚಂದ್ರ | ಮಂ. | ವ। ಬುಧ | ಗುರು |
|---|---|---|---|---|---|
| ೦-೧೩-೪೦ | ೧೧-೩-೨೨ | ೨-೩-೨೨ | ೦-೨೬-೪೦ | ೧೧-೦-೨೦ | ೧೧-೨೨-೪೦ |
| ಶುಕ್ರ | ಶನಿ | ರಾಹು | ಕೇತು | ಹರ್ಶಲ | ವ। ನೇಪ್ |
| ೦-೧೬-೩೦ | ೦-೬-೩೬ | ೫-೨೮-೨೪ | ೧೧-೨೮-೨೪ | ೦-೨೫-೫೪ | ೫-೧-೪ |

| | | | |
|---|---|---|---|
| ರವಿ ೫<br>ವ। ಬುಧ ೪<br>ಗುರು ೧೦<br>ಕೇತು ೧೨ | ಲಗ್ನ ೫<br>ಮಂ ೮<br>ಶುಕ್ರ ೫<br>ಶನಿ ೨<br>ಹರ್ಷಲ ೮ | | ಚಂದ್ರ ೮ |
| | ಪುರುಷ<br>ಅನಂತ | | |
| | | | |
| | | | ರಾಹು ೬<br>ವ। ನೇಪ್-೧೦ |

ಜಾತಕದ ಬಗ್ಗೆ ನನಗೆ ವಿಶೇಷ ಆಸಕ್ತಿ ಇಲ್ಲದಿರುವದರಿಂದ ಅದರ ಫಲವನ್ನು ಕುರಿತು ನಾನು ಹೆಚ್ಚು ಯೋಚಿಸಿಲ್ಲ. ಹೀಗಾಗಿ ಆ ವಿಷಯ ಕುರಿತ ವಿವರಣೆ ಪ್ರಸ್ತುತದಲ್ಲಿ ಅನಗತ್ಯ.

ನನ್ನ ಮನೆತನದ ಹಿನ್ನೆಲೆ ಕುರಿತು ನನಗೆ ತಿಳಿದ ಮಾಹಿತಿ ನೀಡಬಯಸುವೆ. ನಾನೊಬ್ಬ ಇತಿಹಾಸದ ಪ್ರಾಧ್ಯಾಪಕನಾಗಿ ನನ್ನ ಮನೆತನದ ಪೂರ್ವಚರಿತ್ರೆಯೇ ನನಗೆ ಸರಿಯಾಗಿ ಗೊತ್ತಿಲ್ಲ ಎಂದು ತಿಳಿಸಲು ನಾಚಿಕೆಯಾಗುವದಷ್ಟೇ ಅಲ್ಲ, ಇದೊಂದು ವಿಪರ್ಯಾಸ ಕೂಡ. ನನ್ನ ತಂದೆ ಕೃಷ್ಣಶಾಸ್ತ್ರಿಗಳ ಮೂಲ ಮನೆ, ಶಿರಸಿಯಿಂದ ಕುಮಟಾಕ್ಕೆ ಹೋಗುವ ಮಾರ್ಗದಲ್ಲಿ ೧೦ ಕಿ. ಮೀ. ಅಂತರದಲ್ಲಿ ಹಾರುಗಾರ ಹತ್ತಿರವಿರುವ ಟೊಣ್ಣೀಮನೆ. ಆದರೆ ಆ ಊರಿಗೆ ನಾನು ಚಿಕ್ಕವ ನಿದ್ದಾಗ ಒಮ್ಮೆ ಮಾತ್ರ ಹೋದ ನೆನಪು. ಆ ಊರಿನ ಹೆಸರೇ ನನ್ನ ವಿದ್ಯಾರ್ಥಿ ಜೀವನದಲ್ಲಿ ನನ್ನ ಅಡ್ಡಹೆಸರಾಗಿ ಅಂಟಿಕೊಂಡು ಬಂದಿದ್ದರೂ, ದೊಡ್ಡವನಾದ ಮೇಲೆ ನಾನು ಅಲ್ಲಿಗೆ ಒಮ್ಮೆ ಕೂಡ ಹೋಗಿಲ್ಲ. ಅಲ್ಲಿಗೆ ಹೋಗಲೇಬಾರದೆಂಬ ಧೋರಣೆಯಲ್ಲ; ಒಟ್ಟಿನಲ್ಲಿ ಅಲ್ಲಿಗೆ ಹೋಗಲು ನನಗೆ ಇನ್ನೂ ಆಗಿಲ್ಲ. ನನ್ನ ತಂದೆ ಚಿಕ್ಕವನಿರುವಾಗಲೇ ತಾಯಿ-ತಂದೆಯನ್ನು ಕಳೆದುಕೊಂಡು ತಬ್ಬಲಿಯಾಗಿದ್ದನೆಂದು ತೋರುತ್ತದೆ. ನನ್ನ ತಂದೆಯ ತಂದೆ ಹೆಸರು ಪರಮೇಶ್ವರ ಭಟ್ಟ. ನನ್ನ ತಂದೆಗೆ

ಅಕ್ಕ-ತಂಗಿಯರಾಗಲಿ, ಅಣ್ಣನಾಗಲಿ ಯಾರೂ ಇರಲಿಲ್ಲವಂತೆ. ರಾಮು ಎಂಬ ತಮ್ಮ ಇದ್ದನಂತೆ. ಹೀಗಾಗಿ, ಆ ಬಾಲಕನ ಬಗ್ಗೆ ಯಾರೂ ವಿಶೇಷ ಆಸಕ್ತಿ ವಹಿಸಲಿಲ್ಲವೆಂಬುದು ನಂತರದ ಆಗುಹೋಗುಗಳಿಂದ ಸ್ಪಷ್ಟವಾಗುತ್ತದೆ. ಬಾಲಕ ಕೃಷ್ಣ ಯಾರಿಗೂ ಹೇಳದೆ ವಿದ್ಯಾಭ್ಯಾಸ ಮಾಡಲೆಂದು ಮೈಸೂರಿಗೆ ತೆರಳಿದ. ಹದಿನೈದು ವರ್ಷಗಳ ಕಾಲ ಮೈಸೂರಿನಲ್ಲಿದ್ದನೆಂದು ತಿಳಿದು ಬಂದಿದೆ. ಮೈಸೂರಿನಲ್ಲಿ. ಸಂಸ್ಕೃತದ ವ್ಯಾಕರಣ ಶಾಸ್ತ್ರದಲ್ಲಿ. ಶಿರೋಮಣಿ ಪರೀಕ್ಷೆಯಲ್ಲಿ ಪ್ರಥಮ ಸ್ಥಾನ ಪಡೆದು ಮೈಸೂರಿನ ನಾಲ್ವಡಿ ಕೃಷ್ಣರಾಜ ಒಡೆಯರಿಂದ ಶಾಲು ಹೊದೆಸಿಕೊಂಡು ಸನ್ಮಾನಿತನಾಗಿದ್ದು ಅವನ ಜೀವನದಲ್ಲಿಯ ಅತ್ಯಂತ ಮಹತ್ವದ ಘಟನೆಯಾಗಿತ್ತು. ನನ್ನ ತಂದೆಗೆ ದೊರೆತ ಆ ಕೆಂಪುಶಾಲಿನ ನೆನಪು ನನಗೆ ಇನ್ನೂ ಇದೆ. ಮೈಸೂರಿನಲ್ಲಿ ಅವನ ವಿದ್ಯಾಭ್ಯಾಸದ ಜೀವನ ಕಷ್ಟಮಯವಾಗಿತ್ತೆಂದು ಕೇಳಿದ್ದೇನೆ. ಅಷ್ಟು ವರ್ಷಗಳ ಕಾಲ ಮೈಸೂರಿನಲ್ಲಿ ಹೇಗೆ ಬದುಕಿದ ಎಂಬುದನ್ನು ಕುರಿತು ನನಗೆ ವಿಶೇಷ ಮಾಹಿತಿ ತಿಳಿದಿಲ್ಲ. ಅದೇನಿದ್ದರೂ, ಮೈಸೂರಿನಲ್ಲಿ ಆಗ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲ (ಕ್ರಿ.ಶ ೧೮೯೪-೧೯೪೦). ಅವರ ಕಾಲ ಮೈಸೂರಿನ ಚರಿತ್ರೆಯಲ್ಲಿಯೇ 'ಸುವರ್ಣಯುಗ' ಎಂದು ಹೆಸರಾಗಿದೆ. ಸರ್ ಎಂ. ವಿಶ್ವೇಶ್ವರಯ್ಯ ಮತ್ತು ಸರ್ ಮಿರ್ಝಾ ಇಸ್ಮಾಯಿಲ್‌ರಂಥ ಪ್ರಸಿದ್ಧ ದಿವಾನರು ಆಡಳಿತ ನಡೆಸಿದ ಕಾಲ ಅದಾಗಿತ್ತು. ವಿದ್ವಾಂಸರಿಗೆ ಸಾಕಷ್ಟು ಮನ್ನಣೆಯಿತ್ತು. ಹೀಗೆ ಒಬ್ಬ ಚಿಕ್ಕ ಬಾಲಕನಾಗಿ ಮನೆಯಿಂದ ಓಡಿ ಹೋದ ಕೃಷ್ಣ ೧೫ ವರ್ಷಗಳ ನಂತರ ಒಬ್ಬ ಘನವಿದ್ವಾಂಸನಾಗಿ ಮೈಸೂರಿನಿಂದ ಪುನಃ ಟೊಣ್ಣೇಮನೆಗೆ ಬಂದ. ಮತ್ತು ಹಳದೋಟದ ಭವಾನಿ(ನನ್ನ ತಾಯಿ)ಯನ್ನು ವಿವಾಹವಾದ. ಮೈಸೂರಿನಿಂದ ಟೊಣ್ಣೇಮನೆಗೆ ತಿರುಗಿ ಬಂದಾಗ ಎಲ್ಲರಿಗೂ ಆಶ್ಚರ್ಯ; ಮತ್ತೆ ಕೆಲವರಿಗೆ ಆಘಾತ. ಕೃಷ್ಣನ ಪಾಲು ಅಡಕೆತೋಟ ಮತ್ತು ಗದ್ದೆ ತಮಗೇ ದಕ್ಕುವದೆಂದು ನಂಬಿಕೆಯನ್ನಿರಿಸಿಕೊಂಡಿದ್ದವರಿಗೆಲ್ಲ ಕೃಷ್ಣನ ಆಗಮನ ಸ್ವಾಭಾವಿಕವಾಗಿಯೇ ಆಘಾತಕರವಾಗಿರಲು ಸಾಕು. ಮೈಸೂರಿನಲ್ಲಿ ೧೫ ವರ್ಷಗಳ ಕಾಲ ಅಧ್ಯಯನದಲ್ಲಿ ತನ್ನನ್ನು ತೊಡಗಿಸಿಕೊಂಡ ಕೃಷ್ಣನಿಗೆ ಟೊಣ್ಣೇಮನೆಯಂಥ ಕುಗ್ರಾಮದಲ್ಲಿ (ಅಂದು) ಕೃಷಿ ಮಾಡುವದು ಅಷ್ಟು ಸುಲಭವಾಗಿರಲಿಲ್ಲ. ಮೇಲಾಗಿ, ದಾಯಾದಿಗಳ ಕಾಟ. ಕೊನೆಗೆ ಬೇಸತ್ತು ಆಸ್ತಿಯನ್ನೆಲ್ಲ ಮನೆತನದವರಿಗೇ ಒಪ್ಪಿಸಿ, ಹುಲೇಕಲ್ ರಸ್ತೆಗೆ ಹೊಂದಿಕೊಂಡಿರುವ ಶೀಗೇಹಳ್ಳಿಗೆ ತನ್ನ ಸಂಸಾರವನ್ನೆಲ್ಲ ಸ್ಥಳಾಂತರಿಸಿದನಂತೆ.

ಇನ್ನು ನನ್ನ ತಾಯಿಯ ಬಗ್ಗೆ ಸ್ವಲ್ಪ ಮಾಹಿತಿ ನೀಡುವೆ. ನನ್ನ ತಾಯಿ ಭವಾನಿ. ಅವಳ ತವರುಮನೆ ಶಿರಸಿಗೆ ಸಮೀಪವಿರುವ ಬನವಾಸಿ ರಸ್ತೆಗೆ ಹೊಂದಿಕೊಂಡಿರುವ ಹಳದೋಟ. ಅವಳ ಅಪ್ಪನ ಹೆಸರು ದೇವಪ್ಪ. ಹಳದೋಟದ ವೆಂಕಜ್ಜನಿಗೆ ಮನೆ ಅಳಿಯನಾಗಿ ಬಂದವನು ದೇವಪ್ಪ. ದೇವಪ್ಪನಿಗೆ ರಾಮಕೃಷ್ಣ, ಗಣೇಶ, ಪಾರ್ವತಿ, ಭವಾನಿ, ಮುಂತಾದವರು ಮಕ್ಕಳು. ಹಳದೋಟದ

ಸಮೀಪವಿರುವ ಗದ್ದೇಮನೆಯಲ್ಲಿ ಹೊಸ ಅಡಕೆತೋಟ ಮತ್ತು ಗದ್ದೆಯನ್ನು ಸೃಷ್ಟಿಸಿದನಂತೆ. ಆವನಿಗೆ ಕೃಷಿಯಲ್ಲಿದ್ದ ಆಸಕ್ತಿಯನ್ನು ಕುರಿತು ನನ್ನ ತಾಯಿ ಮತ್ತು ಅವಳ ಅಕ್ಕ ಪಾರ್ವತಿ ಆಗಾಗ ನನ್ನ ಎದುರು ಹೇಳುತ್ತಿದ್ದರು. ಪಾರ್ವತಿ ಯನ್ನು ಕುಳುವೆಯ ಭಟ್ಟರ ಮನೆತನದ ವರನಿಗೆ ಲಗ್ನಮಾಡಿಕೊಟ್ಟಿದ್ದರು. ಒಬ್ಬ ಗಂಡುಮಗುವಿನ ತಂದೆಯಾದ ನಂತರ ದುರ್ದೈವದಿಂದ ಪಾರ್ವತಿಯ ಪತಿ ಮರಣ ಹೊಂದಿದ. ನನ್ನ ತಾಯಿಗೆ ಇನ್ನೊಬ್ಬ ಹಿರಿಯ ಅಕ್ಕ ಇದ್ದಳು. ಅವಳನ್ನು ನಾವು ಚಿಕ್ಕವರು 'ದೊಡ್ಡದೊಡ್ಡಮ್ಮ' ಎಂದು ಕರೆಯುತ್ತಿದ್ದೆವು. ಅವಳನ್ನು ಹಳದೋಟದ ಸಮೀಪವಿರುವ ಕೆರೆಕೈ ಭಟ್ಟರ ಮನೆಗೆ ಲಗ್ನಮಾಡಿಕೊಟ್ಟಿದ್ದರು. ಲಗ್ನವಾದಕೂಡಲೇ ಅವಳ ಗಂಡನೂ ಮೃತನಾದನಂತೆ. ಹೀಗಾಗಿ, ನಾನು ಅವಳನ್ನು ನೋಡಿದ ನೆನಪು ಕೆಂಪು ಸೀರೆಯ ಅಮ್ಮನನ್ನಾಗಿ. ನಾನು ಸುಮಾರು ೫ ವರ್ಷದ ಬಾಲಕನಿದ್ದಾಗ ಆ ದೊಡ್ಡದೊಡ್ಡಮ್ಮನೂ ಸತ್ತ ನೆನಪು ನನಗಿದೆ. ದೇವಪ್ಪನ ಹಿರಿಯ ಮಗ ರಾಮಕೃಷ್ಣ ಹಳದೋಟದ ಸಮೀಪದ ಹಲಸಿನಕೈಗೆ ಹೋಗಿ ನೆಲೆಸಿದ. ಹದಿನಾಲ್ಕು ಮಕ್ಕಳನ್ನು ದೇವರು ಆವನಿಗೆ ಕರುಣಿಸಿದರೂ ಒಬ್ಬನೂ ಬದುಕಿ ಉಳಿಯದೇ ಇದ್ದುದು ಅವನ ದುರ್ದೈವ. ದೇವಪ್ಪನ ಇನ್ನೊಬ್ಬ ಮಗ ಗಣೇಶನಿಗೆ ವೆಂಕಟ್ರಮಣ, ನಾರಾಯಣ, ತ್ರಿವೇಣಿ, ನಾಗವೇಣಿ, ದೇವರು, ಪುರಂದರ, ನರಸಿಂಹ, ಲಕ್ಷ್ಮಣ ಮತ್ತು ಜನಾರ್ದನ ಎಂಬ ಒಟ್ಟು ೯ ಮಕ್ಕಳು. ಅವರಲ್ಲಿ ವೆಂಕಟ್ರಮಣ ಮತ್ತು ನರಸಿಂಹ ಮೃತರಾಗಿದ್ದಾರೆ. ನರಸಿಂಹ ಔರಂಗಾಬಾದಿನ ಕಾಲೇಜಿನಲ್ಲಿ ಇಂಗ್ಲಿಷ್ ಪ್ರಾಧ್ಯಾಪಕನಾಗಿದ್ದ. ತೀರ ಇತ್ತೀಚೆಗೆ (೧-೧೨-೧೯೯೭) ಮೃತನಾದ. ಈ ೯ ಮಕ್ಕಳಿಗೆ ತಾಯಿಯಾದವಳು ಮಹಾದೇವಿ. ಇದೆಲ್ಲ ನನ್ನ ತಾಯಿಯ ತವರಿನ ಪೂರ್ವ ವೃತ್ತಾಂತ.

ನನ್ನ ತಂದೆ ತನ್ನ ಕುಟುಂಬವನ್ನು ಟೊಣ್ಣೇಮನೆಯಿಂದ ಶೀಗೇಹಳ್ಳಿಗೆ ಸ್ಥಳಾಂತರಿಸಿದರೆಂದು ಹಿಂದೆ ಹೇಳಿದ್ದೆನಷ್ಟೆ! ಶೀಗೇಹಳ್ಳಿ ಮಠದ ಶಿವಾನಂದ ಸ್ವಾಮಿಗಳು ತಮ್ಮ ತಪೋಮಹಿಮೆ ಮತ್ತು ವಿದ್ವತ್ತಿಗಾಗಿ ಉತ್ತರಕನ್ನಡ ಜಿಲ್ಲೆ ಯಲ್ಲಿ ಪ್ರಸಿದ್ಧರಾಗಿದ್ದರು. ಅವರು ವಿದ್ವಾಂಸರನ್ನು ಮನ್ನಿಸುತ್ತಿದ್ದರು. ಹೀಗಾಗಿ ತಂದೆಯವರನ್ನು ಅವರು ಸಂಸ್ಕೃತ ಪಾಠಶಾಲೆ ನಡೆಸಲು ಅಲ್ಲಿಗೆ ಆಮಂತ್ರಿಸಿದರು. ಕೃಷ್ಣಭಟ್ಟರಾಗಿದ್ದ ನಮ್ಮ ತಂದೆಯವರು ಮೈಸೂರಿನಲ್ಲಿ ವ್ಯಾಕರಣಶಾಸ್ತ್ರ ಶಿರೋಮಣಿಗಳಾದಾಗಿನಿಂದ ಕೃಷ್ಣಶಾಸ್ತ್ರಿಗಳಾಗಿದ್ದರು. ಶೀಗೇಹಳ್ಳಿಯಲ್ಲಿ ಪಾಠ ಪ್ರವಚನಗಳನ್ನು ಮಾಡುವಾಗ ನಮ್ಮ ತಂದೆಯವರಿಗೆ ಬಹು ಅಪರೂಪದ ವ್ಯಕ್ತಿ ಗಳೊಬ್ಬರು ಶಿಷ್ಯರಾಗಿದ್ದರು. ಅವರೇ ಆನಂತರದ ವರ್ಷಗಳಲ್ಲಿ ಪ್ರಖ್ಯಾತರಾದ ಭಗವಾನ್ ಶ್ರೀಧರ ಸ್ವಾಮಿಗಳು. ಶೀಗೇಹಳ್ಳಿಯಲ್ಲಿರುವಾಗ ಅವರಿನ್ನೂ ಬಾಲ ಸನ್ಯಾಸಿಗಳಾಗಿದ್ದರು. ಬಾಲ್ಯದಿಂದಲೇ ಅವರು ಸಾಂಸಾರಿಕ ವಿಷಯದಲ್ಲಿ ವಿರಕ್ತ ರಾಗಿದ್ದರು. ಅಧ್ಯಯನದಲ್ಲಿ ಅವರಿಗೆ ಅಪಾರ ಆಸಕ್ತಿ. ಶೀಗೇಹಳ್ಳಿಯ ಕೆರೆಯ

ದಂಡೆಯ ಮೇಲೆ ಸದಾ ಧ್ಯಾನಮಗ್ನರಾಗಿರುತ್ತಿದ್ದರಂತೆ. ನಮ್ಮ ತಾಯಿಯ ಹತ್ತಿರ, "ಅಮ್ಮಾ ಒಂದು ತಟ್ಟೆ ಮಜ್ಜಿಗೆ ಕೊಡಿ" ಎಂದು ಹೇಳಿ ಇಸಿದುಕೊಂಡು. ಕೆಲವು ದಿನ ಕೇವಲ ಮಜ್ಜಿಗೆ ಕುಡಿದು ಬದುಕುತ್ತಿದ್ದರಂತೆ. ಆ ಬಾಲ ಸನ್ಯಾಸಿಯ ಮುಖ ತೇಜಃಪುಂಜವಾಗಿತ್ತೆಂದು ನಮ್ಮ ತಾಯಿ ಹೇಳುತ್ತಿದ್ದಳು. ಇದಕ್ಕೂ ಹೆಚ್ಚಿನ ಶೀಗೇಹಳ್ಳಿಯಲ್ಲಿಯ ವೃತ್ತಾಂತ ನನಗೆ ತಿಳಿಯದು.

ನಮ್ಮ ದೇಶದಲ್ಲಿ ೧೯೩೦ ರ ದಶಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ ಬಹು ಜೋರಾಗಿ ಸಾಗಿತ್ತು. ೧೯೧೯ ರಿಂದ ಅಂದರೆ ಪ್ರಥಮ ಜಾಗತಿಕ ಯುದ್ಧ ಮುಗಿದಾಗಿನಿಂದ ೧೯೪೭ ರವರೆಗೆ ಅಂದರೆ ಸ್ವಾತಂತ್ರ್ಯ ದೊರಕುವವರೆಗೆ, ಸ್ವಾತಂತ್ರ್ಯ ಸಂಗ್ರಾಮ ಅಂತಿಮ ಘಟ್ಟವನ್ನು ತಲುಪಿತ್ತು. ಮಹಾತ್ಮಾ ಗಾಂಧಿಯವರ ಮುಖಂಡತ್ವದಲ್ಲಿ ಅಹಿಂಸಾತ್ಮಕ ಅಸಹಕಾರ ಚಳುವಳಿ ರಾಷ್ಟ್ರಾದ್ಯಂತ ವ್ಯಾಪಿಸಿತ್ತು. ಈ ಮೂರನೇ ಹಂತದಲ್ಲಿ ಪೂರ್ಣ ಸ್ವರಾಜ್ಯವೇ ದೇಶಭಕ್ತರ ಗುರಿಯಾಗಿತ್ತು. ಮಹಾತ್ಮಾ ಗಾಂಧಿಯವರು ೧೯೩೦ ರಲ್ಲಿ ಕಾಯದೆ ಭಂಗ ಚಳವಳಿಯನ್ನು ಪ್ರಾರಂಭಿಸಿದರು. ಆ ಸಂದರ್ಭದಲ್ಲಿ ಕೇವಲ ದೇಶದ ನೇತಾರರಷ್ಟೇ ಅಲ್ಲ, ಜನಸಾಮಾನ್ಯರೂ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿದರು. ಶಿರಸಿಯಲ್ಲಿಯೂ ಸ್ವಾತಂತ್ರ್ಯಾಂದೋಲನದ ಚಟುವಟಿಕೆಗಳು ಬಿರುಸಿನಿಂದ ನಡೆಯತೊಡಗಿದವು. ಆಂದೋಲನದಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡಿದ್ದ ಮೋಟಿನ್ಸರದ ತಿಮ್ಮಣ್ಣ ಹೆಗಡೆಯವರು ನಮ್ಮ ತಂದೆಯವರನ್ನು ಶಿರಸಿಗೆ ಬಂದು ನೆಲೆಸುವಂತೆ ಒತ್ತಾಯಿಸಿದರಂತೆ. ಕುಟುಂಬ ಶಿರಸಿಗೆ ಬಂದು ನೆಲೆಸಿದ್ದೂ ಆಯಿತು. ಸ್ವಾತಂತ್ರ್ಯಾಂದೋಲನದಲ್ಲಿ ನಮ್ಮ ತಂದೆಯವರೂ ಸಕ್ರಿಯವಾಗಿ ಭಾಗವಹಿಸಿದರು. ತಾವು ಭೂಗತರಾಗಿದ್ದ ಸಂದರ್ಭದಲ್ಲಿ, ಮೈಸೂರಿನಿಂದ ಬರುವಾಗ ತಂದಿದ್ದ ಎರಡು ಅಮೂಲ್ಯವಾದ ವಜ್ರದ ಹರಳುಗಳನ್ನು ನನ್ನ ತಾಯಿಯ ಸಮೀಪದ ಸಂಬಂಧಿಗಳೊಬ್ಬರ ಹತ್ತಿರ ಭದ್ರವಾಗಿರಿಸಿಕೊಳ್ಳಲೆಂದು ಕೊಟ್ಟಿದ್ದರಂತೆ. ಆದರೆ ನಮ್ಮ ತಂದೆ ೧೯೪೨ ರ ಸುಮಾರಿಗೆ ಆಕಸ್ಮಿಕವಾಗಿ ನಿಧನರಾದ ನಂತರ ನಮ್ಮ ತಾಯಿಗೆ ಆ ವಜ್ರಗಳನ್ನು ಇರಿಸಿಕೊಂಡ ವ್ಯಕ್ತಿ ಕೊಡಲೇ ಇಲ್ಲ ಎಂದು ನಮ್ಮ ತಾಯಿ ಬಹು ವ್ಯಥೆಪಟ್ಟು ಹೇಳುತ್ತಿದ್ದಳು. ಆ ವಜ್ರದ ಹರಳುಗಳು ಅವಳ ಹತ್ತಿರ ಇದ್ದಿದ್ದಾಗಿದ್ದರೆ, ಅವಳ ನಂತರದ ಬದುಕು ಅಷ್ಟೊಂದು ಕಠೋರವಾಗುತ್ತಿರಲಿಲ್ಲ. ನಾನು ೧೯೪೦ ರಲ್ಲಿ ಜನಿಸುವ ಮೊದಲೇ ಮನೆಯಲ್ಲಿ ಹಿರಿಯಕ್ಕನಾಗಿ ಸೀತಾ ಜನಿಸಿದ್ದಳು. ನನಗೂ ಅವಳಿಗೂ ಸುಮಾರು ೧೫ ವರ್ಷಗಳ ಅಂತರ. ಅಂದರೆ ಅವಳು ಸುಮಾರು ೧೯೨೫ ರಲ್ಲೇ ಜನಿಸಿರಬೇಕು. ನಂತರ ಜನಿಸಿದವರು ಕ್ರಮವಾಗಿ, ಗಂಗಾ, ಪರಮೇಶ್ವರ ಮತ್ತು ಮೃಡಾನಿ (ಮೃಣಾಲಿನಿ). ಗಂಗಾ ಸುಟ್ಟುಕೊಂಡು ಮತ್ತು ಪರಮೇಶ್ವರ ಮೈಲಿಬೇನೆಯಿಂದ ಮಡಿದರೆಂದು ಕೇಳಿದ್ದೇನೆ. ಹೀಗಾಗಿ, ಮುಂದೆ

ಜೀವನ ಸಾಗಿಸಿದ ಮಕ್ಕಳೆಂದರೆ- ಸೀತಾ, ಮೃಡಾನಿ ಮತ್ತು ನಾನು. ೧೯೪೦ ರ ಮುಂಚೆ ಇದ್ದೊಬ್ಬ ಮಗನು ಸತ್ತಿದ್ದರಿಂದ ನಮ್ಮ ತಂದೆ-ತಾಯಿಗಳ ಜೀವನ ಬರಡಾದಂತೆ ಭಾಸವಾಯಿತು. ಅಂದಿನ ಕಾಲವೇ ಹಾಗೆ. ಗಂಡು ಸಂತತಿ ಇಲ್ಲದವರಿಗೆ ಸದ್ಗತಿ ಇಲ್ಲ ಎಂಬುದೇ ದೃಢವಾದ ನಂಬಿಕೆ. ಅದರಲ್ಲೂ, ಸಂಪ್ರದಾಯಸ್ಥ ಕುಟುಂಬ; ಕೇಳಬೇಕೆ! ನಮ್ಮ ತಂದೆಗೆ ಸಿಟ್ಟು ಜಾಸ್ತಿ ಎಂದು ನನ್ನ ತಾಯಿ, ಅಕ್ಕ ಮತ್ತು ತಾಯಿಯ ಸಂಬಂಧಿಕರು ಹೇಳುತ್ತಿದ್ದರು. ಸಿಟ್ಟಿನಲ್ಲಿದ್ದಾಗ ಹೆಣ್ಣು ಮಕ್ಕಳಿಗೆ ಸಾಕಷ್ಟು ಲತ್ತೆಗಳು ಬೀಳುತ್ತಿದ್ದವಂತೆ. ಈ ಎಲ್ಲ ಹಿನ್ನೆಲೆಯಲ್ಲಿ ೧೯೪೦ ರ ಮಾರ್ಚ್ ತಿಂಗಳ ೧೭, ರವಿವಾರದಂದು ನಾನು ಜನಿಸಿದೆ. ನನ್ನ ತಾಯಿ ಹೇಳಿದ ಘಟನೆಯೊಂದನ್ನು ಸ್ಮರಿಸಿಕೊಂಡರೆ, ನಾನು ಜನಿಸುವ ಮೊದಲೇ, ತಾಯಿಯ ಉದರದಲ್ಲಿಯೇ ಸಾಯಬೇಕಿತ್ತು. ನನ್ನನ್ನು ಗರ್ಭದಲ್ಲಿರಿಸಿಕೊಂಡಾಗ ನನ್ನ ತಾಯಿಯನ್ನು ಒಂದು ಆಕಳು ಹೊತ್ತು, ಕೆಡವಿ, ತುಳಿಯಿತಂತೆ. ಆಗ ಅವಳು ಸಾಯುವ ಸ್ಥಿತಿಯಲ್ಲಿದ್ದಳಂತೆ. ಸುದೈವದಿಂದ ಬದುಕಿದಳು. ನಾನೂ ಬದುಕಿದೆ.

ನಾನು ಜನಿಸಿದಾಗ ನನ್ನ ತಂದೆ-ತಾಯಿಗಳಿಗೆ ಆದ ಸಂತೋಷ ಅಷ್ಟಿಷ್ಟಲ್ಲವಂತೆ. ಎಲ್ಲ ತಂದೆ-ತಾಯಿಗಳಿಗೂ ಮಕ್ಕಳು ಜನಿಸಿದಾಗ ಉಂಟಾಗುವ ಸಂತೋಷ ಸ್ವಾಭಾವಿಕವಾದದ್ದು ನಿಜ. ಆದರೆ ನನ್ನ ತಂದೆ-ತಾಯಿಗಳಿಗೆ ನನ್ನ ಹುಟ್ಟು ವಿಶೇಷವಾದದ್ದು. ಗಂಡುಮಕ್ಕಳೇ ಮನೆಯಲ್ಲಿಲ್ಲದಾಗ ನನ್ನ ಜನನ ಅವರಿಗೆ ಇಮ್ಮಡಿ ಸಂತೋಷ ನೀಡಿದ್ದು ಸಹಜವಷ್ಟೇ! ಮೃಣಾಲಿನಿ ಅಕ್ಕನಿಗೆ ಜಾತಕವನ್ನೇ ಮಾಡಿಸಿರಲಿಲ್ಲವಂತೆ. ನನ್ನ ಜನ್ಮಕುಂಡಲಿಯನ್ನು ಮಾತ್ರ ಯೋಗ್ಯ ವಿದ್ವಾಂಸರಿಂದ ಮಾಡಿಸಿದನಂತೆ. ಶಿರಸಿಯಲ್ಲಿ ಬನವಾಸಿ ರಸ್ತೆಗೆ ಹೊಂದಿಕೊಂಡಿದ್ದ, ಗೋಲಗೇರಿಗೆ ಹೋಗುವ ಪ್ರಾರಂಭದಲ್ಲಿಯ ಸುಮಾರು ಒಂದು ಎಕರೆ ಸ್ಥಳವನ್ನು ಖರೀದಿಸಿದನಂತೆ. ಆ ಸ್ಥಳಕ್ಕೆ ಸಂಬಂಧಿಸಿದ ಕ್ರೀರ್ವೆ ಹಣವನ್ನೂ ತುಂಬಲಾಗದೆ ನನ್ನ ತಾಯಿ ಆ ಸ್ಥಳವನ್ನು ಪರರಿಗೆ ಕೇವಲ ೨೫೦ ರೂಪಾಯಿಗಳಿಗೆ ನಂತರ ಮಾರಿದಳು. ಆಗ ಭೂಮಿಗೆ ಬೆಲೆಯೇ ಇಲ್ಲ. ಬನವಾಸಿ ರಸ್ತೆಯ ಸುಂಕದ ಕಟ್ಟೆಯ ಎದುರಿನ ಕೆಳಗಿನ ಮನೆಯಲ್ಲಿ ನಾನು ಜನಿಸಿದೆ. ಆಗ ಸುಂಕದ ಕಟ್ಟೆಯಲ್ಲಿ ಗುಮಾಸ್ತರಾಗಿ ಸೂರ್ಯನಾರಾಯಣ ಭಟ್ಟರಿದ್ದರಂತೆ ಅವರು ನನ್ನನ್ನು (ಆಗ ನಾನು ಮಗು ) ಬಹು ಪ್ರೀತಿಯಿಂದ ಎತ್ತಿಕೊಂಡು 'ಗೋಪಾಲಕೃಷ್ಣಮೂರ್ತಿ' ಎಂದು ಕರೆಯುತ್ತಿದ್ದರಂತೆ. ಹಂಚಿನ ಆ ಕೆಳಗಿನ ಮನೆಯನ್ನು ಕೆಡವಿ ಈಗ ಸಿಮೆಂಟ ಕಾಂಕ್ರೀಟ್ ಮನೆಯನ್ನು ಬಿಟ್ಟು ನಮ್ಮ ಕುಟುಂಬ ಅದರ ಸಮೀಪವಿರುವ ಕೆರೆಕೈ ಅನಂತಭಟ್ಟರ ಮನೆಗೆ ಬಂದು ನೆಲೆಸಿತು. ಗಂಡುಮಗುವಾಗಿ ನಾನು ಜನಿಸಿದ ನಂತರ ಒಂದು ಅಡಕೆ ತೋಟವನ್ನು ಖರೀದಿಸಬೇಕೆಂಬ ಆಸೆ ನನ್ನ ತಂದೆಯವರಿಗೆ ಪ್ರಬಲವಾಯಿತಂತೆ. ಶಿರಸಿ-ಸಿದ್ದಾಪುರ ರಸ್ತೆಯ ಬದಿಯಲ್ಲಿ ಶಿರಸಿಗೆ ಸಮೀಪವಿರುವ ಕರಸುಳ್ಳಿಯಲ್ಲಿ ಒಂದು ಆಸ್ತಿಗೆ ಸಂಬಂಧಿಸಿ ವ್ಯವಹಾರ ನಡೆಸಿದ್ದರಂತೆ. ಅದನ್ನು ತೆಗೆದುಕೊಳ್ಳುವ

ಸಿದ್ಧತೆಯಲ್ಲಿಯೂ ಇದ್ದರಂತೆ. ಆದರೆ, 'ತಾನೊಂದು ಬಗೆದರೆ ವಿಧಿ ಇನ್ನೊಂದು ಬಗೆಯಿತು,' ಎಂಬ ಹಾಗೆ, ನನ್ನ ತಂದೆಯವರು ಅಕಸ್ಮಾತ್ತಾಗಿ ಕಾಮಾಲೆ ರೋಗಕ್ಕೆ ಬಲಿಯಾಗಿ ಕೇವಲ ಎಂಟೇ ದಿನಗಳಲ್ಲಿ ಮೃತರಾದರಂತೆ. ಆಗ ಅವರಿಗೆ ವಯಸ್ಸು ೩೦. ನನ್ನ ಹಿರಿಯ ಅಕ್ಕ ಸೀತಾಳ ಲಗ್ನವನ್ನು ಹುಲೇಕಲ್ ರಸ್ತೆಯಲ್ಲಿರುವ ಹೊನ್ನೇಗದ್ದೆಯ ಗೋಪಾಲಕೃಷ್ಣ ಹೆಗಡೆಯವರೊಂದಿಗೆ ಸುದೈವದಿಂದ ಮಾಡಿ ಆಗಿತ್ತು. ಹಿರೇಮಗಳ ಲಗ್ನವನ್ನು ಅನುಕೂಲಸ್ಥರ ಮನೆಗೆ ಕೊಟ್ಟು ವಿವಾಹ ಮಾಡಿದ ಸಂತೃಪ್ತಿ ನನ್ನ ತಂದೆಯವರಿಗೆ ಇತ್ತಂತೆ. ಆಗತಾನೇ ಶಿರಸಿಯಲ್ಲಿ ವೈದ್ಯಕೀಯ ವೃತ್ತಿ ಪ್ರಾರಂಭಿಸಿದ ಕೊಲ್ಲಳ್ಳಿ ಡಾಕ್ಟರರ ಔಷಧಿ ನಮ್ಮ ತಂದೆಯವರ ಪ್ರಾಣ ಉಳಿಸಲು ಪ್ರಯೋಜನವಾಗಲಿಲ್ಲ. ಅವರು ಬಹುಶಃ ೧೯೪೨ರಲ್ಲಿ ಮೃತರಾದರೆಂದು ಕಂಡುಬರುತ್ತದೆ. ಬನವಾಸಿ ರಸ್ತೆಯ ಪಕ್ಕದಲ್ಲಿರುವ ಶ್ಮಶಾನದಲ್ಲಿ ಅವರ ಅಂತ್ಯಕ್ರಿಯೆ ನಡೆಯಿತಂತೆ. ನನ್ನನ್ನೂ ಕರೆದುಕೊಂಡು ಹೋಗಿದ್ದರಂತೆ. "ತಂದೆಯನ್ನು ಸುಟ್ಟುಬಿಟ್ಟರು" ಎಂದು ನನ್ನ ತೊದಲು ನುಡಿಯಲ್ಲಿ ಬಹುದಿನಗಳವರೆಗೆ ನಾನು ಹೇಳುತ್ತಿದ್ದೆನಂತೆ. ಆದರೆ ಈಗ ಅದಾವುದೂ ನೆನಪಿಲ್ಲ. ಆಗ ನಾನು ಕೇವಲ ಎರಡುವರ್ಷದ ಮಗು. ಇನ್ನು ಮುಂದೆ ನಾನು ನಿರೂಪಿಸುವುದು ಶಿರಸಿಯಲ್ಲಿ ತಂದೆಯವರ ಮರಣೋತ್ತರದ ನಮ್ಮ ಜೀವನ.

## ಶಿರಸಿಯಲ್ಲಿಯ ಬಾಲ್ಯದ ನೆನಪುಗಳು

ಈ ಹಿಂದೆ ವಿವರಿಸಿದ ಘಟನೆಗಳಲ್ಲಿ ನನಗೆ ಯಾವುದೊಂದೂ ನೆನಪಿಲ್ಲ. ಏಕೆಂದರೆ ಅವೆಲ್ಲ ನಡೆದದ್ದು ನನಗೆ ಮೂರು ವರ್ಷಗಳಾಗುವ ಮುಂಚೆ. ಮನೆತನದ ಪೂರ್ವ ವೃತ್ತಾಂತವನ್ನೆಲ್ಲ ನಾನು ನಂತರದ ದಿನಗಳಲ್ಲಿ ತಾಯಿ ಮತ್ತು ಅಕ್ಕಂದಿರಿಂದ ಕೇಳಿ ತಿಳಿದುಕೊಂಡಿದ್ದೇನೆ. ಮೂರು ವರ್ಷಗಳಾದ ನಂತರದ ಮತ್ತು ಆರು ವರ್ಷಗಳೊಳಗಿನ ಕೆಲವು ಘಟನೆಗಳು ನನಗೆ ಇಂದಿಗೂ ನೆನಪಿವೆ. ಅವುಗಳಲ್ಲಿ ಅತ್ಯಂತ ಮೊದಲಿನದು ಅಂದರೆ ನನ್ನ ನೆನಪಿನಲ್ಲಿರುವ ಜೀವನದಲ್ಲಿಯ ಪ್ರಥಮ ಘಟನೆಯೆಂದರೆ ಹುಲಿಯ ಪ್ರಸಂಗ. ಆಗ ನನಗೆ ಬಹುಶಃ ಮೂರು ವರ್ಷಗಳು ತುಂಬಿರಬೇಕು. ಇದಕ್ಕಿಂತ ಮೊದಲು ನಡೆದ ಘಟನೆಗಳಾವವೂ ನನಗೆ ನೆನಪಿಲ್ಲ. ತಾಯಿ ನನ್ನನ್ನು ತನ್ನ ತವರುಮನೆಯಾದ ಹಳದೋಟಕ್ಕೆ (ನನ್ನ ಅಜ್ಜನ ಮನೆ) ಕರೆದುಕೊಂಡು ಹೋಗಿದ್ದಳು. ನನ್ನನ್ನು ಟೊಂಕದ ಮೇಲೆ ಎತ್ತಿಕೊಂಡು ಸಂಜೆಯ ಹೊತ್ತಿನಲ್ಲಿ ಹಳದೋಟದಿಂದ ಶಿರಸಿಗೆ ಪ್ರಯಾಣಿಸಿದಳು. ದಾರಿಯಲ್ಲಿ ಕರಡಿಗುಡ್ಡ ಹತ್ತುವಾಗ ಸ್ವಲ್ಪದೂರದಲ್ಲಿ ಹುಲಿಯೊಂದು ಮಲಗಿದ್ದನ್ನು ಅವಳು ಕಂಡು, ಬಹಳ ಹೆದರಿಕೊಂಡು, ಹಾಗೆಯೇ ಮರಳಿ ಹಳದೋಟದ ಕಡೆಗೆ ಜೋರಾಗಿ ಓಡುತ್ತ ಉಸಿರು ಬಿಡುತ್ತ ಸಾಗಿದಳು. ಗುಡ್ಡ ಇಳಿದ ನಂತರ ಕೆರೆಯ ಸಮೀಪದಲ್ಲಿ ಕಬ್ಬಿನ ಆಲೆಮನೆ ನಡೆದಿತ್ತು. ತಾಯಿ ಅಲ್ಲಿದ್ದವರಿಗೆ ಎಲ್ಲವನ್ನೂ ವಿವರಿಸಿದಳು, ಕಬ್ಬಿನ

ಹಾಲು ಕುಡಿದಿದ್ದೂ ಆಯಿತು. ನನಗೆ ಮಾತ್ರ ಹುಲಿ ಕಂಡಿರಲಿಲ್ಲ. ಆ ಪ್ರಾಣಿಯ ಬಗ್ಗೆ ಆಗ ನನಗೆ ಏನೂ ತಿಳಿದಿರಲಿಲ್ಲ. ಒಟ್ಟಿನಲ್ಲಿ ಅದೊಂದು ಭಯಂಕರ ಘಟನೆ. ಅದು ಭಯಂಕರ ವಿಷಯವಾಗಿದ್ದರಿಂದಲೇ ಆ ಘಟನೆ ನನ್ನ ಸ್ಮೃತಿಪಟಲದಲ್ಲಿ ಇನ್ನೂ ಉಳಿದಿರಲು ಸಾಕು. ಇನ್ನೊಂದು ನೆನಪಿನಲ್ಲಿರುವ ಘಟನೆಯೆಂದರೆ ಕೆರೆಕ್ಕೈಯ ನನ್ನ ದೊಡ್ಡದೊಡ್ಡಮ್ಮನನ್ನು, ಅವಳು ಸತ್ತಾಗ ಚಿತೆಯ ಮೇಲೇರಿಸಿದ ದೃಶ್ಯ. ಶಿರಸಿಯಲ್ಲಿ ಕೆರೆಕ್ಕೈ ಅನಂತಭಟ್ಟರ ಮನೆಯಲ್ಲಿರುವಾಗ ಮನೆಯ ಒಳಗಿನ ಕೊಠಡಿಯ ಗೋಡೆಯ ಮೇಲೆ ಒಂದು ದೊಡ್ಡ ಹಾವು ಚಲಿಸುವ ದೃಶ್ಯ ಇನ್ನೂ ನೆನಪಿನಲ್ಲಿದೆ. ಇನ್ನೊಂದು ಘಟನೆ; ಅದು ನನಗೆ ಬೇಡ ಎನಿಸಿದರೂ ಉಲ್ಲೇಖಿಸಲೇಬೇಕು. ಆಗ ನಾನು ಬಹುಶಃ ಐದು ವರ್ಷದವನಿರಬೇಕು. ನಮ್ಮ ಮನೆಯ ಹತ್ತಿರ ಪುರುಷೋತ್ತಮನೆಂಬ ತುಂಟ ಹುಡುಗನಿದ್ದ. ನನಗಿಂತ ಬಹುಶಃ ೨-೩ ವರ್ಷ ದೊಡ್ಡವನಿರಬೇಕು. ಅವನು ನನಗೆ ಪೆಪ್ಪರಮೆಂಟ್ ಕೊಡಲು ಪ್ರಾರಂಭಿಸಿದ. ಕ್ರಮೇಣ, ನನ್ನ ಹತ್ತಿರ ಒಂದು ಬಿಲ್ಲಿ ಕೊಡು, ಎರಡು ಬಿಲ್ಲಿಗಳನ್ನು ಕೊಡು ಎಂದು ಒತ್ತಾಯಿಸತೊಡಗಿದ. ಒಂದು ತಾಮ್ರದ ಡಬ್ಬಿಯಲ್ಲಿ ನನ್ನ ತಾಯಿ ತಾಮ್ರದ ಬಿಲ್ಲಿಗಳನ್ನು ತುಂಬಿ ಇಟ್ಟಿದ್ದನ್ನು ನಾನು ನೋಡಿಕೊಂಡಿದೆ. ಪ್ರತಿದಿನ ತಾಮ್ರದ ಒಂದೆರಡು ಬಿಲ್ಲಿಗಳನ್ನು ಡಬ್ಬಿಯಿಂದ ತಾಯಿಗೆ ಮತ್ತು ಮೃಣಾಲಿನಿ ಅಕ್ಕನಿಗೆ ತಿಳಿಯದ ಹಾಗೆ ತೆಗೆದು ಪುರುಷೋತ್ತಮನಿಗೆ ಕೊಡಲು ಪ್ರಾರಂಭಿಸಿದೆ. ಬಹಳ ದಿನಗಳವರೆಗೆ ಡಬ್ಬಿಯನ್ನು ನನ್ನ ತಾಯಿ ನೋಡದ್ದರಿಂದ ಅವಳಿಗೆ ಪರಿಸ್ಥಿತಿಯ ಅರಿವಾಗಲಿಲ್ಲ. ಕೊನೆಗೂ ನಾನು ಸಿಕ್ಕಿ ಬಿದ್ದೆ. ಒಂದು ದಿನ ಅವಳು ಖಾಲಿಯಾದ ಡಬ್ಬಿಯನ್ನು ನೋಡಿ ಹೌಹಾರಿದಳು. ಬಹಳ ಕಷ್ಟಪಟ್ಟು ಉಳಿಸಿಕೊಂಡ ದುಡ್ಡು ಅದಾಗಿತ್ತು. ಕದ್ದವರು ಯಾರೆಂದು ತಿಳಿಯದೆ ತನ್ನ ಹಣೆಯನ್ನು ನೆಲಕ್ಕೆ ಜಪ್ಪಿ ಕೊಳ್ಳಲು ಪ್ರಾರಂಭಿಸಿದಳು. ಆಗ ನಾನು ಹೆದರಿ ಸತ್ಯಸಂಗತಿಯನ್ನು ತಿಳಿಸಿದೆ. ಅವಳು ಬಹಳ ದುಃಖಿತಳಾಗಿದ್ದಳು. ಆ ಪುರುಷೋತ್ತಮನನ್ನು ಮತ್ತು ಅವನ ತಾಯಿಯನ್ನು ಕರೆದು ವಿಷಯ ತಿಳಿಸಿದಳು. ಅವನ ಹತ್ತಿರವಿದ್ದ ಕೆಲವೇ ಬಿಲ್ಲಿ ಗಳನ್ನು ಮಾತ್ರ ಅವನು ಹಿಂತಿರುಗಿಸಿದ. ಉಳಿದವುಗಳನ್ನೆಲ್ಲ ಅವನು ಖರ್ಚು ಮಾಡಿದ್ದ. ಈ ಘಟನೆಯಿಂದ ಆಗ ನಾನು ಬಹಳೇ ನೊಂದುಕೊಂಡೆ. ಆ ಡಬ್ಬಿ ಯಲ್ಲಿ ಸುಮಾರು ೧೫-೨೦ ರೂಪಾಯಿಗಳ ಮೌಲ್ಯದ ಬಿಲ್ಲಿಗಳಿದ್ದವೆಂದು ನಂತರ ನನಗೆ ತಿಳಿಯಿತು. ಆಗಿನ ಕಾಲದಲ್ಲಿ ೧೫-೨೦ ರೂಪಾಯಿಗಳು ಕಳೆದು ಹೋದ ವೆಂದರೆ ಈಗಿನ ಸಂದರ್ಭದಲ್ಲಿ ಸಾವಿರಾರು ರೂಪಾಯಿ ಕಳೆದಂತೆ. ಅದರಲ್ಲಿಯೂ ಬಡವೆಯಾದ ತಾಯಿಗೆ ಎಷ್ಟು ಸಂಕಟವಾಗಿರಬೇಡ! ಹುಲಿಯ ಪ್ರಸಂಗ, ದೊಡ್ಡ ದೊಡ್ಡಮ್ಮನ ಶವಯಾತ್ರೆ ಮತ್ತು ಚಿತೆ ಏರುವಿಕೆ ಮತ್ತು ಬಿಲ್ಲಿಗಳ ಕಳ್ಳತನ, ಇವೆಲ್ಲ ಭೀಕರ ಘಟನೆಗಳಾಗಿದ್ದರಿಂದ ನಾನು ಚಿಕ್ಕವನಿದ್ದರೂ ಸ್ಮೃತಿಪಟಲದಲ್ಲಿ ಇನ್ನೂ ಅಚ್ಚಳಿಯದೆ ಉಳಿದಿರಲು ಕಾರಣವಾಗಿರಲು ಸಾಕು. ಬಿಲ್ಲಿಗಳನ್ನು ಅಂಗಡಿಯಲ್ಲಿ

ಕೊಟ್ಟರೆ ಪೆಪ್ಪರಮೆಂಟ್ ಸಿಗುತ್ತದೆಂಬ ಕಲ್ಪನೆಯೂ ನನಗಿರಲಿಲ್ಲ. ಆ ಬಿಲ್ಲಿಗಳ ಕಿಮ್ಮತ್ತಾಗಲೀ, ಮಹತ್ವವಾಗಲೀ ನನಗೆ ತಿಳಿದಿರಲಿಲ್ಲ. ಬಿಲ್ಲಿಗಳು ಏನೆಂಬುದೇ ನನಗೆ ತಿಳಿದಿರಲಿಲ್ಲ. ಹೀಗಾಗಿ, ಮುಗ್ಧನಾದ ನಾನು, ಪುರುಷೋತ್ತಮ ಕೇಳಿದಾಗ ಲೆಲ್ಲ ಕೊಡುತ್ತಲೇ ಹೋದೆ. ನನ್ನ ತಾಯಿ ಜೀವನ ನಿರ್ವಹಣೆಗಾಗಿ ಸಾಮಾನ್ಯ ಕೂಲಿಯಂತೆ ಕೆಲಸ ಮಾಡುತ್ತಿದ್ದಳು; ಗದ್ದೆ ಕೊಯ್ಯುವದು, ಅಡಕೆ ಸುಲಿಯುವುದು, ಕಟ್ಟಿಗೆ ಹೊತ್ತು ತರುವದು ಇತ್ಯಾದಿ. ಆಗ ಅವಳು ನನ್ನನ್ನು ಮನೆಯ ಬಾಗಿಲ ಎದುರಿನ ಕಟ್ಟೆಯ ಮೇಲೆ ಕುಳಿತುಕೊಳ್ಳಲು ಹೇಳಿ ಕಟ್ಟಿಗೆ ತರಲು ಹೋಗುತ್ತಿದ್ದಳು. ಅವಳು ಬರುವವರೆಗೂ ನಾನು ಅದೇ ಸ್ಥಳದಲ್ಲಿ ಕುಳಿತುಕೊಂಡಿರುತ್ತಿದ್ದೆ. ನನ್ನ ಮುಗ್ಧತೆ ಮತ್ತು ತಾಳ್ಮೆಯನ್ನು ಮೆಚ್ಚಿ ಅವಳು ನನ್ನನ್ನು ಎತ್ತಿಕೊಂಡು ಮುದ್ದಾಡುತ್ತಿದ್ದಳು. ನನಗೂ ಅಮ್ಮ ಬಂದಳೆಂದರೆ ಬಹಳ ಸಂತೋಷ. ನಾಲ್ಕೈದು ವರ್ಷಗಳಾಗುವವರೆಗೂ ನಾನು ತೊದಲು ಮಾತನಾಡುತ್ತಿದ್ದೆ. ಆದರೆ ಈಗ, 'ಕಂಚಿನ ಕಂಠದ ಉತ್ತಮ ವಾಗ್ಮಿ' ಎಂಬ ಹೆಗ್ಗಳಿಕೆ ನನ್ನದಾಗಿದೆ. ಇವೆಲ್ಲ, ಪ್ರಾಥಮಿಕ ಶಾಲೆಯನ್ನು ಸೇರುವುದಕ್ಕಿಂತ ಮುಂಚೆ ನಡೆದ ಘಟನೆಗಳು.

ಇನ್ನು, ಶಿರಸಿಯಲ್ಲಿ ಪ್ರಾಥಮಿಕ ಶಾಲೆಯನ್ನು ಸೇರಿದ ನಂತರದ ಕೆಲವು ಸಂಗತಿಗಳನ್ನು ಸ್ಮರಿಸಿಕೊಳ್ಳುವೆ. ಮಾರಿಕಾಂಬಾ ದೇವಸ್ಥಾನದ ಆಟ್ಟದ ಮೇಲಿನ ಕನ್ನಡ ಶಾಲೆಗೆ ನನ್ನನ್ನು ೧೯೪೬ ರಲ್ಲಿ ಸೇರಿಸಲಾಯಿತು. ನಾನು ಎರಡನೇ ತರಗತಿ ಓದಿದ್ದು ಈಗಿನ ಉರ್ದು ಶಾಲೆಯ ಹತ್ತಿರದ ಒಂದು ಕಟ್ಟಡದ ಮಹಡಿಯ ಮೇಲೆ. ಮಹಾದೇವ ಮತ್ತು ಮಂಜಾ ಮಾಸ್ತರರು ನನ್ನ ಗುರುಗಳು. ಅವರೆಲ್ಲ ಚಹಾ ಸೇವಿಸುತ್ತ ಬೀಡಿ ಸೇದುತ್ತಿದ್ದರು. ಉಳಿದೆಲ್ಲ ವಿಷಯಗಳಲ್ಲಿ ನನ್ನ ಪ್ರಗತಿ ತೃಪ್ತಿಕರವಾಗಿದ್ದರೂ, ಗಣಿತದಲ್ಲಿ ಮಾತ್ರ ಹಿಂದೆ. ಗಣಿತದಲ್ಲಿ ನನಗೆ ಕೊನೆಯ ವರೆಗೂ ಆಸಕ್ತಿ ಹುಟ್ಟಲೇ ಇಲ್ಲ. ಆದರೂ, ಅಂದು ನನಗೆ ೩೦ ರ ವರೆಗೆ ಮಗ್ಗಿ, ಕಾಲು, ಅರ್ಧ, ಮುಕ್ಕಾಲು, ಎಲ್ಲವನ್ನೂ ಹೇಳಲು ಬರುತ್ತಿತ್ತು. ಪ್ರತಿನಿತ್ಯ ಸಂಜೆ ಮಗ್ಗಿ ಮತ್ತು ಮಂತ್ರಗಳ ಪಠನವನ್ನು ತಾಯಿ ಮಾಡಿಸುತ್ತಿದ್ದಳು. ತನಗೆ ವಿಶೇಷ ಶಿಕ್ಷಣವಿಲ್ಲದಿದ್ದರೂ, ತನ್ನ ಮಗನನ್ನು ವಿದ್ಯಾವಂತನನ್ನಾಗಿ ಮಾಡಬೇಕೆಂಬುದೇ ಅವಳ ಹೆಬ್ಬಯಕೆ. ನನಗೆ ಆಂಗ್ಲ ವಿದ್ಯೆಯನ್ನು ಕಲಿಸಬೇಕೆಂಬುದು ನನ್ನ ತಂದೆಯವರ ಅಪೇಕ್ಷೆ ಆಗಿತ್ತಂತೆ. ಸಂಸ್ಕೃತದಲ್ಲಿ ಪಾಂಡಿತ್ಯ ಜೀವನೋಪಾಯಕ್ಕೆ ತಕ್ಕದಲ್ಲವೆಂಬುದನ್ನು ಬಹುಶಃ ಅವರು ತಮ್ಮ ಅನುಭವದಿಂದಲೇ ಅರಿತುಕೊಂಡಿದ್ದಂತೆ ತೋರುತ್ತದೆ. ಮೂರು ಮತ್ತು ನಾಲ್ಕನೇ ತರಗತಿಗಳನ್ನು ಲಕ್ಷ್ಮೀ ಟಾಕೀಜ ಎದುರಿಗಿನ, ಈಗ ಉರ್ದು ಶಾಲೆಯಾಗಿ ಪರಿವರ್ತನಗೊಂಡ ಕಟ್ಟಡದಲ್ಲಿ ಸಾಗಿಸಿದೆ. ಆಗ ಗಂಗಾಧರ ಸ್ವಾದಿಯವರು ಮುಖ್ಯೋಪಾಧ್ಯಾಯರಾಗಿದ್ದರು. ಅವರನ್ನು ನೋಡಿದರೇ ನಮಗೆಲ್ಲ ಭಯ–ಭಕ್ತಿ ಬರುತ್ತಿತ್ತು. ಅವರದು ಆಕರ್ಷಣೀಯ ವ್ಯಕ್ತಿತ್ವ. ಎತ್ತರದ ನಿಲವು, ದುಂಡಗಿನ ಮೈಕಟ್ಟು, ಶುಭ್ರ ಪಂಜೆ, ನೆಹರೂ

ಶರ್ಟ್, ಇಸ್ತ್ರಿ ಮಾಡಿದ ಬಿಳಿ ಖಾದಿ ಟೊಪ್ಪಿ, ಇವೇ ಗಂಗಾಧರ ಮಾಸ್ತರರ ಬಾಹ್ಯ ಪರಿಚಯ. ಅವರ ಕಂಠ ಬಿರುಸಾಗಿದ್ದು, ಉಚ್ಚಾರ ಬಹು ಸ್ಪಷ್ಟವಾಗಿತ್ತು. ಅವರೊಬ್ಬ ಅಪ್ಪಟ ಗಾಂಧೀವಾದಿ. ನಮ್ಮ ತಾಯಿ ಕೆಲವು ಕಾಲ ಪ್ರೌಢಶಾಲೆಗಳನ್ನೂ ನಡೆಸುತ್ತಿದ್ದರು. ಪ್ರೌಢಶಾಲೆಗೆ ಬೇಕಾದ ಲಾಟಿನ್, ಪಾಟಿ, ಕಡ್ಡಿ ಮುಂತಾದ ಸಾಮಾನುಗಳನ್ನು ಒದಗಿಸುವ ಮೇಲ್ವಿಚಾರಣೆಯನ್ನು ಗಂಗಾಧರ ಮಾಸ್ತರರೇ ಆಗ ನೋಡಿಕೊಳ್ಳುತ್ತಿದ್ದರೆಂದು ಕಾಣುತ್ತದೆ. ಅವರು ನಮ್ಮ ಮನೆಗೆ ಒಂದೆರಡು ಸಲ ಬಂದಿದ್ದರು. ಶಿರಸಿಯಲ್ಲಿ ಪ್ರಾಥಮಿಕ ಶಾಲೆ ಕಲಿಯುವಾಗಿನ ಇನ್ನೂ ಕೆಲವು ಘಟನೆಗಳನ್ನು ನಾನು ನೆನಪಿಸಿಕೊಳ್ಳಬಲ್ಲೆ. ಅನಂತ ಭಟ್ಟರ ದೊಡ್ಡ ಮನೆಯಲ್ಲಿ ನಮ್ಮ ಕುಟುಂಬದ ಹೊರತಾಗಿ ಇನ್ನೂ ನಾಲ್ಕು ಕುಟುಂಬದ ಸದಸ್ಯರು ವಾಸಿಸುತ್ತಿದ್ದರು. ಬಲಕಿನ ಭಾಗದಲ್ಲಿ ಗೋವಿಂದ ಹೆಗಡೆ ಮತ್ತು ಶಾರದಕ್ಕ ಮತ್ತು ಅವರ ಮಕ್ಕಳಾದ ಭಾಲಚಂದ್ರ, ಭಾಲಕೃಷ್ಣ ಮತ್ತು ಭಾಸ್ಕರ, ಎಡ ಪಾರ್ಶ್ವದಲ್ಲಿ ಗೌರಿಶಂಕರ ಜೋಯಿಸರು ಮತ್ತು ಮಗ ರಾಮಣ್ಣ ಮತ್ತು ಜೋಯಿಸರ ಅಳಿಯಂದಿರಾದ ರಾಮಚಂದ್ರ ಭಟ್ಟರು, ಮನೆಯ ಹಿಂದಿನ ಭಾಗದ ಒಂದು ಬದಿಯಲ್ಲಿ ಕೊಪ್ಪದ ಲಕ್ಷ್ಮಕ್ಕ ಮತ್ತು ಇನ್ನೊಂದು ಬದಿಯಲ್ಲಿ ಬೆಳ್ಳೇನಹಳ್ಳಿ ಭಟ್ಟರು ಮತ್ತು ಅವರಿಗೆ ಅಡಿಗೆ ಮಾಡಿ ಬಡಿಸಲು ಭುವನೇಶ್ವರಕ್ಕ. ಒಟ್ಟೂ ಆ ಮನೆಯೇ ಒಂದು ದೊಡ್ಡ ಕುಟುಂಬದಂತಿತ್ತು. ಸಂಸ್ಕೃತ ವಿದ್ವಾಂಸರಾದ ರಾಮಚಂದ್ರ ಭಟ್ಟರು (ಶರ್ಮಾ) ಅಮರಕೋಶದ ಶ್ಲೋಕವನ್ನು ಬಾಯಿಪಾಠ ಮಾಡಿದರೆ, ಶ್ಲೋಕ ಒಂದಕ್ಕೆ ಒಂದು ಚಾಕಲೇಟ್ ನನಗೆ ಕೊಡುತ್ತಿದ್ದರು. ಆಗ ಕಂಠಪಾಠ ಮಾಡಿದ ಕೆಲವೇ ಶ್ಲೋಕಗಳು ಮಾತ್ರ ನನಗೆ ಈಗ ನೆನಪಿನಲ್ಲಿವೆ. ಭಾಸ್ಕರ ನನ್ನ ಆಪ್ತಮಿತ್ರನಾಗಿದ್ದ. ಅದರಂತೆ ರಾಮಚಂದ್ರ ಭಟ್ಟರ ಮಗ ಮಹೇಂದ್ರ ಕೂಡ. ಈಗ ಅವನು ನಿವೃತ್ತ ಶಿಕ್ಷಕ. ಹೆಂಡತಿ ಕೃಷ್ಣವೇಣಿಯೊಂದಿಗೆ ಶಿರಸಿಯಲ್ಲೇ ಸ್ವಂತ ಮನೆಯಲ್ಲಿ ನೆಲೆಸಿದ್ದಾನೆ. ಡಿಪ್ಲೋಮಾ ಇಂಜನಿಯರ್‌ನಾದ ಭಾಸ್ಕರ ನಿವೃತ್ತನಾಗಿ ಶಿರಸಿಯಲ್ಲೇ ಮಡದಿಯೊಂದಿಗೆ ನೆಲೆಸಿದ್ದಾನೆ. ನಾವು ಮೂವರು ಕೂಡಿಯೇ ಆಡುತ್ತಿದ್ದೆವು. ಓಡುವದು, ಜಿಗಿಯುವದು, ಮರ ಹತ್ತುವದು, ಗೋಲಿ ಆಡುವದು, ಹಾಣೆಗೆಂಡು (ಚಿಣಿಪಣಿ), ಹುಡತುತು (ಕಬಡ್ಡಿ) ಮಾವು, ಹಲಸು ಮತ್ತು ಸಂಪಿಗೆಯ ಒಣ ಎಲೆಗಳ ರಾಶಿ ಹಾಕಿ, ಓಡಿಬಂದು ತಲೆಯನ್ನು ನೆಲಕ್ಕೆ ತಾಗಿಸದೆ ಹಿತ್ತಲಲ್ಲಿಯ ಮಹಾಸತಿಯ ಕಲ್ಲಿನ ಹತ್ತಿರ ಹನುಮಂತ ಲಾಗಾ ಹಾಕುವದು, ಕೇಶವೇನ್ ಬಂಗ್ಲೆ ಮತ್ತು ರಾಮತಗ್ಗಿನ (ರಾಮನ ಬೈಲು) ಸುತ್ತಮುತ್ತಲಿನ ಪ್ರದೇಶಗಳಲ್ಲಿಯ ಗೇರುಹಣ್ಣು ಮತ್ತು ಮಾವಿನ ಹಣ್ಣುಗಳನ್ನು ಕೊಯ್ಯುವದು, ಹೀಗೆ ನಮ್ಮ ಕಸರತ್ತು ಒಂದೇ ! ಎರಡೇ ! ಮನೆಯ ಹಿಂದುಗಡೆ ಸ್ವಲ್ಪ ದೂರದಲ್ಲಿ ಆರ್ ಎಸ್.ಎಸ್.ನ ಕವಾಯತು ನಡೆಯುತ್ತಿತ್ತು. ಅದರಲ್ಲಿಯೂ ನಮಗೆ ಆಸಕ್ತಿ. ಅಲ್ಲಿ ಕಾಲಕಾಲಕ್ಕೆ ಮೆಕ್ಕೆಹಣ್ಣಿನ ಪಾಯಸದ ಕಾರ್ಯಕ್ರಮವೂ

ಇರುತ್ತಿತ್ತು. ನನ್ನ ಮಟ್ಟಿಗೆ ಮೆಕ್ಕೆಹಣ್ಣಿನ ಪಾಯಸ ಸವಿಯು ಕಾರ್ಯಕ್ರಮ ಕವಾಯತಿಗಿಂತ ಹೆಚ್ಚು ಇಷ್ಟವಾಗಿತ್ತು. ಸಿಹಿ ತಿನ್ನುವದೆಂದರೆ ನನಗೆ ಮೊದಲಿನಿಂದಲೂ ಬಹಳ ಇಷ್ಟ. ಇತ್ತೀಚೆಗೆ ಸಿಹಿ ತಿನ್ನುವದನ್ನು ಬಹಳ ಕಡಿಮೆ ಮಾಡಿದ್ದೇನೆ ಎಂಬುದು ಗಮನಾರ್ಹ. ನನ್ನ ಮುಂದಿನ ಜೀವನದಲ್ಲಿ ನಾನೊಬ್ಬ ಪ್ರಸಿದ್ಧ ಆಟಗಾರನಾಗಲು ಶಿರಸಿಯಲ್ಲಿಯ ನನ್ನ ಬಾಲ್ಯದ ಚಟುವಟಿಕೆಗಳೇ ಅಡಿಪಾಯವೆಂದು ಖಚಿತವಾಗಿ ಹೇಳಬಹುದು. ೧೯೪೭ ರ ಅಗಸ್ಟ್ ೧೫ ರಂದು ಭಾರತಕ್ಕೆ ಸ್ವಾತಂತ್ರ್ಯ ದೊರೆತಾಗ ಶಾಲೆಯ ಹುಡುಗರಿಗೆಲ್ಲ ದೊಡ್ಡ ಮೈಸೂರುಪಾಕದ ತುಂಡನ್ನು ಕೊಟ್ಟಿದ್ದು, ಅದನ್ನು ನಾನು ನನ್ನ ತಾಯಿಯೊಂದಿಗೆ ಸವಿದಿದ್ದು ನನ್ನ ಮನಸ್ಸಿನಲ್ಲಿ ಇನ್ನೂ ಹಸಿರಾಗಿ ಉಳಿದಿದೆ. ದೇಶದ ಪಾರತಂತ್ರ್ಯ ಮತ್ತು ಸ್ವಾತಂತ್ರ್ಯದ ಬಗ್ಗೆ ಹೆಚ್ಚಿನ ಕಲ್ಪನೆ ನನಗಿರಲಿಲ್ಲ. ಆದರೂ ಒಂದು ರೀತಿಯ ಸಂತೋಷ.

ಶಿರಸಿಯಲ್ಲಿ ಜೀವನ ನಡೆಸುವದು ನಮ್ಮ ತಾಯಿಗೆ ಬಹಳ ಕಠಿಣವೆನಿಸ ತೊಡಗಿತು. ಕುಟುಂಬದ ನಿರ್ವಹಣೆಗಾಗಿ ಧಾರವಾಡಕ್ಕೆ ಪ್ರಯಾಣ ಮಾಡ ಬೇಕಾಯಿತು. ನಮಗೆ ಆಪ್ತನಾಗಿದ್ದ ಕುಳುವೆಯ ನಿವಾಸಿಯಾದ ಮಹಾಬಲ ಭಾವನು ಧಾರವಾಡದ ಆದರ್ಶ ವಿದ್ಯಾರ್ಥಿ ನಿಲಯದ ಬಗ್ಗೆ ಮಾಹಿತಿ ನೀಡಿ, ನಾವು ಅತ್ತಕಡೆ ಪ್ರಯಾಣಿಸಲು ಕಾರಣನಾದ. ಧಾರವಾಡದಲ್ಲಿಯ ನನ್ನ ಜೀವನ ಕುರಿತು ಇಲ್ಲಿ ಬರೆಯುತ್ತಲಿರುವೆ.

## ಧಾರವಾಡದ ಆದರ್ಶ ವಿದ್ಯಾರ್ಥಿ ನಿಲಯದಲ್ಲಿ

ದೇಶಕ್ಕೆ ಸ್ವಾತಂತ್ರ್ಯ ದೊರಕಿ ಆಗ ತಾನೇ ಎರಡು ಸಂವತ್ಸರಗಳು ಉರುಳಿದ್ದವು. ಸ್ವಾತಂತ್ರ್ಯ ನೋಡುವ ಭಾಗ್ಯ ನನ್ನ ತಂದೆಯವರಿಗೆ ಲಭಿಸಲಿಲ್ಲ. ಅನೇಕ ದೇಶ ಭಕ್ತರು ದೇಶ ಸ್ವತಂತ್ರವಾಗುವ ಕನಸು ಕಂಡರೇ ವಿನಃ, ದೇಶ ಸ್ವತಂತ್ರವಾಗಿದ್ದನ್ನು ಕಾಣಲು ಉಳಿಯಲಿಲ್ಲ. ನಾನು ಮತ್ತು ನನ್ನ ತಾಯಿ (ಅಮ್ಮ) ಭವಾನಿ, ೧೯೪೯ ರ ಮಧ್ಯದಲ್ಲಿ ಶಿರಸಿಯಿಂದ ಹೊರಟು ಧಾರವಾಡದ ಆದರ್ಶ ವಿದ್ಯಾರ್ಥಿ ನಿಲಯದಲ್ಲಿ ಬಂದು ತಂಗಿದೆವು. ನಮ್ಮೊಂದಿಗೆ ನನ್ನ ಅಕ್ಕ ಮೃಣಾಲಿನಿ ಬಂದು ನೆಲೆಸಿದ್ದು ಧಾರವಾಡದ ವನಿತಾ ಸೇವಾ ಸಮಾಜದಲ್ಲಿ. ಅಮ್ಮ ನಮ್ಮನ್ನು ಧಾರವಾಡಕ್ಕೆ ಕರೆದು ಕೊಂಡು ಹೋದ ಕಾರಣ – ಜೀವನೋಪಾಯ; ಸ್ವತಂತ್ರವಾದ ಆದರ್ಶ ಜೀವನ ಸಾಗಿಸಲು; ಬಾಳಿನಲ್ಲಿ ಬೆಳಕನ್ನು ಕಾಣಲು. ಆದರೆ ಈ ಆದರ್ಶಗಳ ಕಲ್ಪನೆ, ಒಂಬತ್ತು ವರುಷಗಳ ಬಾಲಕನಾದ ನನಗೆ ಸ್ವಲ್ಪವೂ ಇಲ್ಲ ಅಮ್ಮನನ್ನು ಹಿಂಬಾಲಿಸಿ ಅವಳ ವಾತ್ಸಲ್ಯಸಂಪಾದಿಸುವದೊಂದೇ ನನ್ನ ಗುರಿ. ಆದರೆ ಜೀವನದುದ್ದಕ್ಕೂ ಅಳಲನ್ನು ಅನುಭವಿಸಿದ ನನ್ನ ಅಮ್ಮನಲ್ಲಿ ಮಾತ್ರ ಆದರ್ಶಗಳು ಸಾಕಷ್ಟು ಆಳವಾಗಿ ಬೇರೂರಿದ್ದವೆಂಬ ಸಂಗತಿ ನನಗೆ ತಿಳಿದಿದ್ದು. ನನ್ನ ಭವಿಷ್ಯದ ಬಗ್ಗೆ ನನಗೆ ಅರಿವು ಮೂಡಿದಾಗ. ನಿಲಯದ ವಿದ್ಯಾರ್ಥಿಗಳಿಗೆಲ್ಲ ನನ್ನ ತಾಯಿ ಅಚ್ಚುಮೆಚ್ಚು. ಬಹುಶಃ ನನಗಿಂತ

ಅವರೇ ಅವಳನ್ನು ಹೆಚ್ಚು ಪ್ರೀತಿಯಿಂದ ಕಾಣುತ್ತಿದ್ದರು. ಮಕ್ಕಳಿಗೆಲ್ಲ ರುಚಿರುಚಿಯಾದ ಅಡಿಗೆ ಮಾಡಿ, ವಾತ್ಸಲ್ಯದಿಂದ ಬಡಿಸುತ್ತಿದ್ದುದೇ ಅದಕ್ಕೆ ಕಾರಣ. ದತ್ತ, ರಾಘು, ಗುರುರಾಜ, ಶಂಕರ, ಸಾಂಬಸದಾಶಿವ, ವೆಂಕಣ್ಣ, ರಾಮು, ಕರಡಿಗುಡ್ಡ, ನಾಗೇಶ, ಪಿ.ಟಿ ಮೋಹನ, ರವಿ, ಪ್ರಕಾಶ, ಮುದುಕಣ್ಣ, ಅನಂತ (ನಾನು), ಎಂದರೆ, ಎಲ್ಲರೂ ಅಣ್ಣ-ತಮ್ಮಂದಿರಂತೆ ಇದ್ದೆವು. ಕಳೆದ ೩೩ ವರ್ಷಗಳಿಂದ ನಾನು ಮಾತೃವಿಯೋಗ ಅನುಭವಿಸುತ್ತಲಿದ್ದೇನೆ. ಈ ಅಣ್ಣಂದಿರನ್ನು ನಾನು ಅಪರೂಪಕ್ಕೆ ಭೆಟ್ಟಿಯಾದಾಗ, ಭವಾನಿ ಬಾಯಿಯವರನ್ನು ಮುಕ್ತಕಂಠದಿಂದ ಪ್ರಶಂಸಿಸಿ ಖಿನ್ನರಾಗುತ್ತಾರೆ. ಅಮ್ಮನಿಲ್ಲದ ನಮ್ಮೆಲ್ಲರ ಬಾಳು ಶೂನ್ಯ.

ನಾವೆಲ್ಲ ನಿಲಯದ ಮಕ್ಕಳು ಪ್ರತಿ ಆದಿತ್ಯವಾರವೂ ಮುಷ್ಟಿಫಂಡಿಗೆ ಹೋಗುವದು ಒಂದು ಪದ್ಧತಿ. ಬೇಡುವದರಲ್ಲಿ ನಮಗಾವ ಸಂಕೋಚ ಭಾವನೆಯೂ ಇರಲಿಲ್ಲ. ಬೀದಿಗಳಲ್ಲಿ ಅಲೆದು ಹೆಚ್ಚೆಚ್ಚು ಧಾನ್ಯವನ್ನು ಒಟ್ಟು ಮಾಡಿಕೊಂಡು ಬಂದರೆ ನಮಗೆಲ್ಲ ಸಂತಸ. ನಮ್ಮ ಈ ಭಿಕ್ಷುಕ ಸಂಘದ ಹಿರಿಯ ಮುಖಂಡರೂ ಕಾರ್ಯಕರ್ತರೂ ಆಗಿದ್ದವರು ಅರ್ಜಣಗಿ ರಾಮಣ್ಣನವರು. ಅವರೊಬ್ಬ ಸ್ವಾತಂತ್ರ್ಯ ಯೋಧರೂ ಅಪ್ಪಟ ದೇಶಭಕ್ತರೂ ಆಗಿದ್ದರು. ನಗರಸಭೆಯ ಬೇರೆ ಬೇರೆ ವಾರ್ಡ್‌ಗಳಿಗೆ ಬೇರೆ ಬೇರೆ ಹುರಿಯಾಳುಗಳಿರುವಂತೆ, ಧಾರವಾಡದ ಬೇರೆ ಬೇರೆ ವಾರ್ಡ್‌ಗಳಲ್ಲಿ ಮುಷ್ಟಿಫಂಡ ಸಂಗ್ರಹಿಸುವ ಹುರಿಯಾಳು ಮಕ್ಕಳುಗಳು ನಾವಾಗಿದ್ದೆವು. ಒಬ್ಬನ ಕಕ್ಷೆಯಲ್ಲಿ ಮತ್ತೊಬ್ಬನಿಗೆ ಪ್ರವೇಶವಿರಲಿಲ್ಲ.

ಪ್ರಾತಃಕಾಲದಲ್ಲಿ ಸ್ನಾನ, ಸಂಧ್ಯಾವಂದನೆ, ಸೂರ್ಯನಮಸ್ಕಾರ; ಸರಿಯಾಗಿ ಹತ್ತು ಗಂಟೆಗೆ ನಿಯಮಿತ ಊಟ; ನಂತರ, ಶಾಲೆ, ಆಟ; ಸಂಜೆ– ಸಂಧ್ಯಾವಂದನೆ, ಊಟ, ಅಧ್ಯಯನ ಮತ್ತು ಮಲಗುವ ಮುನ್ನ ಪ್ರಾರ್ಥನೆ (ಭಗವದ್ಗೀತೆ ಮತ್ತು ಶ್ರೀರಾಮ ಸ್ತೋತ್ರ). ಇದೇ ನಮ್ಮ ದೈನಂದಿನ ಕಾರ್ಯಕ್ರಮ. ನಿಲಯದ ಮಕ್ಕಳಲ್ಲಿ ನಾನೇ ಚಿಕ್ಕವನಾಗಿದ್ದರಿಂದ, ರಾತ್ರಿ ಪ್ರಾರ್ಥನೆ ಮಾಡುವಾಗ ಆಗಾಗ ತೂಕಡಿಸಿದ್ದು ನನಗೆ ಇನ್ನೂ ಜ್ಞಾಪಕವಿದೆ. ನಿಲಯದ ನೈರ್ಮಲ್ಯ ಕಾಪಾಡಿಕೊಳ್ಳುವದು ಮತ್ತು ನಮ್ಮ ಕೆಲಸಗಳನ್ನು (ಬಟ್ಟೆ ತೊಳೆಯುವದು, ಊಟದ ತಾಟು ತಿಕ್ಕುವದು, ಒಮ್ಮೊಮ್ಮೆ ಅಡಿಗೆ ಮಾಡಿಕೊಳ್ಳುವದು, ಇತ್ಯಾದಿ) ನಾವೇ ಮಾಡಿಕೊಳ್ಳುವದು ನಮ್ಮೆಲ್ಲರ ಕರ್ತವ್ಯವಾಗಿತ್ತು. ನಾವು, ಮಕ್ಕಳೆಲ್ಲ ಬೆಳೆದು, ಸ್ವಾವಲಂಬಿಗಳಾಗಿ ಬದುಕಿ, ರಾಷ್ಟ್ರಾಭಿಮಾನ ಬೆಳೆಸಿಕೊಂಡು, ದೇಶದ ಆಸ್ತಿಯಾಗಬೇಕೆಂಬುದೇ ರಾಮಣ್ಣನವರ ಹಂಬಲ. ಆದರೆ ಈ ಎಲ್ಲ ವಿಷಯಗಳಲ್ಲಿ ನಾನು ಎಷ್ಟು ಮೆಟ್ಟಲುಗಳನ್ನು ಹತ್ತಿದ್ದೇನೆ ಎಂಬುದನ್ನು ಕುರಿತು ಆತ್ಮನಿರೀಕ್ಷಣೆ ಮಾಡಿಕೊಂಡಾಗ, ನನ್ನ ಮನಸ್ಸಿನಲ್ಲಿ ಅದೇಕೋ ಸ್ವಲ್ಪ ಅಳುಕು. ವಾಮನಮೂರ್ತಿಯಂತಿದ್ದ ರಾಮಣ್ಣನವರಿಗೆ ದುರ್ದೈವದಿಂದ ಒಂದೇ ಕಣ್ಣು. ಆದರೆ ಆ ಒಂದು

ಕಣ್ಣು ಎರಡು ಕಣ್ಣುಗಳಿಗಿಂತಲೂ ತೀಕ್ಷ್ಣ. ಅವರಿಗೆ ತಿಳಿಯದಂತೆ ನಾವು ಏನು ಮಾಡಲೂ ಸಾಧ್ಯವಿರಲಿಲ್ಲ. ನಿಲಯದಲ್ಲಿ ಬೆಳಿಗ್ಗೆಯಾಗಲಿ, ಸಂಜೆಯಾಗಲಿ, ತಿಂಡಿ–ತೀರ್ಥಗಳಿಗೆ ಅವಕಾಶವಿಲ್ಲದ್ದರಿಂದ, ಅಪರೂಪಕ್ಕಾದರೂ ನಮ್ಮಲ್ಲಿಯ ಕೆಲವರು ಮಾಳಮಡ್ಡಿಯ ಮಥುರಾಭವನ, ಇಲ್ಲವೆ ವಿಷ್ಣುಭವನಗಳನ್ನು ಹೊಕ್ಕಿದ್ದೂ ಉಂಟು; ಆದರೆ, ನಮ್ಮ ಪ್ರವೇಶ ಮತ್ತು ನಿರ್ಗಮನ, ಕಳ್ಳರ ಹೆಜ್ಜೆಗಳಿಗಿಂತ ಜಾಗರೂಕವಾಗಿರುತ್ತಿತ್ತೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ರಾಮಣ್ಣನವರ ಮತ್ತು ಮಾಸ್ತರರ ಕಣ್ಣು ತಪ್ಪಿಸಿ ಹೊಟೆಲ್ ಪ್ರವೇಶ ಮತ್ತು ನಿರ್ಗಮನ ಸಾಮಾನ್ಯವೇ ?

ನಿಲಯದಲ್ಲಿ ಕಳೆದ ಐದು ವರ್ಷಗಳನ್ನು ನಾನು ಎಂದೂ ಮರೆಯುವಂತಿಲ್ಲ. ನಿಲಯದಲ್ಲಿಯ ಜೀವನ ಸುಖಮಯವಾಗಿತ್ತೆಂದು ನಾನು ಹೇಳುವದಿಲ್ಲ. ಆದರೆ ಬಡಮಕ್ಕಳಿಗೊಂದು ಆಶ್ರಯಸ್ಥಾನ ಆದಾಗಿತ್ತು. ನನ್ನಲ್ಲಿ ಸ್ವಾಭಿಮಾನ, ವಿದ್ಯಾರ್ಹತೆ, ಕಾರ್ಯತತ್ಪರತೆ, ಸ್ನೇಹ ಸ್ವಭಾವ, ಸಾಹಸ, ಛಲ, ಮುಂತಾದ ಅಂಶಗಳು ಕೆಲವುಮಟ್ಟಿಗಾದರೂ ಇದ್ದರೆ, ಅವೆಲ್ಲ ಆದರ್ಶ ವಿದ್ಯಾರ್ಥಿ ನಿಲಯದ ಕೊಡುಗೆ ಎಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಈ ಆದರ್ಶಗಳ ಕಲ್ಪನೆ ಆಗ ನಮಗಿಲ್ಲದಿದ್ದರೂ, ನಮಗೆಲ್ಲ ಸರಿಯಾದ ತರಬೇತಿ ನೀಡಿ, ಈ ಆದರ್ಶಗಳತ್ತ ನಮ್ಮನ್ನೆಲ್ಲ ಮುನ್ನಡೆಸುತ್ತಿದ್ದ ವ್ಯಕ್ತಿ – ಅರ್ಜಣಗಿ ರಾಮಣ್ಣ. ಅವರನ್ನು ಕಂಡರೆ ನಮಗೆಲ್ಲ ಭಯ–ಭಕ್ತಿ. ಕೆಲವು ವರ್ಷಗಳ ಹಿಂದೆ ರಾಮಣ್ಣನವರು ಶಿರಸಿಯಲ್ಲಿಯ ನಮ್ಮ ಮನೆಗೆ ಬಂದಾಗ, ಅವರನ್ನು ಬಹು ದೀರ್ಘ ಕಾಲದ ನಂತರ ಕಾಣುವ ಅವಕಾಶ ಒದಗಿತು. ಆಗಲೇ ಅವರು ೮೦ ರ ಗಡಿಯನ್ನು ದಾಟಿದ್ದರು. ದೇಹ ವಯೋಮಾನಕ್ಕನುಗುಣವಾಗಿ ಸ್ವಲ್ಪ ಕುಗ್ಗಿತ್ತು. ಆದರೆ, ಅದೇ ಉತ್ಸಾಹ, ಅದೇ ನಗುಮುಖ, ಅದೇ ಗಾಂಭೀರ್ಯ, ಅದೇ ಕಾರ್ಯತತ್ಪರತೆ, ಅದೇ ನಿಸ್ವಾರ್ಥ-ಸರಳತನ, ಅವರಲ್ಲಿ ಇನ್ನೂ ಜೀವಂತವಾಗಿದ್ದವು. ಅವರ ಆಗಮನದಿಂದಾಗಿ ನನಗೆ ತುಂಬ ಸಂತೋಷವಾಯಿತು. ಅವರ ಆಶೀರ್ವಾದದಿಂದಾಗಿ, ನಿಲಯದಿಂದ ಹೊರಗೆ ಬಂದ ಮಕ್ಕಳೆಲ್ಲ ಈಗ ದೊಡ್ಡವರಾಗಿ, ತಮ್ಮ ವ್ಯಕ್ತಿತ್ವ ಬೆಳೆಸಿಕೊಂಡು ಸಾರ್ಥಕ ಜೀವನ ಸಾಗಿಸುತ್ತಿದ್ದಾರೆ. ನಾನು ನಿಲಯದಲ್ಲಿದ್ದಾಗ, ಕರ್ನಾಟಕ ಕಾಲೇಜಿನ ಪ್ರಾಚಾರ್ಯರಾಗಿದ್ದ ಶ್ರೀ ವಿ. ಕೆ. ಗೋಕಾಕ, ಕೃಷಿ ಮಹಾವಿದ್ಯಾಲಯದ ಪ್ರಾಚಾರ್ಯರಾಗಿದ್ದ ಮೆಣಸಿನಕಾಯಿ, ಕವಿಗಳಾಗಿದ್ದ ದ. ರಾ. ಬೇಂದ್ರೆ, ಇನ್ನೂ ಅನೇಕ ವಿದ್ವಾಂಸರು ಮತ್ತು ಸ್ವಾತಂತ್ರ್ಯಯೋಧರು ನಿಲಯಕ್ಕೆ ಸಂದರ್ಶನವಿತ್ತು ನಮ್ಮೆಲ್ಲ ಮಕ್ಕಳನ್ನು ಉದ್ದೇಶಿಸಿ ಮಾತನಾಡಿದ್ದು ಇನ್ನೂ ನೆನಪಿದೆ. ಎರಡು ವರ್ಷಗಳ ಹಿಂದೆ ೯೦ ದಾಟಿದ ರಾಮಣ್ಣನವರು ನಿಧನರಾದ ವಾರ್ತೆ ಕೇಳಿದಾಗ, ಬಹಳ ಸಂಕಟಪಟ್ಟೆ; ಹಳೆಯ ನೆನಪುಗಳೆಲ್ಲ ಮರುಕಳಿಸಿದವು.

## ಕೆ. ಇ. ಬೋರ್ಡ್‌ನ ಪ್ರಾಥಮಿಕ ಶಾಲೆಯಲ್ಲಿ

ರೇಲ್ವೆಸ್ಟೇಷನ್ ಸಮೀಪವಿದ್ದ ಆದರ್ಶ ವಿದ್ಯಾರ್ಥಿ ನಿಲಯದಲ್ಲಿ ನಾನು ಮತ್ತು ಅಮ್ಮ ೧೯೪೪ ರಲ್ಲಿ ಪ್ರವೇಶಿಸಿದೆವೆಂದು ಹಿಂದೆ ಹೇಳಿದ್ದೆನಷ್ಟೆ ! ಕೆ. ಇ. ಬೋರ್ಡ್ ಪ್ರಾಥಮಿಕ ಶಾಲೆಯಲ್ಲಿ ನನ್ನನ್ನು ಸೇರಿಸಲಾಯಿತು. ಆಗ ನಾನು ನಾಲ್ಕನೆಯ ತರಗತಿ ವಿದ್ಯಾರ್ಥಿ. ಮಾಳಮಡ್ಡಿಯ ರಾಯರಮಠದ ಸಮೀಪವಿರುವ, ಈಗಿನ ಮಾಧ್ವಮಂಡಲದ ವಿದ್ಯಾರ್ಥಿ ನಿಲಯದ ಕಟ್ಟಡದಲ್ಲಿ ಅಂದು ನಮ್ಮ ಪ್ರಾಥಮಿಕ ಶಾಲೆಯಿತ್ತು. ನಿಲಯದ ಕಟ್ಟಡಕ್ಕೆ ಈ ಶಾಲೆ ತೀರ ಸಮೀಪ. ಮುಳಗುಂದ ಅವರು ನಮ್ಮ ಮಾಸ್ತರರು. ಸಾಮಾನ್ಯ ಮೈಕಟ್ಟು, ಮಣಿದ ದೇಹ ದಲ್ಲಿ ಸ್ವಲ್ಪ ಕುಸಿದ ಕುತ್ತಿಗೆ, ನಸುಗೆಂಪು ಬಣ್ಣ, ಕಾಲಲ್ಲಿ ಜೋಡು, ಅಷ್ಟೊಂದು ಶುಭ್ರವಲ್ಲದ ಪಂಚೆ, ಅಂಗಿ, ಮೇಲೊಂದು ಕೋಟು, ಹಣೆಯ ಮೇಲೆ ಅಕ್ಷಾಂತಿ, ತಲೆ ಮತ್ತು ಚಂಡಿಕೆ (ಜುಟ್ಟ) ಮುಚ್ಚಲು ಕರೆ ಟೊಪ್ಪಿ, ಇವೆಲ್ಲ ಮುಳಗುಂದ ಮಾಸ್ತರರ ಬಾಹ್ಯ ಲಕ್ಷಣಗಳು. ಮುಳಗುಂದ ಮಾಸ್ತರರು ಬಹುದೂರದ ಶುಕ್ರವಾರ ಪೇಟೆ ಕಡೆಯಿಂದ ಮಾಳಮಡ್ಡಿಯ ಶಾಲೆಗೆ ಗುಡ್ಡ ಹತ್ತಿ ಬರಬೇಕಾಗುತ್ತಿದುದರಿಂದ ಬಹಳ ಆಯಾಸವಾದವರಂತೆ ಕಾಣುತ್ತಿದ್ದರು. ನಮಗೆ ಓದಲು, ಬರೆಯಲು ಹೇಳಿ ತಾವು ನಿದ್ರಿಸುತ್ತ ಒಮ್ಮೊಮ್ಮೆ ವಿಶ್ರಾಂತಿ ಪಡೆಯುತ್ತಿದ್ದರು. ಆಯಾಸ ಕಾರಣವೋ ಏನೋ, ಅವರಿಗೆ ಸಿಟ್ಟು ಅಗತ್ಯಕ್ಕಿಂತ ಜಾಸ್ತಿಯಾಗಿತ್ತು. ಹುಡುಗ ರನ್ನು ಹೊಡೆಯುವದರಲ್ಲಿ ಅವರಿಗೆ ಯಾವ ಸಂಕೋಚವೂ ಇರಲಿಲ್ಲ. ಅವರನ್ನು ಕಂಡರೆ ನಮಗೆಲ್ಲ ಭಯ-ಭಕ್ತಿ. ಅವರು ಒಳ್ಳೆಯ ಶಿಕ್ಷಕರಾಗಿದ್ದರು. ನಾಲ್ಕನೆಯ ತರಗತಿಯಲ್ಲಿ ಓದುತ್ತಿದ್ದಾಗಿನ ಒಂದು ಪ್ರಸಂಗ ನನಗೆ ಇನ್ನೂ ನೆನಪಿದೆ. ಏಕೆಂದರೆ ಅದು ಭಯಾನಕ ಪ್ರಸಂಗವಾಗಿತ್ತು. ಪ್ರತಿನಿತ್ಯ ಖೋಲಿಯ ಕಸ ಗುಡಿಸಿ, ಜಮಖಾನಾ ಹಾಸುವದು ವಿದ್ಯಾರ್ಥಿಗಳ ಕೆಲಸವಾಗಿತ್ತು. ಕೆಲವು ವಿದ್ಯಾರ್ಥಿಗಳು ಜಮಖಾನಾ ಹಾಸುತ್ತಲಿದ್ದರು. ನಾನು ಒಂದು ಕಡೆಯಿಂದ ಇನ್ನೊಂದು ಕಡೆ ಜಮಖಾನಾದ ಮೇಲಿಂದ ಹಾರಿಹೋದೆ. ನನಗೆ ಆಘಾತ ಕಾದಿತ್ತು. ಮುಳಗುಂದ ಮಾಸ್ತರರು ಕಬ್ಬಿಣದ ಸಳಿಹಿಡಿದು ನನ್ನೆಡೆಗೆ ಧಾವಿಸಿದರು. ಆಗ ತಕಲಿಯಲ್ಲಿ ನೂಲುವದು ಒಂದು ಮಹತ್ವದ ವಿಷಯವಾಗಿತ್ತು. ಹೀಗಾಗಿ ಹತ್ತಿಯಿಂದ ಕಾಳನ್ನು ಬೇರ್ಪಡಿಸಲು ನಾವು ಕಟ್ಟಿಗೆಯ ಮಣೆ ಮತ್ತು ಕಬ್ಬಿಣದ ಸಳಿಯನ್ನು ಉಪಯೋಗಿಸುತ್ತಿದ್ದೆವು. ಮುಳಗುಂದ ಮಾಸ್ತರರ ಕೈಗೆ ಸಿಕ್ಕಿದ್ದು ಅಂಥ ಒಂದು ಕಬ್ಬಿಣದ ಸಳಿ. ಅವರು ಆ ಸಳಿಯಿಂದ ನನ್ನನ್ನು ಹಾಕಿ ಹಾಕಿ ಬಡಿದರು. ನನ್ನ ಬೆನ್ನುತುಂಬ ಬಾಸುಂಡೆಗಳೆದ್ದವು. ನನಗೆ ಹೊಡೆದ ನಂತರ ಅವರ ಕೋಪ ತಣ್ಣ ಗಾಯಿತು. ಆದರೆ ಈ ಪ್ರಸಂಗ ಅಷ್ಟಕ್ಕೇ ಮುಗಿಯಲಿಲ್ಲ. ನಿಲಯಕ್ಕೆ ಬಂದನಂತರ ನಾನು ಘಟನೆಯನ್ನು ಯಾರಿಗೂ ಹೇಳಲಿಲ್ಲ. ಆದರೆ ಸಂಜೆ ಹೊತ್ತಿನಲ್ಲಿ ನಾನು ಅಂಗಿ ಬಿಚ್ಚಿದಾಗ ಎಲ್ಲರೂ ನನ್ನ ಬೆನ್ನ ಮೇಲಿನ ಬಾಸಳುಗಳನ್ನು ನೋಡಿ, ವಿಷಯ

ತಿಳಿದು ಮರುಗಿದರು. ಇಷ್ಟು ಸಣ್ಣ ತಪ್ಪಿಗೆ ಎಷ್ಟು ದೊಡ್ಡ ಶಿಕ್ಷೆ! ಎಂಬುದೇ ಎಲ್ಲರ ಉದ್ಗಾರವಾಗಿತ್ತು. ರಕ್ತ ಹೆಪ್ಪುಗಟ್ಟಿದ್ದ ನನ್ನ ಬೆನ್ನು ಮರುದಿನ ಮತ್ತೂ ಬಾತಿತ್ತು. ಆಗ ನಿಲಯದ ಕರಡಿಗುಡ್ಡನೆಂಬ ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿದ್ದ ಹಿರಿಯ ವಿದ್ಯಾರ್ಥಿ ನನ್ನನ್ನು ಪ್ರಾಥಮಿಕ ಶಾಲೆಯ ಹೆಡ್ ಮಾಸ್ತರರಾದ ಶ್ರೀ ಪತ್ತಾರ ಅವರ ಹತ್ತಿರ ಕರೆದೊಯ್ದ. ಆ ವಿಷಯವನ್ನು ಮುಂದುವರಿಸಲು ನಾನು ಸರ್ವಥಾ ಬಯಸಿರಲಿಲ್ಲ. ಆದರೆ ಕರಡಿಗುಡ್ಡ ನನ್ನನ್ನು ಒತ್ತಾಯದಿಂದ ಪತ್ತಾರರ ಹತ್ತಿರ ಕರೆದುಕೊಂಡು ಹೋದ. ಪತ್ತಾರ ಮಾಸ್ತರರು ನನ್ನ ಬೆನ್ನು ನೋಡಿ ಗಾಬರಿ ಆದರು. ಅವರು ಮುಳಗುಂದ ಮಾಸ್ತರರನ್ನು ಕರೆಸಿ, "ಏನ್ರೀ ಮುಳಗುಂದ ಮಾಸ್ತರ್ರೆ, ಸಣ್ಣ ಹುಡಗನ್ನ ದನ ಬಡದಾಂಗ ಬಡದೀರಲ್ರೀ. ಅಂವ ಅಂಥಾದ್ದೇನು ತಪ್ಪು ಮಾಡಿದ್ದ ?" ಎಂದು ಕೇಳಿದಾಗ, ಮುಳಗುಂದ ಮಾಸ್ತರರು ನನ್ನ ಬೆನ್ನು ನೋಡಿ, ಕಳವಳ ಪಡುತ್ತ ನಿಂತಿದ್ದರು. ಅಷ್ಟೊಂದು ಏಟು ಬಿದ್ದಿದ್ದರ ಕಲ್ಪನೆ ಅವರಿಗಿರಲಿಲ್ಲ. ಹೊಡೆತ ತಿಂದರೂ ಅವರ ಬಗ್ಗೆ ನನಗೆ ಅಪಾರ ಗೌರವ. ನಾವು ಹುಡುಗರೂ ಮಂಗಗಳಂತೆ ಹಾರಾಡುವವರಾಗಿದ್ದರಿಂದ ಅವರಿಗೆ ಒಮ್ಮೊಮ್ಮೆ ನಮ್ಮ ಮೇಲೆ ಎಲ್ಲಿಲ್ಲದ ಕೋಪ. ನಾನು ಕಾಲೇಜಿನ ಪ್ರಾಧ್ಯಾಪಕನಾದ ನಂತರ ಅವರು ಮಾಳಮಡ್ಡಿಯಲ್ಲಿ ಒಂದೆರಡುಸಲ ಕಂಡಿದ್ದರು. ಅವರ ಪಾದಗಳನ್ನು ಮುಟ್ಟಿ ನಮಸ್ಕರಿಸಿದ್ದೆ. ಅವರಿಗೆ ಎಲ್ಲಿಲ್ಲದ ಸಂಕೋಚ. "ನೀನು ಕಾಲೇಜ ಪ್ರೊಫೆಸರಪ್ಪಾ ! ಇದೇನ ಹೀಂಗೆಲ್ಲಾ ನಮಸ್ಕಾರ ಮಾಡ್ಲಿಕ ಹತ್ತೀ" ಎಂದು ನನ್ನ ಕೈಗಳನ್ನು ಹಿಡಿದು ಬಹಳ ಸಂತೋಷಪಟ್ಟಿದ್ದರು. ಅವರು ಈಗ ಬದುಕಿದ್ದಾರೋ, ಇಲ್ಲವೋ ಎಂಬುದು ನನಗೆ ಗೊತ್ತಿಲ್ಲ ನಾನು ನಾಲ್ಕನೆಯ ತರಗತಿಯಲ್ಲಿ ಓದುತ್ತಿರುವಾಗಲೇ ಅವರಿಗೆ ಸುಮಾರು ೪೦ ವರ್ಷಗಳಾಗಿರಬೇಕು. ನಮ್ಮ ಹೆಡ್‌ಮಾಸ್ತರರಾದ ಪತ್ತಾರರು ಮತ್ತು ಅದೇ ಶಾಲೆಯಲ್ಲಿ ಶಿಕ್ಷಕಿಯಾದ ಅವರ ಪತ್ನಿ ಅಪ್ಪಟ ಗಾಂಧೀವಾದಿಗಳು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಕ್ರಿಯವಾಗಿ ಭಾಗವಹಿಸಿದವರು. 'ಮಾಳಮಡ್ಡಿ ಗಾಂಧಿ' ಎಂಬುದೇ ಪತ್ತಾರರ ಅನ್ವರ್ಥಕ ನಾಮವಾಗಿತ್ತು. ಅವರ ಕಪ್ಪು ದೇಹಕ್ಕೆ ಶುಭ್ರ ಲುಂಡ ಪಂಚೆ ಮತ್ತು ಅರ್ಧ ತೋಳಿನ ಖಾದಿ ಅಂಗಿ, ಇವೇ ಅವರ ಹೊದಕೆಗಳು. ಈ ಕೆ ಇ. ಬೋರ್ಡ್ ಪ್ರಾಕ್ಟಿಸಿಂಗ್ ಸ್ಕೂಲ್‌ನ ಆವಾರದಲ್ಲಿ ಸಂಪಿಗೆ ಮತ್ತು ಮಾವಿನ ಮರಗಳಿದ್ದವು. ಬಿಡುವಿನ ವೇಳೆಯಲ್ಲಿ ನಾವೆಲ್ಲ ಹುಡುಗರು ಗಿಡಮಂಗ್ಯಾನ ಆಟ, ಚಿಣಿಪಣಿ, ಗುಂಡಾ ಮತ್ತು ಹುಡತುತು (ಕಬಡ್ಡಿ) ಆಡುತ್ತಿದ್ದೆವು. ಶಾಲೆಯ ಕಟ್ಟಡದ ಇನ್ನೊಂದು ಪಾರ್ಶ್ವದಲ್ಲಿ ಕಡಕೋಳರ ಕಿರಾಣಿ ಅಂಗಡಿ ಇತ್ತು. ಒಬ್ಬೊಬ್ಬರು ಒಂದಾಣೆ ಕೊಟ್ಟು, ಶೇಂಗಾ, ಬೆಲ್ಲ, ಪುಟಾಣಿ ತಿನ್ನುತ್ತಿದ್ದೆವು. ನನ್ನೊಂದಿಗೆ ಓದುತ್ತಿದ್ದವರೆಲ್ಲರ ಹೆಸರು ನನಗೆ ನೆನಪಿಲ್ಲ. ಆದರೂ, ಪಾರ್ಥಸಾರಥಿ ಪಂಚಮುಖಿ (ವಿದ್ಯಾರತ್ನ ಆರ್. ಎಸ್. ಪಂಚಮುಖಿಯವರ ಪುತ್ರ) ಆನಂದ ಕಬ್ಬೂರ (ಪ್ರಸಿದ್ಧ ನಾರಾಯಣರಾವ್ ಕಬ್ಬೂರವರ ಪುತ್ರ), ವಾಮನ

ಛಬ್ಬಿ, ಹರಕಾರೆ, ಸುರೇಶ ಕಳಸವಾಡ, ಅಶೋಕ ಹುಕ್ಕೇರಿ, ಭೀಮಸಿಂಗ ರತ್ನಣ್ಣನವರ, ಇವರೇ ನನ್ನ ಸಹಪಾಠಿಗಳು.

ನಾನು ೫, ೬ ಮತ್ತು ೭ ನೆಯ ತರಗತಿಗಳನ್ನು ಕೆ.ಇ. ಬೋರ್ಡ್ ಪ್ರಾಥಮಿಕ ಶಾಲೆಯಲ್ಲಿಯೇ ಮುಂದುವರಿಸಿದೆ. ಅದೇ ಮುಳಗುಂದ ಮತ್ತು ಪತ್ತಾರರು ನಮ್ಮ ಶಿಕ್ಷಕರಾಗಿದ್ದರು. ಕೀರ್ತಿವುಮ್ಮ ಟ್ರೇನಿಂಗ್ ಕಾಲೇಜಿನ ಪ್ರಾಧ್ಯಾಪಕರಾದ ಮುಧೋಳಕರರೂ ಕಲಿಸುತ್ತಿದ್ದರು ನನ್ನ ಹಳೆಯ ಕೆಲವು ಮಿತ್ರರು ೫ ನೆಯ ತರಗತಿಗೆ ಬಂದಾಗ ಮಾಧ್ಯಮಿಕ ಶಾಲೆ ಸೇರಿದ್ದರು. ನಾನು, ಮೋಹನ ಗಲಗಲಿ ಮುಂತಾದ ವರು ಪ್ರಾಥಮಿಕ ಶಾಲೆಯಲ್ಲೇ ಓದು ಮುಂದುವರಿಸಿದೆವು. ಏಳನೆಯ ತರಗತಿ ಓದುವಾಗ ಮಾಧ್ಯಮಿಕ ಶಾಲೆಯ ಬಿರಡಿಕರ ಮಾಸ್ತರರು ನಮಗೆ ಇಂಗ್ಲಿಷ್ ಕಲಿಸು ತ್ತಿದ್ದರು. ಅವರೊಬ್ಬ ಅತ್ಯುತ್ತಮ ಶಿಕ್ಷಕರಾಗಿದ್ದು ನನಗೆ ಇಂಗ್ಲಿಷ್ ಭಾಷೆಯ ತಳಪಾಯ ಹಾಕಿಕೊಟ್ಟವರೇ ಅವರು. ನಾನು ೫, ೬ ಮತ್ತು ೭ ನೆಯ ವರ್ಗಗಳಲ್ಲಿ ಓದುತ್ತಿದ್ದಾಗ ನನ್ನ ಶಾಲೆ ಕೆ. ಇ. ಬೋರ್ಡ್ ಮಾಧ್ಯಮಿಕ ಶಾಲೆಯ ಆವಾರದ ಮೇಲ್ಗಡೆ ಭಾಗದಲ್ಲಿತ್ತು. ಈ ಅವಧಿಯಲ್ಲಿ ಅಭ್ಯಾಸದೊಂದಿಗೆ ಕ್ರೀಡೆಗಳಲ್ಲಿಯೂ ನನಗೆ ಆಸಕ್ತಿ ಬೆಳೆಯತೊಡಗಿತು. ಉದ್ದ ಮತ್ತು ಎತ್ತರ ಜಿಗಿತಗಳಲ್ಲಿ ಪಾರಿತೋಷಕ ಗಳನ್ನು ಪಡೆಯಲು ಪ್ರಾರಂಭಿಸಿದೆ. ಇದೇ ಅವಧಿಯಲ್ಲಿ ನಾನು, ಭೀಮಸಿಂಗ ಮುಂತಾದವರು ಅತ್ತಿಕೊಳ್ಳದಲ್ಲೆಲ್ಲ ಅಲೆದಾಡಿ, ಕೆರೆಯಲ್ಲಿ ಈಸಿ ಕವಳಿ ಹಣ್ಣು ಕೊಯ್ದು ತಿನ್ನುತ್ತಿದ್ದೆವು. ಇವೆಲ್ಲ ಚಟುವಟಿಕೆಗಳಿಂದಾಗಿ ನನ್ನಲ್ಲಿ ಸ್ವಾಭಾವಿಕ ವಾಗಿಯೇ ಕಷ್ಟಸಹಿಷ್ಣುತೆ ಬೆಳೆಯುತ್ತಲಿತ್ತು. ಸ್ಪೆಲ್ಲಿಂಗ್ಸ್ ಕಂಠಪಾಠ ಮಾಡುವಂತೆ ಬಿರಡಿಕರ ಮಾಸ್ತರರು ನಮಗೆ ಆಜ್ಞಾಪಿಸುತ್ತಿದ್ದರು. ಸಾಮಾನ್ಯವಾಗಿ ನಮ್ಮ ವರ್ಗದಲ್ಲಿ ಇಂಗ್ಲಿಷ್‌ನಲ್ಲಿ ಮೋಹನ ಗಲಗಲಿ ಮತ್ತು ನಾನು ಕ್ರಮವಾಗಿ ಪ್ರಥಮ ಮತ್ತು ದ್ವಿತೀಯ ಸ್ಥಾನದಲ್ಲಿದ್ದೆವು. ಇತರ ವಿದ್ಯಾರ್ಥಿಗಳು ತಪ್ಪಿದಾಗ, ನಮ್ಮಿಂದ ಸರಿಯಾದ ಸ್ಪೆಲ್ಲಿಂಗ್ ಹೇಳಿಸಿ, ಬಿರಡಿಕರ ಮಾಸ್ತರರು ತಪ್ಪಿದವರ ಕಪಾಳಿಗೆ ಹೊಡೆಸುತ್ತಿದ್ದರು. ಹೀಗಾಗಿ ನಮಗೆ ಯಾರಾದರೂ ತ್ರಾಸುಕೊಟ್ಟರೆ, ಅಂಥವರ ಕಪಾಳಿಗೆ ಹೊಡೆಯುವ ಅವಕಾಶ ನಮಗೆ ಲಭಿಸುತ್ತಿತ್ತು. ಏಳನೆಯ ತರಗತಿಯ ಅಂತಿಮ ಪರೀಕ್ಷೆಯಲ್ಲಿ, ನಿರೀಕ್ಷಿಸಿದಂತೆ ಮೋಹನ ಪ್ರಥಮ, ನಾನು ದ್ವಿತೀಯ. ಹೀಗಾಗಿ ೮ ನೆಯ ತರಗತಿಗೆ ನಾನು ಮಾಧ್ಯಮಿಕ ಶಾಲೆಗೆ ಸೇರಿದಾಗ, ಪ್ರಾಥಮಿಕ ಶಾಲೆಯ ೭ ನೆಯ ತರಗತಿಯಲ್ಲಿ ಮೊದಲಿನ ೫ ಸ್ಥಾನ ಪಡೆದ ವಿದ್ಯಾರ್ಥಿಗಳನ್ನು 'ಎ' ವರ್ಗದಲ್ಲಿ ನೊಂದಾಯಿಸಿದರು.

**ಕೆ. ಇ. ಬೋರ್ಡ್‌ನ ಮಾಧ್ಯಮಿಕ ಶಾಲೆಯಲ್ಲಿ**

೧೯೫೩ ರಿಂದ ೧೯೫೭ ರ ಅವಧಿಯಲ್ಲಿ ನಾನು ಕೆ. ಇ. ಬೋರ್ಡ್‌ನ ಮಾಧ್ಯಮಿಕ ಶಾಲೆಯಲ್ಲಿ ಅಧ್ಯಯನ ಮಾಡಿದೆ. ಕೆ. ಇ. ಬೋರ್ಡ್ ಶಾಲೆಗೆ

ಮೊದಲಿನಿಂದಲೂ ರಾಜ್ಯಮಟ್ಟದಲ್ಲಿ ಕೀರ್ತಿಯಿದೆ. ಇಂದಿಗೂ ಆ ಶಾಲೆಯಲ್ಲಿ ಅಧ್ಯಯನ ಮಾಡುವ ವಿದ್ಯಾರ್ಥಿಗಳು ಎಸ್ ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉನ್ನತ ಶ್ರೇಣಿಯಲ್ಲಿ ಪಾಸಾಗಿ, ಕೆಲವು ವಿದ್ಯಾರ್ಥಿಗಳು ರಾಜ್ಯಪ್ರಶಸ್ತಿಯನ್ನೂ ಪಡೆಯು ತ್ತಾರೆ. ಆ ಶಾಲೆಯ ಪರಂಪರೆಯೇ ಹಾಗಿದೆ. ನಾನು ಅಲ್ಲಿ ಅಧ್ಯಯನ ಮಾಡಿದ ನಾಲ್ಕು ವರ್ಷಗಳ ಅವಧಿ ಮಹತ್ವದ್ದಾಗಿತ್ತೆಂದು ನನ್ನ ಅನಿಸಿಕೆ. ಸಂಸ್ಕೃತವನ್ನು ನಾ. ಲ. ಬಾಪಟ್ ಮತ್ತು ಶ್ರೀಮತಿ ಗಾಯತೊಂಡೆ, ಇಂಗ್ಲಿಷ್‌ನ್ನು ಎಲ್ ಬಿ. ಕುಲಕರ್ಣಿ ಬಿರಡಿಕರ ಮತ್ತು ಎಸ್. ಜಿ. ನಾಡಗೀರ, ಹಿಂದಿಯನ್ನು ಭಟ್ಟ ಮತ್ತು ಮುಂಡರಗಿ, ಭೌತಶಾಸ್ತ್ರವನ್ನು ಎಲ್. ಬಿ. ಕುಲಕರ್ಣಿ, ರಸಾಯನ ಶಾಸ್ತ್ರವನ್ನು ಕೋನೇರಿ, ಚಿತ್ರಕಲೆಯನ್ನು ಅಷ್ಟಪುತ್ರೆ, ಇತಿಹಾಸವನ್ನು ಟಂಕಸಾಲಿ ಮತ್ತು ಆರ್. ಆರ್. ದೇಶಪಾಂಡೆ, ಆಲ್‌ಜಬ್ರಾ ಮತ್ತು ಭೂಗೋಲವನ್ನು ಮಹಿಷಿ, ಕನ್ನಡವನ್ನು ಹಬ್ಬು ಮತ್ತು ಎನ್. ಎಸ್. ಗದಗಕರ, ಭೂಮಿತಿ ಮತ್ತು ಕನ್ನಡ ವನ್ನು ಮನಗೂಳಿ ಎಂಬ ಶಿಕ್ಷಕರು ವಿದ್ಯಾರ್ಥಿಗಳ ಬಗ್ಗೆ ಹೆಚ್ಚಿನ ಆಸಕ್ತಿ ವಹಿಸಿ ಕಲಿ ಸಿದರು. ವಿದ್ಯಾರ್ಥಿಗಳ ಸರ್ವತೋಮುಖ ಬೆಳವಣಿಗೆಗೆ ಅವರೆಲ್ಲ ಸಹಾಯಕಾರಿ ಯಾಗಿದ್ದರು. ಈ ಶಿಕ್ಷಕರನ್ನು ನಾನು ಜೀವನಪರ್ಯಂತ ಮರೆಯಲು ಸಾಧ್ಯವಿಲ್ಲ. ಮಣ್ಣಿನ ಮುದ್ದೆಗೆ ಸ್ವರೂಪ ನೀಡಿದವರು ಆ ಪೂಜ್ಯ ಶಿಕ್ಷಕರು. ನಾನು ಅವರಿಗೆಲ್ಲ ಚಿರಋಣಿ.

ಶಾಲೆಯಲ್ಲಿ ಆಟಕ್ಕೂ ಬಹಳ ಪ್ರೋತ್ಸಾಹವಿತ್ತು. ಎಸ್ ಜಿ. ನಾಡಗೀರ ಮತ್ತು ಎಲ್. ಬಿ. ಕುಲಕರ್ಣಿಯವರು ನಮಗೆ ವಿಶೇಷ ಪ್ರೋತ್ಸಾಹ ನೀಡು ತ್ತಿದ್ದರು. ಕಬಡ್ಡಿ, ಖೋ ಖೋ, ವಾಲಿಬಾಲ್, ಬೇಸ್‌ಬಾಲ್, ಹಾಕಿ, ಕ್ರಿಕೆಟ್, ಅಥ್ಲೆಟಿಕ್ಸ್ ಕ್ರೀಡೆಗಳು ಚುರುಕಿನಿಂದ ನಡೆಯುತ್ತಿದ್ದವು. ಉದ್ದಜಿಗಿತ, ಎತ್ತರ ಜಿಗಿತ, ಪೋಲ್‌ವಾಲ್ಟ್ ಪಂದ್ಯಗಳಲ್ಲಿ ಜಿಲ್ಲಾಮಟ್ಟದ ಪ್ರಶಸ್ತಿಗಳನ್ನು ನಾನು ಪಡೆದೆ. ಅದೇ ರೀತಿ ಎನ್.ಸಿ.ಸಿ. ಯನ್ನೂ ಸೇರಿದೆ. ಖಾದಿ ಉಡುಪಿನ ಸದೃಢಕಾಯದ ಹಬ್ಬು ಮಾಸ್ತರರು ಎನ್.ಸಿ.ಸಿ.ಯ ಅಧಿಕಾರಿಗಳಾಗಿದ್ದರು. ಅವರ ಮುಖಂಡತ್ವ ದಲ್ಲಿ ಕೃಷಿ ಮಹಾವಿದ್ಯಾಲಯದಲ್ಲಿ ನಡೆದ ಕ್ಯಾಂಪ್‌ನಲ್ಲಿ ನಾವು ವಿದ್ಯಾರ್ಥಿಗಳು ಪಾಲ್ಗೊಂಡೆವು. ಅವರು ನಮ್ಮಲ್ಲಿ ಶಿಸ್ತು ಮತ್ತು ದೇಶಪ್ರೇಮವನ್ನು ಬೆಳೆಸಿದರು.

ಹೈಸ್ಕೂಲಿನಲ್ಲಿದ್ದಾಗಿನ ಇನ್ನೂ ಕೆಲವು ಘಟನೆಗಳು ನನಗೆ ನೆನಪಾಗುತ್ತಿವೆ. ಒಮ್ಮೆ ನಮ್ಮ ವರ್ಗದ ವಿದ್ಯಾರ್ಥಿಗಳು ಕೆಲಗೇರಿಗೆ ಪ್ರವಾಸಕ್ಕೆ ಹೋಗಿದ್ದೆವು. ಮಧ್ಯಾಹ್ನ ಎಲ್ಲ ವಿದ್ಯಾರ್ಥಿಗಳೂ ತಿರುಗಿ ಮನೆಗೆ ಬಂದರೆ, ನಾನು ಮತ್ತು ನನ್ನ ಮಿತ್ರ ಪ್ರಕಾಶ ನಾಡಕರ್ಣಿ ಕೆಲಗೇರಿಯಲ್ಲಿ ತಂಗಿ, ಅಲ್ಲಿಯ ದೊಡ್ಡ ಬಾವಿಯಲ್ಲಿ ಈಜಾಡಿ ಸಂಜೆ ಮನೆಗೆ ಬಂದೆವು. ಪ್ರಕಾಶನ ಖಡಕ್ ಅಜ್ಜಿ ಪ್ರಧಾನವಾಗಿ ನನ್ನನ್ನು ತರಾಟೆಗೆ ತೆಗೆದುಕೊಂಡಳು. ನನ್ನ ಅಮ್ಮನೂ ನನ್ನನ್ನು ತರಾಟೆ ತೆಗೆದುಕೊಳ್ಳುವಲ್ಲಿ

ಹಿಂದು ಮುಂದು ನೋಡಲಿಲ್ಲ. ಒಟ್ಟಿನಲ್ಲಿ, ಅಂದು ನನ್ನ ಗ್ರಹಚಾರ ಸರಿಯಾಗಿರಲಿಲ್ಲ. ತಪ್ಪು ಮಾಡಿದವರು ನಾವಿಬ್ಬರಾಗಿದ್ದರೂ, ಬೈಗುಳ ತಿಂದವನು ನಾನೊಬ್ಬನೇ ಆಗಿದ್ದೆ.

ಇನ್ನೊಂದು, ತೆಂಗಿನಕಾಯಿ ಕದ್ದ ಪ್ರಸಂಗ. ಹೈಸ್ಕೂಲಿನಲ್ಲಿ ಓದುತ್ತಿರುವಾಗ ನಾವು ಮಾಳಮಡ್ಡಿ ಗೋಪಾಲಪುರದ ನಾಡಕರ್ಣಿ ಕಂಪೌಂಡ್‌ನಲ್ಲಿ ಬಾಡಿಗೆ ಮನೆಯಲ್ಲಿದ್ದೆವು. ಹೋಳಿಹುಣ್ಣಿಮೆಯ ಸಮಯ, ಧಾರವಾಡದಲ್ಲಿ ಹೋಳಿಹುಣ್ಣಿಮೆ ಕೇಳಬೇಕೇ! ಹೇಳೀಕೇಳೀ ಕಿಲಾಡಿಗಳ ಹಬ್ಬ. ನಮ್ಮ ಮನೆಗೆ ಹೊಂದಿಕೊಂಡು ಒಂದು ತೆಂಗಿನ ಮರವಿತ್ತು. ಅದಕ್ಕೆ ಪ್ರಥಮ ಕಾಯಿ ಬಿಟ್ಟಿತ್ತು. ಆ ಕಾಯಿಯನ್ನು ನಾನು ಮತ್ತು ನನ್ನ ಮನೆಯ ಎದುರಿನಲ್ಲಿದ್ದ ಸತ್ತಿಗೇರಿ ಕೂಡಿ ಕೊಯ್ದಿದ್ದಾಯಿತು. ಅವನು ಮರ ಏರಿದ, ನಾನು ಕೆಳಗೆ ನಿಂತೆ. ನಂತರ ನನ್ನ ಅಮ್ಮನಿಗೆ ಈ ಸಮಾಚಾರ ತಿಳಿಯಿತು. ಅವಳು ಬಹಳ ಕೋಪಗೊಂಡು, ಕದಿಯಬಾರದೆಂದು ಹೇಳಿ, ಮರುದಿನ ಬೆಳಿಗ್ಗೆ, ನಾಡಕರ್ಣಿಯವರ ಮನೆಗೆ ತಾನೇ ಹೋಗಿ ಕಾಯಿ ಕೊಟ್ಟು ಬಂದಳು. ನನ್ನ ಮುಖ ಪೆಚ್ಚಾಗಿತ್ತು. ನನ್ನ ಅಮ್ಮ ಎಷ್ಟು ಸದ್ಗುಣಿ ಮತ್ತು ಪ್ರಾಮಾಣಿಕಳಾಗಿದ್ದಳೆಂಬುದಕ್ಕೆ ಇದೊಂದು ಸಣ್ಣ ನಿದರ್ಶನ.

ಐಸ್‌ಕ್ರೀಮ್ ತಿಂದ ಪ್ರಕರಣವೊಂದು ನೆನಪಿಗೆ ಬರುತ್ತಿದೆ. ನಮ್ಮ ಶಾಲೆಯ ಸಮೀಪದಲ್ಲಿ ಐಸ್‌ಕ್ರೀಮ್ ಗಾಡಿಯವರು ಬರುತ್ತಿದ್ದರು. ನಾವು ಮಾಸ್ತರರ ಕಣ್ಣು ತಪ್ಪಿಸಿ ಐಸ್‌ಕ್ರೀಮ್ ತಿನ್ನುತ್ತಿದ್ದೆವು. ಹೀಗೇ ಒಂದು ದಿನ ಐಸ್‌ಕ್ರೀಮ್ ತಿಂದು ತರಗತಿಗೆ ತಿರುಗಿ ಹೋಗುವಾಗ ಸ್ವಲ್ಪ ತಡವಾಯಿತು. ಮಾಸ್ತರರು ಚೆನ್ನಾಗಿ ಬಯ್ದು ಹೊರಗೆ ಹಾಕಿದರು. ಈ ಆಘಾತಕ್ಕೆ ನಾನು, ಪ್ರಕಾಶ ನಾಡಕರ್ಣಿ, ಶ್ರೀನಿವಾಸ ದೇಸಾಯಿ, ಗೋವಿಂದ ದೇಶಪಾಂಡೆ, ಅಶೋಕ ಹುಕ್ಕೇರಿ ಮುಂತಾದವರು ಬಲಿಪಶುಗಳಾದೆವು. ಅಂದಿನಿಂದ ಶಾಲೆಯ ವೇಳೆಯಲ್ಲಿ ನಾನು ಐಸ್‌ಕ್ರೀಮ್ ತಿನ್ನಲಿಲ್ಲ.

ಮಾಧ್ಯಮಿಕ ಶಾಲೆಗೆ ಹೋಗುವಾಗಿನ ಎಷ್ಟೋ ಘಟನೆಗಳು ಇನ್ನೂ ನೆನಪಿವೆ. ಕೆಲವನ್ನು ಮಾತ್ರ ಪ್ರಸ್ತುತದಲ್ಲಿ ಮೆಲುಕು ಹಾಕಿದ್ದೇನೆ. ಕನ್ನಡದಲ್ಲಿ ಹಾಸ್ಯ ಸಾಹಿತಿಗಳಾದ ಬೀಚಿಯವರು ನಮ್ಮ ಶಾಲೆಗೆ ಬಂದು ನಮ್ಮನ್ನೆಲ್ಲ ಸಾಕಷ್ಟು ನಗಿಸಿದ್ದರು. ದ.ರಾ. ಬೇಂದ್ರೆ, ಆರ್. ವೈ. ಧಾರವಾಡಕರ ಮುಂತಾದವರೂ ಶಾಲೆಗೆ ಬಂದಿದ್ದರು. ನಮ್ಮ ಎಸ್. ಜಿ. ನಾಡಗೀರ ಹೆಡ್‌ಮಾಸ್ತರರಿಗೆ ಶಾಲೆಯ ಪ್ರಗತಿಯ ಬಗ್ಗೆ ಎಲ್ಲಿಲ್ಲದ ಕಾಳಜಿ. ಪ್ರಾಥಮಿಕ ಶಾಲೆಯಲ್ಲಿ ನನ್ನ ಮಿತ್ರರಾಗಿದ್ದವರೆಲ್ಲ ಮಾಧ್ಯಮಿಕ ಶಾಲೆಗೂ ಬಂದರು. ಅವರೆಲ್ಲರ ಹೊರತಾಗಿ ಮಧು ಹೊಸಕೇರಿ, ರಾಮು ಹೊಸ್ಕೋಟ, ಅಣ್ಣಿಗೇರಿ (ಕಬಡ್ಡಿ ಪಟು), ಬಿ. ಎಸ್. ದೇಸಾಯಿ, ಪಿ. ವಿ. ಕಡಕೋಳ ಮುಂತಾದವರೂ ನಮ್ಮ ವರ್ಗದ ಮಿತ್ರರಾಗಿದ್ದರು. ವನಮಾಲಾ ಗ್ರಾಮ ಪುರೋಹಿತ,

ಕಮಲಾ ಪೋತದಾರ, ಮಂಗಲಾ ಭಂಡಾರಕರ, ಮಂದಾಕಿನಿ ಬೋರಕರ ಎಂಬ ಹೆಸರಿನ ಹೆಣ್ಣುಮಕ್ಕಳೂ ನಮ್ಮ ವರ್ಗದಲ್ಲಿದ್ದರು. ನಾನು ಎಸ್.ಎಸ್ ಎಲ್.ಸಿ. ಪರೀಕ್ಷೆಯಲ್ಲಿ ಶಾಲೆಗೆ ನಂಬರ ಬರದಿದ್ದರೂ, ಒಬ್ಬ ಉತ್ತಮ ವಿದ್ಯಾರ್ಥಿ ಎಂದು ಶಿಕ್ಷಕರಿಂದ ಪರಿಗಣಿಸಲ್ಪಟ್ಟಿದ್ದೆ. ಕೆಲವು ವರ್ಷಗಳ ನಂತರ ಆ ಶಾಲೆಗೆ ನಾನು ಹೋದಾಗ, ೧೯೫೭ ರ ಎಸ್.ಎಸ್.ಎಲ್.ಸಿ. ಯಲ್ಲಿ ಶಾಲೆಗೆ ಭೂಗೋಲ ವಿಷಯ ದಲ್ಲಿ ಪ್ರಥಮ ಸ್ಥಾನ ಪಡೆದಿದ್ದೆನೆಂತ ಅಲ್ಲಿ ತೂಗುಬಿಟ್ಟ ಫಲಕ ನೋಡಿದಾಗ ತಿಳಿದು ಬಂದು ಮನಸ್ಸಿಗೆ ನೆಮ್ಮದಿಯಾಯಿತು. ಕಾಶೀಕರ ಮಾಸ್ತರರಿಂದ ಹಿಂದಿ ರಾಷ್ಟ್ರ ಭಾಷಾ ಪರೀಕ್ಷೆಯಲ್ಲಿ ಪಾಸಾಗಿ, ನಂತರ ನಾವಡಾರಿಂದ ಪ್ರವೇಶಿಕಾ ಅಧ್ಯಯನ ಮಾಡಿ, ಸಪ್ತಾಪುರದ ಡಾ ತಾವರಗೆರಿಯವರ ಮನೆಯಲ್ಲಿ ರಾಷ್ಟ್ರಭಾಷಾದ ವರೆಗೆ ಹಿಂದಿ ತರಗತಿಗಳನ್ನು ನಾನೇ ಪ್ರಾರಂಭಿಸಿದೆ. ಹಿಂದಿಯಲ್ಲಿ ನಾನೊಬ್ಬ ಉತ್ತಮ ಶಿಕ್ಷಕ ಮತ್ತು ಭಾಷಣಕಾರನಾಗಿದ್ದೆ ವೆಂಕಣ್ಣ, ರಾಘು, ನರಸಾಪುರ ಮುಂತಾದವರು ನನ್ನ ವಿದ್ಯಾರ್ಥಿಗಳು. ಹೀಗೆ ವಿದ್ಯಾರ್ಥಿಯಾಗಿದ್ದಾಗಲೇ ನಾನು ಶಿಕ್ಷಕನಾಗಿದ್ದೆ.

## ಕರ್ನಾಟಕ ಕಾಲೇಜಿನಲ್ಲಿಯ ಆ ನಾಲ್ಕು ವರ್ಷಗಳು

ನಾನು ಕರ್ನಾಟಕ ಕಾಲೇಜ ಸೇರಿದ್ದು ೧೯೫೭ ರ ಜೂನ್ ತಿಂಗಳಿನಲ್ಲಿ. ಆಗಿನ ಕಾಲದಲ್ಲಿ ಕರ್ನಾಟಕ ಕಾಲೇಜ ಸೇರುವದೆಂದರೆ ಒಂದು ಹೆಮ್ಮೆಯ ಸಂಗತಿ. ಇಂಗ್ಲಿಷ್‌ಗೆ ವಿ. ಕೆ. ಗೋಕಾಕ, ವಿ. ಎಂ. ಇನಾಮದಾರ, ಭಾಸ್ಕರ, ಭೂಗೋಲಕ್ಕೆ ಹಾನಾ, ಪ್ರಭು, ಹಿಂದಿಗೆ ಮುದಲಿಯಾರ, ಕನ್ನಡಕ್ಕೆ ಸ. ಸ. ಮಾಳವಾಡ, ಎಸ್. ಆರ್. ಮಳಗಿ, ಅರ್ಥಶಾಸ್ತ್ರಕ್ಕೆ ಸಿ. ಎಸ್. ಕಡ್ಡಿಪುಡಿ, ಕಣವಿ, ಸಂಸ್ಕೃತಕ್ಕೆ ಕೆ. ಟಿ. ಪಾಂಡುರಂಗಿ, ವಸಂತ ಪಾಟೀಲ, ಇತಿಹಾಸಕ್ಕೆ ಪ್ರಸನ್ನಕುಮಾರ ಮುಂತಾ ದವರು ಪ್ರಾಧ್ಯಾಪಕರಾಗಿದ್ದರು. ಭೌತಶಾಸ್ತ್ರ ವಿಭಾಗದ ಮುಖ್ಯಸ್ಥರೂ, ಕಾಲೇಜಿನ ವೈಸ್‌ಪ್ರಿನ್ಸಿಪಾಲ್‌ರೂ ಆದ ಡಾ. ದಾವರ ಮತ್ತು ಗಣಿತ ವಿಭಾಗದ ಡಾ. ಉಮರ್ಜಿ ಮತ್ತು ರ್ಘೋರೆಯವರು ಉತ್ತಮ ಪ್ರಾಧ್ಯಾಪಕರಾಗಿದ್ದರೆಂದು ವಿಜ್ಞಾನದ ವಿದ್ಯಾರ್ಥಿಗಳು ಹೇಳುತ್ತಿದ್ದರು. ಬೆಳ್ಳಿಕೇರಿಯ ನನ್ನ ವಿಶ್ವೇಶ್ವರ ಮಾವಯ್ಯ ಮತ್ತು ಹಲಸಿನಕಾಯಿ ರಾಮಕೃಷ್ಣ ಮಾವಯ್ಯ ಸ್ವಲ್ಪ ಧನ ಸಹಾಯ ಮಾಡಿದ್ದ ರಿಂದ ಕಾಲೇಜಿನ ಶುಲ್ಕ ತುಂಬಲು ಅನುಕೂಲವಾಯಿತು. ನಾನು ಕರ್ನಾಟಕ ಕಾಲೇಜಿನಲ್ಲಿ ಅಧ್ಯಯನ ಮಾಡಿದ ಆ ನಾಲ್ಕು ವರ್ಷಗಳು (೧೯೫೭-೧೯೬೧) ನನ್ನ ಜೀವನದಲ್ಲಿಯೇ ಅತ್ಯಂತ ಸಂತಸ ನೀಡಿದ ವರ್ಷಗಳೆಂದು ಧಾರಾಳವಾಗಿ ಹೇಳಬಹುದು. ಅಧ್ಯಯನ, ಆಟ, ಇಲೆಕ್ಷನ್, ಮಿತ್ರಮಂಡಳಿ ಇವುಗಳಿಗೆ ಸಂಬಂಧಿಸಿ ಕೆಲವು ವಾಕ್ಯಗಳನ್ನು ಬರೆಯಲಿಚ್ಛಿಸುವೆ.

ಸುಮಾರು ೫೦ ರ ಪ್ರಾಯದ ಗೋಕಾಕರು ನಮ್ಮ ಕಾಲೇಜಿನ ಪ್ರಿನ್ಸಿಪಾಲ ರಾಗಿದ್ದರು. ಅವರು ಘನತೆ, ಗಾಂಭೀರ್ಯ ಮತ್ತು ವಿದ್ವತ್ತಿಗಾಗಿ ಪ್ರಖ್ಯಾತ

ರಾದವರು. ಎತ್ತರದ ನಿಲವು, ದುಂಡಗಿನ ಮೈಕಟ್ಟು, ಜೈಲುಶೀಮೆಯವರಿಗೆ ಹೋಲಿಸಿದರೆ ಅವರದು ಗೌರವರ್ಣ. ಗಾಂಭೀರ್ಯ ಮತ್ತು ಪಾಂಡಿತ್ಯದ ಸಂಕೇತವೋ ಎಂಬಂತೆ ಚಾಳೀಸು, ಕಾಲಿಗೆ ಬೂಟು, ದೇಹಕ್ಕೆ ಸೂಟು, ಕಂಜಿನ ಕಂಠ, ಮೃದುವಾದ ಭಾವುಕ ಸ್ವಭಾವ, ದೊಡ್ಡ ನಗು, ಇವೇ ನಮ್ಮೆಲ್ಲರ ಪ್ರೀತಿಯ ಪ್ರಾಚಾರ್ಯರ ಲಕ್ಷಣಗಳು. ವಿದ್ಯಾರ್ಥಿಗಳೆಂದರೆ ಅವರಿಗೆ ಅಪಾರವಾದ ಪ್ರೀತಿ. ವಿದ್ಯಾರ್ಥಿಗಳಿಗೆ ಅವರು ಬಯ್ದದ್ದನ್ನು ನಾನು ಎಂದೂ ಕಂಡಿಲ್ಲ. ವಿದ್ಯಾರ್ಥಿಗಳಿಗೆ ಅವರೆಂದರೆ ಭಯ-ಭಕ್ತಿ. ಅವರೊಬ್ಬ ಆದರ್ಶ ಶಿಕ್ಷಕ. ಇಂಗ್ಲಿಷ್‌ನ ಏನೆಲ್ಲ ಪಾಠಗಳನ್ನು ಅವರು ನಮಗೆ ಕಲಿಸಿದರೆಂದು ಈಗ ನನಗೆ ಹೇಳಲು ಸಾಧ್ಯವಿಲ್ಲ ಆದರೆ ಅವರೊಬ್ಬ ಪ್ರತಿಭಾವಂತ ಶಿಕ್ಷಕರಾಗಿದ್ದರೆಂಬುದು ಸತ್ಯ. ಆದರೂ, ನಾವು ಕಾಲೇಜಿನ ಮೊದಲನೇ ವರ್ಷದಲ್ಲಿ ಓದುತ್ತಿದ್ದಾಗ, "Punch brother punch, punch with care, punch in the pressence of the passenger" ಎಂದು ತಮಾಷೆಯಾಗಿ ಹೇಳಿದ್ದು ಇಂದಿಗೂ ನನಗೆ ನೆನಪಿದೆ. ಗೋಕಾಕರು ತಮ್ಮನ್ನು ನೋಡಿದರು; ನೋಡಿ ಮುಗುಳ್ನಗೆ ನಕ್ಕರು; ಮಾತಾಡಿಸಿದರು, ಎಂದರೆ ಅಂಥ ವಿದ್ಯಾರ್ಥಿಗಳಿಗೆ ಎಲ್ಲಿಲ್ಲದ ಹೆಮ್ಮೆ. ಹೀಗಿತ್ತು ಅವರ ಆಕರ್ಷಕ ವ್ಯಕ್ತಿತ್ವ. ಅನಂತರದ ವರ್ಷಗಳಲ್ಲಿ ಹೈದರಾಬಾದಿನ ಸೆಂಟ್ರಲ್ ಇನ್‌ಸ್ಟಿಟ್ಯೂಟ ಆಫ್ ಇಂಗ್ಲಿಷ್‌ನ ನಿರ್ದೇಶಕರಾಗಿ, ಬೆಂಗಳೂರು ಮತ್ತು ಸಾಯಿ ವಿಶ್ವವಿದ್ಯಾಲಯಗಳ ಕುಲಪತಿಗಳಾಗಿ ಅವರು ಸೇವೆ ಸಲ್ಲಿಸಿದರು. ಅವರ ಯೋಗ್ಯತೆಗೆ ತಕ್ಕಂತೆ 'ಪದ್ಮಶ್ರೀ' 'ಜ್ಞಾನಪೀಠ' ಪ್ರಶಸ್ತಿಗಳೆಲ್ಲ ಅವರಿಗೆ ಲಭ್ಯವಾದವು. ಅವರಿಗೆ ಜ್ಞಾನಪೀಠ ಪ್ರಶಸ್ತಿ ದೊರಕಿದ್ದಕ್ಕಾಗಿ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಗೌರವಿಸಲಾಯಿತು. ಆ ಸಂದರ್ಭದಲ್ಲಿ ಶಿರಸಿಯಲ್ಲಿ ತಯಾರಿಸಿದ ಗಂಧದ ಒಂದು ಕಲಾಕೃತಿಯನ್ನು ಅವರಿಗೆ ನೆನಪಿನ ಕಾಣಿಕೆಯಾಗಿ ನೀಡಲಾಯಿತು. ಆ ಕಲಾಕೃತಿಯನ್ನು ಸಿದ್ಧಪಡಿಸಿದ ಗುಡಿಗಾರ ನನ್ನ ಹಳೆಯ ವಿದ್ಯಾರ್ಥಿ. ನಾನೇ ಅವನನ್ನು ಒಪ್ಪಿಸಿ, ಕಲಾಕೃತಿಯನ್ನು ಮಾಡಿಸಲು ಒಬ್ಬ ಪ್ರಮುಖ ವ್ಯಕ್ತಿಯಾಗಿದ್ದೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗುತ್ತದೆ. ವಿನಾಯಕ ಕೃಷ್ಣ ಗೋಕಾಕರು ಈಗಿಲ್ಲ. ಆದರೆ ಅವರ ನೆನಪು ಸದಾ ಹಸಿರಾಗಿದೆ.

ನಮ್ಮ ಇನ್ನೊಬ್ಬ ಪ್ರತಿಭಾವಂತ ಇಂಗ್ಲಿಷ್ ಪ್ರೊಫೆಸರ್ ವಿ. ಎಂ. ಇನಾಮದಾರ. ಅಷ್ಟು ಎತ್ತರವಲ್ಲದ, ಗೋದಿ ಬಣ್ಣದ, ತಲೆಯ ಮೇಲಿನ ಕೇಶರಾಶಿಯನ್ನು ಬಹುಮಟ್ಟಿಗೆ ಕಳೆದುಕೊಂಡ, ಸೂಟು-ಬೂಟುಧಾರಿಯಾದ, ಕಂಜಿನ ಕಂಠದ, ಅಂದು ಸಿನೆಮಾರಂಗದಲ್ಲಿ ವಿಲನ್ ಎಂದು ಪ್ರಖ್ಯಾತ(ಕುಖ್ಯಾತ)ನಾದ ಕೆ. ಎನ್. ಸಿಂಗ್‌ನಂತೆ ಹೊರನೋಟಕ್ಕೆ ಕಾಣುತ್ತಿದ್ದವರು ವಿ. ಎಂ. ಇನಾಮದಾರ. ಅವರಷ್ಟು ಚೆನ್ನಾಗಿ ಇಂಗ್ಲಿಷ್ ಪಾಠ ಮಾಡುವವರನ್ನು ನಾನು ಎಂದೂ ಕಂಡಿಲ್ಲ. 'ಆಲಿವರ್ ಟ್ವಿಸ್ಟ್' ಕಾದಂಬರಿಯನ್ನು ಅವರು ಕಲಿಸುವಾಗ, ಅಲ್ಲಿಯ ದುರಂತ

ದೃಶ್ಯವನ್ನು ವಿವರಿಸುವಾಗಿನ ಅವರ ವಾಕ್‌ಝರಿ ಕೇಳಿ ವಿದ್ಯಾರ್ಥಿಗಳ ಕಣ್ಣುಗಳಲ್ಲಿ ನೀರು ಹರಿದಿತ್ತು. ವಿದ್ಯಾರ್ಥಿಗಳ ಮನಸ್ಸನ್ನು ತಮ್ಮ ಮಾತಿನ ಮೋಡಿಯಲ್ಲಿ ಸಿಲುಕಿಸುವ ಅಗಾಧ ಪಾಂಡಿತ್ಯ ಮತ್ತು ವಾಕ್ಪಟುತ್ವ ಅವರಿಗಿತ್ತು. ಒಟ್ಟಿನಲ್ಲಿ ಅವರೊಬ್ಬ ಅಸಾಧಾರಣ ಪ್ರಾಧ್ಯಾಪಕರಾಗಿದ್ದರು. ಅದರಂತೆ, ಪ್ರೊಫೆಸರ್ ಭಾಸ್ಕರ ಕೂಡ, ನಿರರ್ಗಳವಾಗಿ ಇಂಗ್ಲಿಷ್ ಮಾತನಾಡಬಲ್ಲ ಪ್ರತಿಭಾವಂತ, ಗುಣ ಸಂಪನ್ನ, ಶಾಂತಮೂರ್ತಿಯಾಗಿದ್ದರು. ಪ್ರೊಫೆಸರ್ ಭಾಸ್ಕರರು ಗೋಕಾಕರಿಗೆ ಬಲಗೈ ಇದ್ದಂತೆ. ಲಾಜಿಕ್ ಕಲಿಸುವ ಡಾ. ನಾಗರಾಜರಾವ್ ಮತ್ತು ಕಲಘಟಗಿ ಯವರೂ ಸಾಕಷ್ಟು ಪ್ರಸಿದ್ಧರಾಗಿದ್ದರು. ಶಿಂತ್ರಿಬಾಯಿಯವರೂ ನಮಗೆ ಇಂಗ್ಲಿಷ್‌ನ್ನು ಒಳ್ಳೆಯ ಆಸಕ್ತಿಯಿಂದ ಕಲಿಸಿದ್ದಾರೆ. ಒಟ್ಟಿನಲ್ಲಿ ಇಂಗ್ಲಿಷ್ ವಿಭಾಗ ಚೆನ್ನಾಗಿತ್ತು ಎಂದು ಹೇಳಬಹುದು. ಕಲ್ಲಾಪುರರೂ ಚೆನ್ನಾಗಿ ಪಾಠಮಾಡುತ್ತಿದ್ದರು.

ನಾನು ಇಂಟರಮೀಡಿಯಟ್ ಓದುತ್ತಿದ್ದಾಗ ಸರಕಾರೀ ಕಾಲೇಜಾದ ಕರ್ನಾಟಕ ಕಾಲೇಜನ್ನು ಕರ್ನಾಟಕ ವಿಶ್ವವಿದ್ಯಾಲಯದ ಕಾಲೇಜನ್ನಾಗಿ ಮಾಡಲಾಯಿತು. ಈ ಬದಲಾವಣೆಯಿಂದಾಗಿ, ಕರ್ನಾಟಕ ಕಾಲೇಜಿನ ಅನೇಕ ಪ್ರಸಿದ್ಧ ಪ್ರಾಧ್ಯಾಪಕರು ಬೇರೆ ಸರಕಾರಿ ಕಾಲೇಜುಗಳಿಗೆ ವರ್ಗ ಮಾಡಿಸಿಕೊಂಡರು. ವಿಶ್ವವಿದ್ಯಾಲಯದ ಪ್ರಸಿದ್ಧ ಇಂಗ್ಲಿಷ್ ಪ್ರಾಧ್ಯಾಪಕರಾದ ಅರ್ಮ್ಯಾಂಡೊ ಮೆನೆಜಿಸ್‌ರನ್ನು ಪ್ರಾಚಾರ್ಯರ ನ್ನಾಗಿ ನೇಮಿಸಲಾಯಿತು. ಪ್ರಾಚಾರ್ಯರೇನೋ ಪ ಖ್ಯಾತರಾಗಿದ್ದರು. ಆದರೆ ಇನ್ನುಳಿದ ಪ್ರಾಧ್ಯಾಪಕರ ಮಟ್ಟ ಮೊದಲಿನ ಪ್ರಾಧ್ಯಾಪಕರ ಮಟ್ಟಕ್ಕಿರಲಿಲ್ಲ. ಹಾಗೆ ನೋಡಿದರೆ ೧೯೫೭ ರಲ್ಲೇ ಕರ್ನಾಟಕ ಕಾಲೇಜಿನ ಪ್ರಾಧ್ಯಾಪಕರ ಪ್ರಖ್ಯಾತಿ ಅರ್ಧ ಕುಸಿದಿತ್ತು. ೧೯೫೮ ರ ನಂತರ ಮತ್ತೂ ಕುಸಿಯಿತು. ಈಗಿನ ಪರಿಸ್ಥಿತಿಯ ಅರಿವಂತೂ ನನಗಿದೆ. ಯಾರಿಗೂ ಹೆಚ್ಚು ಹೇಳಬೇಕಾಗಿಲ್ಲ.

ನಾನು ಬಿ.ಎ.ಕ್ಕೆ ಬಂದಾಗ ಇತಿಹಾಸವನ್ನು ಪ್ರಧಾನ ವಿಷಯವನ್ನಾಗಿ ಮತ್ತು ಸೋಷಿಯಲ್ ಅಂಥ್ರೊಪಾಲಜಿಯನ್ನು ಐಚ್ಛಿಕ ವಿಷಯವನ್ನಾಗಿ ಆಯ್ದು ಕೊಂಡೆ. ಪ್ರಸನ್ನಕುಮಾರರು ಭಾರತದ ಚರಿತ್ರೆ, ಸಿ. ಎಸ್. ಕಡ್ಡಿಪುಡಿಯವರು ಭಾರತದ ಸಂವಿಧಾನದ ಚರಿತ್ರೆ ಮತ್ತು ವಿಶ್ವವಿದ್ಯಾಲಯದ ಡಾ. ಜಿ. ಎಸ್. ದೀಕ್ಷಿತರು ಬ್ರಿಟಿಷ್ ಸಂವಿಧಾನವನ್ನು ಕಲಿಸುತ್ತಿದ್ದರು. ಎಲ್ಲರೂ ಚೆನ್ನಾಗಿ ಪಾಠ ಮಾಡಿದರು. ಸೋಷಿಯಲ್ ಅಂಥ್ರೊಪಾಲಜಿಯನ್ನು ಗುಂಜಿಕರ ಬಾಯಿಯವರು ಕಲಿಸುತ್ತಿದ್ದರು.

ಎಲ್ಲ ಪುಸ್ತಕಗಳನ್ನು ಖರೀದಿ ಮಾಡಿ ಓದಲು ನನಗೆ ಸಾಧ್ಯವಿಲ್ಲದ್ದರಿಂದ ನಾನು ಕಾಲೇಜಿನ ಗ್ರಂಥಾಲಯವನ್ನೇ ಹೆಚ್ಚಾಗಿ ಆಶ್ರಯಿಸಿದ್ದೆ. ಅದೊಂದು ಬಹುದೊಡ್ಡ ಗ್ರಂಥಾಲಯ. ಅದರಲ್ಲಿಯೂ, ಇತಿಹಾಸ ವಿಭಾಗದಲ್ಲಿ ಸಾಕಷ್ಟು ಗ್ರಂಥಗಳಿದ್ದವು. ಕರ್ನಾಟಕ ಕಾಲೇಜಿನ ಪ್ರಥಮ ಪ್ರಾಚಾರ್ಯರಾಗಿದ್ದ ರಾಲಿನ್‌ಸನ್‌ರು ಪ್ರಸಿದ್ಧ

ಇತಿಹಾಸ ವಿದ್ವಾಂಸರಾಗಿದ್ದರೆಂಬುದನ್ನು ಮರೆಯುವಂತಿಲ್ಲ. ನಾನು ಇಂಟರನಲ್ಲಿ ಓದುತ್ತಿದ್ದಾಗ ಭೂಗೋಲ ವಿಭಾಗದಲ್ಲಿ ನಡೆದ ಸಮಾರಂಭವೊಂದರಲ್ಲಿ ಭಾಷಣ ವನ್ನು ಇಂಗ್ಲಿಷ್‌ನಲ್ಲಿ ಮಾಡಿದೆ. ನಾನು ಇಂಗ್ಲಿಷ್‌ನಲ್ಲಿ ಮಾಡಿದ ಪ್ರಥಮ ಭಾಷಣ ಅದಾಗಿತ್ತು. ಆ ಭಾಷಣ ನನ್ನ ಮನಸ್ಸಿಗೆ ಸಂತೋಷ ಉಂಟುಮಾಡಿತ್ತು.

ಕಾಲೇಜಿನಲ್ಲಿಯ ಇಲೆಕ್ಷನ್ (ಚುನಾವಣೆ) ಕುರಿತು ಕೆಲವು ಮಾತುಗಳನ್ನಾಡ ಬೇಕೆಂದೆನಿಸುತ್ತದೆ. ನಾನು ಪ್ರಥಮ ವರ್ಷದಲ್ಲಿದ್ದಾಗ ಚುನಾವಣೆಗೆ ಸ್ಪರ್ಧಿಸುವ ವಿಚಾರ ಮಾಡಲಿಲ್ಲ. ಆ ವರ್ಷ ನಾಡಗೌಡ ಮತ್ತು ಅರಮನೆ ಎಂಬುವರು ಚುನಾಯಿತರಾದಂತೆ ನೆನಪಿದೆ. ಎರಡನೆಯ ವರ್ಷ ನಾನು ಇತಿಹಾಸ ಮತ್ತು ಅರ್ಥ ಶಾಸ್ತ್ರ ವಿಭಾಗದ ಚುನಾವಣೆಗೆ ಸ್ಪರ್ಧಿಸಿದೆ. ನನಗೆ ಮತ್ತು ಎನ್. ಎಲ್. ಪಾಟೀಲ ಎಂಬವನ ಮಧ್ಯೆ ತುರುಸಿನ ಸ್ಪರ್ಧೆಯಿತ್ತು. ಏನೂ ಹಣ ಖರ್ಚು ಮಾಡದೆ (ಖರ್ಚುಮಾಡಲು ಸಾಮರ್ಥ್ಯವಿರಲಿಲ್ಲ ಎನ್ನಿ !) ನಾನು ಚುನಾಯಿತನಾದೆ. ಆ ವರ್ಷ ಕೆಲವು ಕಾರ್ಯಕ್ರಮಗಳನ್ನೂ ಹಮ್ಮಿಕೊಳ್ಳಲಾಯಿತು. ನಾನು ಜ್ಯೂನಿಯರ್ ಬಿ ಎ. ದಲ್ಲಿದಾಗ ಪುನಃ ಚುನಾವಣೆಗೆ ನಿಂತು ಆರಿಸಿಬಂದೆ. ನಾನು ಎರಡು ಸಲ ಚುನಾವಣೆಗೆ ನಿಂತರೂ ಸೋಲನ್ನು ಅನುಭವಿಸಲೇ ಇಲ್ಲ. ನಾನೊಬ್ಬ ಪ್ರಸಿದ್ಧ ಆಟಗಾರನಾದ್ದರಿಂದ ಮಿತ್ರಮಂಡಳಿ ಸಾಕಷ್ಟು ದೊಡ್ಡದಾಗಿದ್ದರಿಂದ ನಿರಾಯಾಸ ವಾಗಿ ನಾನು ಚುನಾಯಿತನಾಗುತ್ತಿದ್ದೆ. ಜ್ಯೂನಿಯರ್ ಬಿ. ಎ. ದಲ್ಲಿದ್ದಾಗ ನಾನು ಟೆನಿಸ್ ವಿಭಾಗದ ಕಾರ್ಯದರ್ಶಿಯಾಗಿದ್ದೆ. ಹಿಂದಿ ವಿಭಾಗದ ಮುಖ್ಯಸ್ಥರಾಗಿದ್ದ ಮುದಲಿಯಾರರು ಟೆನಿಸ್ ವಿಭಾಗದ ಚೇರ್‌ಮನ್ ಆಗಿದ್ದರು. ಟೆನಿಸ್‌ನಲ್ಲಿ ಆಗ ಸತೀಶ ಟಗರಪುರ ಚಾಂಪಿಯನ್.

ಕ್ರೀಡೆಗಳಿಗೆ ಸಂಬಂಧಿಸಿ ಒತ್ತುಕೊಟ್ಟು ಹೇಳಲೇಬೇಕು. ಕರ್ನಾಟಕ ಕಾಲೇಜಿನ ನಾಲ್ಕು ವರ್ಷಗಳ ಅವಧಿಯಲ್ಲಿ ನಿಜವಾಗಿ ಹೇಳಬೇಕೆಂದರೆ ನಾನು ಕ್ರೀಡೆಗಳಲ್ಲಿ ವಹಿಸಿದಷ್ಟು ಆಸಕ್ತಿಯನ್ನು ಅಧ್ಯಯನದಲ್ಲಿ ವಹಿಸಲಿಲ್ಲ. ಆದರೂ ನಿಯಮಿತವಾಗಿ ಅಧ್ಯಯನ ಸಾಗಿತ್ತು. ನಾನು ಪ್ರಥಮ ವರ್ಷದಲ್ಲಿದ್ದಾಗ ಅಥ್ಲೆಟಿಕ್ ಕ್ರೀಡಾಕೂಟದಲ್ಲಿ ಮೂರು ಪಾರಿತೋಷಕಗಳು ದೊರಕಿದರೂ ನನ್ನನ್ನು ವಿಶ್ವವಿದ್ಯಾಲಯ ಕ್ರೀಡಾ ಕೂಟದಲ್ಲಿ ಭಾಗವಹಿಸಲು ಆರಿಸಲಿಲ್ಲ. ನನ್ನ ಅರ್ಹತಾ ಮಟ್ಟ ವಿಶ್ವವಿದ್ಯಾಲಯ ಮಟ್ಟಕ್ಕೆ ಸರಿಯಾಗಿರಲಿಲ್ಲವೆಂಬುದೇ ಕಾರಣ. ಆದರೂ ಅಥ್ಲೆಟಿಕ್ ಚೇರಮನ್‌ರಾದ ಭಾಸ್ಕರರು ನನಗೆ ಸ್ಪೈಕ್ಸ್ ನೀಡಿ ಪ್ರೋತ್ಸಾಹಿಸಿದರು. ಅತ್ಯಂತ ಶ್ರದ್ಧೆಯಿಂದ ನಾನು ಅಥ್ಲೆಟಿಕ್ಸ್ ಪ್ರಾಕ್ಟೀಸನ್ನು ಮುಂದುವರಿಸಿದೆ. ಇಂಟರ್‌ನಲ್ಲಿ ಓದುತ್ತಿದ್ದಾಗ ನನಗೆ ಅರ್ಹತಾ ಮಟ್ಟದೊಂದಿಗೆ ಪ್ರಶಸ್ತಿಗಳೂ ಬಂದವು ಹುಬ್ಬಳ್ಳಿಯ ಭೂಮರಡ್ಡಿ ಇಂಜನಿಯರಿಂಗ್ ಕಾಲೇಜಿನ ಕ್ರೀಡಾಂಗಣದಲ್ಲಿ ೧೯೫೪ರಲ್ಲಿ ಜರುಗಿದ ಅಂತರಕಾಲೇಜ ಅಥ್ಲೆಟಿಕ್ ಪಂದ್ಯಾಟಗಳಲ್ಲಿ ನಾನು ಭಾಗವಹಿಸಿದೆ. ಪಾರಿತೋಷಕ ದೊರೆಯುವ

ದೆಂಬ ಭರವಸೆಯೂ ನನಗಿತ್ತು. ಆದರೆ ನನ್ನ ದುರ್ದೈವ! ಮೊದಲನೆಯ ದಿನ ನಡೆದ ಉದ್ದಜಿಗಿತದ ಸ್ಪರ್ಧೆಯಲ್ಲಿ ನಾನು ಮೊದಲನೆಯ ನೆಗೆತವನ್ನು ಜಿಗಿದಾಗ ನನ್ನ ಮೊಳಕಾಲಿಗೆ ಪೆಟ್ಟುಬಿದ್ದು ಬಾತುಕೊಂಡಿತು. ಹೀಗಾಗಿ, ಉದ್ದಜಿಗಿತ, ತ್ರಿವಿಧ ಜಿಗಿತ ಮತ್ತು ಪೋಲ್‌ವಾಲ್ಟ್‌ಗಳಲ್ಲಿ ದೊರೆಯಬಹುದಾಗಿದ್ದ ಪಾರಿತೋಷಕಗಳಾವವೂ ಲಭಿಸಲಿಲ್ಲ. ಮನಸ್ಸಿಗೆ ಬಹಳ ನೋವಾಯಿತು. ಆದರೂ, ನಮ್ಮ ಕಾಲೇಜು ಜನರಲ್ ಚಾಂಪಿಯನ್ ಆಗಿದ್ದರಿಂದ, ನನ್ನ ಮಿತ್ರರ ಸಂತೋಷದಲ್ಲಿ ನಾನೂ ಪಾಲ್ಗೊಂಡೆ. ಆದರೆ ಸತತ ಪರಿಶ್ರಮದಿಂದಾಗಿ, ಜ್ಯೂನಿಯರ್ ಮತ್ತು ಸೀನಿಯರ್ ಬಿ.ಎ ದಲ್ಲಿದ್ದಾಗ ಮತ್ತು ಜ್ಯೂನಿಯರ್ ಎಂ.ಎ. ದಲ್ಲಿದ್ದಾಗ ವಿಶ್ವವಿದ್ಯಾಲಯಕ್ಕೆ ಆ ಮೂರೂ ಕ್ರೀಡೆಗಳಲ್ಲಿ ಪ್ರಥಮ ಸ್ಥಾನ ಪಡೆದಿದ್ದಲ್ಲದೆ, ಪೋಲ್‌ವಾಲ್ಟ್‌ನಲ್ಲಿ ಹೊಸ ದಾಖಲೆಯನ್ನೂ ಸ್ಥಾಪಿಸಿದೆ. ಕರ್ನಾಟಕ ಕಾಲೇಜಿನಲ್ಲಿ ಬಿ.ಎ. ಅಂತಿಮ ವರ್ಷದಲ್ಲಿದ್ದಾಗ, ನಾನೇ ಜನರಲ್ ಚಾಂಪಿಯನ್ ಮತ್ತು ನಾನೇ ಕಪ್ತಾನ. ಕರ್ನಾಟಕ ಕಾಲೇಜಿನ ಅಥ್ಲೆಟಿಕ್ ಪಾರಿತೋಷಕಗಳ ಬಹುಭಾಗವನ್ನು ನಾನೇ ಬಾಚಿಕೊಂಡೆ. ನಾನು ಬಿ.ಎ. ಅಂತಿಮ ವರ್ಷದಲ್ಲಿರುವಾಗ ಎಫ್. ಕೆ. ಪಾಟೀಲರು ತರಬೇತುದಾರರಾಗಿ ಸೇರಿದರು. ಅಂದಿನ ದಿನಗಳಲ್ಲಿ ಕರ್ನಾಟಕ ಕಾಲೇಜಿನ ಕ್ರೀಡಾಂಗಣ ಸಂಜೆಯ ಹೊತ್ತಿನಲ್ಲಿ ಕ್ರೀಡಾಪಟುಗಳಿಂದ ತುಂಬಿರುತ್ತಿತ್ತು. ಒಂದು ಕಡೆ ಕ್ರಿಕೆಟ್ ಆಟಗಾರರು, ಇನ್ನೊಂದೆಡೆ ಹಾಕಿ ಮತ್ತು ಫುಟ್‌ಬಾಲ್ ಆಟಗಾರರು, ಕೆಳಭಾಗದಲ್ಲಿ ವಾಲಿಬಾಲ್ ಆಟಗಾರರು, ಜಿಮ್‌ಖಾನಾ ಭವನದಲ್ಲಿ ಬ್ಯಾಡ್‌ಮಿಂಟನ್ ಮತ್ತು ಟೆಬಲ್‌ಟೆನಿಸ್ ಆಟಗಾರರು, ಟೆನಿಸ್‌ಕೋರ್ಟ್‌ಗಳಲ್ಲಿ ಟೆನಿಸ್‌ಪಟುಗಳು, ಮತ್ತೊಂದೆಡೆ ಕಬಡ್ಡಿ ಆಟಗಾರರು, ರಂಗಮಂಟಪದಲ್ಲಿ ನಟರು, ಗ್ರಂಥಾಲಯದಲ್ಲಿ ವಾಚಕರು, ಗ್ಯಾಲರಿಹಾಲ್‌ಗಳಲ್ಲಿ ವಾಕ್ಪಟುಗಳು, ಹೀಗೆ ವಿದ್ಯಾರ್ಥಿಗಳು ತಮ್ಮನ್ನು ತಮಗಿಷ್ಟವಾದ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದರು. "ಕಾಲಿದ್ದವನಿಗೆ ಆಟ, ಕಣ್ಣಿದ್ದವನಿಗೆ ನೋಟ", ಎಂಬುದು ಅಲ್ಲಿಯ ಮಟ್ಟಿಗೆ ಅಕ್ಷರಶಃ ಸತ್ಯವಾಗಿತ್ತು. ಅಥ್ಲೆಟಿಕ್ಸ್‌ನ ಹೊರತಾಗಿ ನಾನು ಕಾಲೇಜಿನ ಮತ್ತು ವಾಲಿಬಾಲ್ ಪಂಗಡಗಳಲ್ಲಿಯೂ ಇದ್ದೆ. ಆದರೆ ಆ ಕ್ರೀಡೆಗಳಲ್ಲಿ ನಾನು ಹೇಳಿಕೊಳ್ಳುವಂಥ ಪ್ರಗತಿ ಸಾಧಿಸಲಿಲ್ಲ.

ಇನ್ನು, ನಾನು ಕಾಲೇಜಿನ ಮಿತ್ರರನ್ನು ಸ್ಮರಿಸಿಕೊಳ್ಳುವೆ. ಪಾರ್ಥಸಾರಥಿ ಪಂಚಮುಖಿ ಪ್ರಾಥಮಿಕ ಶಾಲೆಯಿಂದಲೂ ನನ್ನ ಮಿತ್ರ. ಇಂದಿಗೂ ಅವನೊಂದಿಗೆ ನಾನು ನಿಕಟ ಸಂಬಂಧ ಇರಿಸಿಕೊಂಡಿರುವೆ. ನಮ್ಮ ಶಾಲೆಯಿಂದ ಬಂದವರಲ್ಲಿ ಅವನೊಬ್ಬನೇ ವರ್ಗದಲ್ಲಿದ್ದ. ಅವೇಂಬಾಳ ಎಂಬ ಹುಡುಗಿ ಪ್ರಥಮಸ್ಥಾನ ಪಡೆದರೆ ನಮ್ಮ ಪಾರ್ಥಸಾರಥಿ ದ್ವಿತೀಯನಾಗಿದ್ದ. ಶಿರಸಿಯ ಪಿ. ಎಮ್. ಹಗಡೆ ನನಗೆ ಮಿತ್ರನಾದ. ನಾನು ಅನೇಕ ಕ್ರೀಡಾಕೂಟಗಳಲ್ಲಿ ಭಾಗವಹಿಸುತ್ತಿದ್ದುದರಿಂದ,

ಅನಿವಾರ್ಯವಾಗಿ, ತರಗತಿಗಳಿಗೆ ಹೋಗಲು ಆಗುತ್ತಿರಲಿಲ್ಲ. ಹೀಗಾಗಿ ಪರಮೇಶ್ವರ ಹೆಗಡೆಯಿಂದ ಇಂಗ್ಲಿಷ್ ಮತ್ತು ಲಾಜಿಕ್ ವಿಷಯಗಳನ್ನು ಕೇಳಿ ತಿಳಿದುಕೊಳ್ಳುತ್ತಿದ್ದೆ. ಜೊತೆಗೆ, ಕಾಗದಗಾರನೆಂಬ ಶೋಕಿ ಮಿತ್ರನೂ, ಪರಮೇಶ್ವರನ ಹತ್ತಿರ, ನಂತರ ನನ್ನ ಹತ್ತಿರ ಪಾಠಗಳನ್ನು ಹೇಳಿಸಿಕೊಂಡು ತಿಳಿದುಕೊಳ್ಳಲು ತಿಣಕಾಡುತ್ತಿದ್ದ. ಪರಮೇಶ್ವರ ಉಪ್ಪುಂದ ನನ್ನ ಮತ್ತೊಬ್ಬ ಮಿತ್ರ. ನಾವಿಬ್ಬರೂ ಕೆಲವೊಮ್ಮೆ ಕೂಡಿ ಅಧ್ಯಯನ ಮಾಡುತ್ತಿದ್ದೆವು. ಅವನು ನನಗಿಂತ ಅಭ್ಯಾಸದಲ್ಲಿ ಚುರುಕು. ಅವನ ಲಿಪಿ ಕೂಡ ಸುಂದರ ಅವನು ನಂತರ ಐ ಪಿ.ಎಸ್. ಪಾಸಾಗಿ ಪೋಲೀಸ್ ಅಧಿಕಾರಿಯಾದ. ಉತ್ತರ ಕನ್ನಡ ಜಿಲ್ಲೆಯ ಎಸ್.ಪಿ ಕೂಡ ಆಗಿದ್ದ. ಆದರೆ ದುರ್ದೈವದಿಂದ ಆತ ೩೩ನೆಯ ವಯಸ್ಸಿನಲ್ಲಿ ಲಗ್ನವಾದ ನಂತರ ಮೃತನಾದ. ರಾಧಾಕೃಷ್ಣ, ವೈ ಎಚ್. ಕಲಾಲ, ಜೋಶಿ, ಹಲಗಣ್ಣನವರ, ವಾಲಿ, ಅರಮನಿ, ಚನ್ನಪ್ಪಗೌಡ ಮುಂತಾದವರೆಲ್ಲ ನನ್ನ ಮಿತ್ರರು. ನನಗೆ ಬುದ್ಧಿವಂತ ಮತ್ತು ಉಡಾಳ ವಿದ್ಯಾರ್ಥಿಗಳೊಂದಿಗೆ ಮೈತ್ರಿಯಿತ್ತು. ಆ ಎರಡು ಮನೋಭಾವನೆಗಳನ್ನು ಹೊಂದಿದವರ ಮಧ್ಯೆ ನಾನು ಕೊಂಡಿಯಾಗಿದ್ದೆ. ನನಗೆ ಎಲ್ಲರೂ ಮಿತ್ರರು. ಬಡ ಮನೆತನದವನಾಗಿದ್ದರಿಂದ ಸ್ವಭಾವತಃ ನಾನು ಸೌಮ್ಯನಾಗಿದ್ದೆ. ಹೀಗಾಗಿ, ಚುನಾವಣೆಯಲ್ಲಿ ಮತಗಳನ್ನು ನಾನು ಕೊಳ್ಳೆಹೊಡೆದೆ. ಗಿರೀಶ ಕಾರ್ನಾಡರು ನನಗಿಂತ ಮೂರು ವರ್ಷ ಮುಂದಿದ್ದರು. ಅಂತರ ವಿಶ್ವವಿದ್ಯಾಲಯಗಳ ಇಂಗ್ಲಿಷ್‌ನ ವಾಕ್ ಸ್ಪರ್ಧೆಯಲ್ಲಿ ಅವರು ಪ್ರಥಮರಾಗಿದ್ದರು. ತಮಾಷೆಗಾಗಿ ಮೈದಾನಿಗೆ ಆಡಲು ಬರುತ್ತಿದ್ದರು. ನಮ್ಮಿಬ್ಬರಿಗೂ ಪರಸ್ಪರ ಪರಿಚಯವಾಯಿತು. ಅದೇ ರೀತಿ, ಪ್ರಾಚಾರ್ಯ ಮೆನೆಜಿಸ್‌ರ ಮಗ ಲೆಸಿ, ನನಗಿಂತ ಒಂದು ವರ್ಷ ಮುಂದಿದ್ದರೂ, ಅವನು ಇತಿಹಾಸದ ವಿದ್ಯಾರ್ಥಿಯಾಗಿದ್ದರಿಂದ ಹತ್ತಿರದ ಮಿತ್ರನಾಗಿದ್ದ. ಅವನೂ ವಾಲ್ಟೇರಿನಲ್ಲಿ ನಡೆದ ಅಂತರ ವಿಶ್ವವಿದ್ಯಾಲಯಗಳ ವಾಕ್ ಸ್ಪರ್ಧೆಯಲ್ಲಿ ಪ್ರಥಮ ಸ್ಥಾನ ದೊರಕಿಸಿದ್ದ. ಅವನೊಬ್ಬ ಪ್ರತಿಭಾವಂತ ಮತ್ತು ತುಸು ಉಡಾಳ ವಿದ್ಯಾರ್ಥಿಯಾಗಿದ್ದ. ಬಿ.ಎ. ದಲ್ಲಿ ವಿಶ್ವವಿದ್ಯಾಲಯಕ್ಕೆ ಅವನು ಪ್ರಥಮ ಸ್ಥಾನವನ್ನೂ ಗಿಟ್ಟಿಸಿಕೊಂಡ.

ಆಟದ ಮೈದಾನದಲ್ಲಿಯ ಮಿತ್ರರ ಬಗ್ಗೆ ಕೆಲವು ಮಾತುಗಳನ್ನು ಹೇಳಲೇಬೇಕು. ಅನೇಕ ಕ್ರೀಡಾಪಟುಗಳು ನನ್ನ ಮಿತ್ರರಾಗಿದ್ದರು. ಕೆಲವರನ್ನು ಮಾತ್ರ ಉಲ್ಲೇಖಿಸುವೆ. ಪ್ರಾಥಮಿಕ ಶಾಲೆಯಿಂದಲೂ ಕ್ರೀಡಾಪಟುವಾಗಿ ನನ್ನ ಮಿತ್ರನಾಗಿದ್ದವನು ಸುರೇಶ ಕಳಸಾಪೂಡ. ಅವನು ಕ್ರಿಕೆಟ್‌ನಲ್ಲಿ ವಿಶ್ವವಿದ್ಯಾಲಯದ ಬ್ಲ್ಯೂ. ಒಳ್ಳೆಯ ಹಾಕಿ ಆಟಗಾರ ಕೂಡ ಆಗಿದ್ದ. ಅವನು ನನ್ನೊಂದಿಗೆ ಪೋಲವಾಲ್ಟ್ ಸಹಿತ ಮಾಡುತ್ತಿದ್ದ. ನನ್ನ ಹೈಸ್ಕೂಲಿನ ಮಿತ್ರ ಪ್ರಕಾಶ ನಾಡಕರ್ಣಿ ೧೦೦ ಮೀ. ಓಟದಲ್ಲಿ ಕಾಲೇಜಿನ ಮಟ್ಟದಲ್ಲಿ ಪಾರಿತೋಷಕ ಪಡೆದಿದ್ದ. ನನಗಿಂತ ಒಂದು ವರ್ಷ ಪ್ರಾಥಮಿಕ ಶಾಲೆಯಲ್ಲಿ ಹಿರಿಯನಾಗಿದ್ದ ಎನ್. ಕೆ. ಕುಲಕರ್ಣಿ ೧೫೦೦ಮೀ.

ಓಟದಲ್ಲಿ ವಿಶ್ವವಿದ್ಯಾಲಯದ ಬ್ಲೂ ಆಗಿದ್ದ. ಮಿಕ್ಕವರೆಲ್ಲ ಕಾಲೇಜನ್ನು ಸೇರಿದ ನಂತರ ಮಿತ್ರರಾದವರು. ಝಡ್. ಎ. ಕಿಲ್ಲೇದಾರ ಅಂತರ ವಿಶ್ವವಿದ್ಯಾಲಯದ ಹ್ಯಾಮರ ಥ್ರೋದಲ್ಲಿ ಪ್ರಥಮ, ಬಿ. ಎ. ಕಿಲ್ಲೇದಾರ ಅಂತರ ವಿಶ್ವವಿದ್ಯಾಲಯದ ಹ್ಯಾಮರ ಥ್ರೋದಲ್ಲಿ ತೃತೀಯ, ಕೆ. ಎನ್. ಬ್ರಿಗಾಂಝಾ– ಅಂತರ ವಿಶ್ವವಿದ್ಯಾಲಯದ ೧೫೦೦ ಮಿ. ಓಟದ ಸ್ಪರ್ಧೆಯಲ್ಲಿ ದ್ವಿತೀಯ, ವಿ. ಎಚ್. ಕಲಾದಗಿ– ಸ್ಪ್ರಿಂಟ್ಸ್ ಓಟಗಳಲ್ಲಿ ವಿಶ್ವವಿದ್ಯಾಲಯಕ್ಕೆ ಪ್ರಥಮ, ಎಸ್. ಕೆ. ಪಾಟೀಲ ೪೦೦ಮಿ. ಓಟದಲ್ಲಿ ವಿಶ್ವವಿದ್ಯಾಲಯದ ಬ್ಲೂ, ಪಿ.ಎ. ಜಾಧವ– ಎತ್ತರ ಜಿಗಿತ, ಅಡೆತಡೆಯ ಓಟ ಮತ್ತು ಬ್ಯಾಡ್‌ಮಿನ್ಟನ್ ಆಟಗಾರ, ಕೆ. ಬಿ. ಮಾಂಜರೇಕರ– ಹಾಕಿ ಮತ್ತು ಸ್ಪ್ರಿಂಟ್ ಓಟಗಳಲ್ಲಿ ವಿಶ್ವವಿದ್ಯಾಲಯದ ಬ್ಲೂ, ಡಿ. ಎಂ. ತ್ರಿಕನ್ನಾಡ- ಕ್ರಿಕೆಟ್, ಟೆಬಲ್ ಟೆನಿಸ್‌ಗಳಲ್ಲಿ ವಿಶ್ವವಿದ್ಯಾಲಯದ ಬ್ಲೂ ಮತ್ತು ಒಳ್ಳೆಯ ಅಥ್ಲೀಟ್ ಕೂಡ, ಪುನೀತ್ (ಕರ್ನಾಟಕ ವಿಶ್ವವಿದ್ಯಾಲಯದ ರಜಿಸ್ಟ್ರಾರ್ ಆಗಿದ್ದವರು) ಮತ್ತು ಡಿ.ಎಸ್ ಆರ್. ಜಮಖಂಡಿ– ಉತ್ತಮ ಫುಟ್‌ಬಾಲ್ ಆಟಗಾರರು; ಹೀಗೆ ಅನೇಕ ಮಿತ್ರರನ್ನು ನಾನು ಹೆಸರಿಸಬಹುದು ಅದೇ ರೀತಿ, ಕೆಲವು ಹೆಣ್ಣುಮಕ್ಕಳೂ ಹೆಸರುವಾಸಿಯಾಗಿದ್ದರು. ಚೌಗುಲೆ- ಎತ್ತರ ಜಿಗಿತ ಮತ್ತು ಅಡೆತಡೆಯ ಓಟದಲ್ಲಿ ಅಂತರ ವಿಶ್ವವಿದ್ಯಾಲಯದ ಕ್ರೀಡಾಕೂಟಕ್ಕೆ ಪ್ರಥಮಳಾಗಿದ್ದಳು. ನನಗಿಂತ ಚಿಕ್ಕವಳಾದ ಸಂಯುಕ್ತಾ ಕೆಸರಕೋಡಿ, ಅಂತರ ವಿಶ್ವವಿದ್ಯಾಲಯಗಳ ಕ್ರೀಡಾಕೂಟದಲ್ಲಿ ಕಬ್ಬಿಣಗುಂಡು ಎಸೆತ ಮತ್ತು ಚಕ್ರ ಎಸೆತಗಳಲ್ಲಿ ಪಾರಿತೋಷಕ ಪಡೆದಿದ್ದಳು. ಮಿಕ್ಕವರಿಗಿಂತ ಇವರಿಬ್ಬರ ಪ್ರತಿಭೆ ವಿಶೇಷವಾಗಿತ್ತು. ಅಂತರ ಕಾಲೇಜುಗಳ ಕ್ರೀಡಾಕೂಟ ಸಮೀಪಿಸುತ್ತಿದ್ದಂತೆ, ಆರಿಸಲ್ಪಟ್ಟ ಕ್ರೀಡಾಪಟುಗಳಿಗೆ ಹಾಲು, ತತ್ತಿ, ಚಿಕ್ಕು, ಮೋಸಂಬಿ ಕೊಡಲಾಗುತ್ತಿತ್ತು. ನಾನು ತತ್ತಿಯನ್ನು ಮಾತ್ರ ಸೇವಿಸುತ್ತಿರಲಿಲ್ಲ. ನಾವೆಲ್ಲ ಮಿತ್ರರು ಆಗಾಗ ಧಾರವಾಡ ರೆಸ್ಟೋರಂಟ್‌ಗೆ ಹೋಗಿ ಅಲ್ಪೋಪಹಾರ ಮಾಡುತ್ತಿದ್ದೆವು. ಜಿಲ್ಲಾ, ವಿಭಾಗೀಯ, ರಾಜ್ಯ ಮತ್ತು ಅಂತರವಿಶ್ವವಿದ್ಯಾಲಯಗಳ ಕ್ರೀಡಾಕೂಟಗಳಲ್ಲಿ ಭಾಗವಹಿಸುವ ಅರ್ಹತೆಯನ್ನು ನಮ್ಮ ಕಾಲೇಜಿನ ಅನೇಕ ಕ್ರೀಡಾಪಟುಗಳು ಹೊಂದಿದ್ದರು. ವಿಶ್ವವಿದ್ಯಾಲಯದ ಟೀಮುಗಳಲ್ಲಿ ಕರ್ನಾಟಕ ಕಾಲೇಜಿನ ಕ್ರೀಡಾಪಟುಗಳದ್ದೇ ಸಿಂಹಪಾಲು.

ಬಲಭೀಮ ವ್ಯಾಯಾಮ ಶಾಲೆ ಮತ್ತು ಕೆರೂರ ಮಾಸ್ತರರನ್ನು ಸ್ಮರಿಸಿಕೊಳ್ಳಲೇಬೇಕು. ಮಾಧ್ಯಮಿಕ ಶಾಲೆಯಲ್ಲಿರುವಾಗಲೇ ನನಗೂ ಮತ್ತು ಬಲಭೀಮ ವ್ಯಾಯಾಮ ಶಾಲೆಗೂ ಸಂಬಂಧ ಪ್ರಾರಂಭವಾಯಿತು. ವ್ಯಾಯಾಮ ಶಾಲೆಯಲ್ಲಿ ಸೂರ್ಯನಮಸ್ಕಾರ, ಕುಸ್ತಿ, ಮಲಕಂಬ, ಲೋಡು ತಿರುಗಿಸುವದು, ರಿಂಗ್ ಆಟ, ಇತ್ಯಾದಿ ಕಸರತ್ತುಗಳನ್ನು ಪ್ರತಿದಿನ ಸಂಜೆ ಮಾಡಿ, ಇವೆಲ್ಲ ಸ್ಪರ್ಧೆಗಳಲ್ಲಿ ಪ್ರಥಮ ಸ್ಥಾನವನ್ನು ಅನೇಕ ವರ್ಷಗಳ ಕಾಲ ಪಡೆಯುತ್ತಲೇ ಬಂದೆ. ಪ್ರಿನ್ಸಿಪಾಲ್

ಫ್ಯಾರೆನ್, ಪ್ರಿನ್ಸಿಪಾಲ್ ಗೋಖಲೆ ಮುಂತಾದವರು ಗಣೇಶ ಚತುರ್ಥಿಯಂದು ನಮಗೆ ವ್ಯಾಯಾಮ ಶಾಲೆಯಲ್ಲಿ ಪಾರಿತೋಷಕ ವಿತರಿಸುತ್ತಿದ್ದರು. ಬಲಭೀಮ ವ್ಯಾಯಾಮ ಶಾಲೆಯ ಕೆರೂರು ಮಾಸ್ತರರು ಭೀಮಕಾಯದ ವ್ಯಕ್ತಿ. ಜೋಡು, ಪಂಚೆ, ಅಂಗಿ, ಬಿಳಿ ಟೊಪ್ಪಿ, ಗೌರವರ್ಣ, ಇತ್ಯಾದಿ ಲಕ್ಷಣಗಳಿಂದ ಕೂಡಿದವರೇ ಕೆರೂರು ಮಾಸ್ತರರು. ವ್ಯಾಯಾಮ ಆದನಂತರ ಅವರೊಂದಿಗೆ ಹರಟೆ ಹೊಡೆಯುವದೆಂದರೆ ನಮಗೆಲ್ಲ ಖುಶಿ. ಅನೇಕ ಸಲ ನಾನು ಅಲ್ಲಿಯೇ ಮಲಗಿ, ಅಧ್ಯಯನ ಕೂಡ ಅಲ್ಲೇ ಮಾಡುತ್ತಿದ್ದೆ. ಜಯತೀರ್ಥ ಗುಂಜೀಕರ, ಮೋಹನ ಪ್ರಭು, ದುಬೇ, ಶಾಮ ಹಾನಗಲ್, ಗಲಗಲಿ, ನಾಯ್ಡು, ಇವರೆಲ್ಲ ನನ್ನ ಅಲ್ಲಿಯ ಮಿತ್ರರು. ಕರ್ನಾಟಕ ಕಾಲೇಜಿನಲ್ಲಿದ್ದಾಗಲೂ ವ್ಯಾಯಾಮ ಶಾಲೆಯಲ್ಲಿ ನನ್ನ ಕಸರತ್ತು ಹಾಗೆಯೆ ಸಾಗಿತ್ತು. ಅಲ್ಲಿ ನನ್ನನ್ನು ದೈಹಿಕ ಶಿಕ್ಷಕನೆಂದೂ ನೇಮಿಸಲಾಗಿತ್ತು.

ಈ ಹಿಂದೆಯೇ ಹೇಳಬೇಕಾದ ಒಂದೆರಡು ಸಂಗತಿಗಳನ್ನು ತಿಳಿಸಲು ಮರೆತಿದ್ದೆ. ಮೊದಲನೆಯದಾಗಿ, ನಾನು ಮತ್ತು ಅಮ್ಮ ನಾಡಕರ್ಣಿ ಕಂಪೌಂಡಿನಿಂದ ಟಿ. ಎಂ. ಪಾಟೀಲರ ಕಂಪೌಂಡಿಗೆ ಬಂದಿದ್ದು ಮತ್ತು ಎರಡನೆಯದಾಗಿ, ನನ್ನ ಅಕ್ಕ ಮೃಣಾಲಿನಿ ನೌಕರಿಗಾಗಿ ಮುಂಬಯಿಗೆ ಹೋಗಿದ್ದು. ನಾನು ಎಸ್. ಎಸ್. ಎಲ್. ಸಿ. ಗೆ ಬಂದೊಡನೆ ನಾವು ಗೋಪಾಲಪುರದ ನಾಡಕರ್ಣಿ ಕಂಪೌಂಡಿನಿಂದ ಪ್ರೊಫೆಸರ್ ಟಿ. ಎಂ. ಪಾಟೀಲರ ಕಂಪೌಂಡಿನಲ್ಲಿರುವ ಮನೆಗೆ ಬಂದೆವು. ಆ ಮನೆಗೆ ತಿಂಗಳೊಂದಕ್ಕೆ ಹತ್ತುರೂಪಾಯಿ ಬಾಡಿಗೆ. ನಾಡಕರ್ಣಿಯವರ ಕಂಪೌಂಡಿನಲ್ಲಿದ್ದಾಗ ಭಾಗೀರಥಕ್ಕ ನಮ್ಮ ಮನೆಯಲ್ಲಿದ್ದುಕೊಂಡು ಟ್ರೇನಿಂಗ್ ಕಾಲೇಜಿಗೆ ಹೋಗುತ್ತಿದ್ದಳು. ಅವಳ ಹಿರಿಯ ಮಗಳಾದ ವೀಣಾಳನ್ನು ನಾನು ವಿವಾಹವಾದ ನಂತರ ಅವಳು ನನಗೆ ಅತ್ತೆಯಾದಳು. ಅವಳ ಗಂಡ ದತ್ತೂಭಾವ ನನಗೆ ದತ್ತೂಮಾವನಾದ. ಮಾಳಮಡ್ಡಿಯ ಟಿ. ಎಂ. ಪಾಟೀಲರ ಮನೆಗೆ ಬಂದನಂತರ, ನಮ್ಮ ಮನೆಯಲ್ಲಿ ಹೊನ್ನೇಗದ್ದೆಯ ಸೀತಕ್ಕನ ಮಗಳಾದ ಲಲಿತಾ ಇರತೊಡಗಿದಳು. ಕೆ. ಇ. ಬೋರ್ಡ್ ಮಾಧ್ಯಮಿಕ ಶಾಲೆಯಲ್ಲಿ ೫ನೆಯ ತರಗತಿಯಲ್ಲಿ ಓದಲು ಪ್ರಾರಂಭಿಸಿದಳು. ನಮ್ಮ ಮನೆಗೆ ಹಳದೋಟದ ನರಸಿಂಹಭಾವನೂ ಕರ್ನಾಟಕ ಕಾಲೇಜಿನಲ್ಲಿ ಓದಲು ಬಂದ. ಹೀಗಾಗಿ, ನಮ್ಮ ಕುಟುಂಬ ಬೆಳೆಯಿತು. ನನ್ನ ಅಮ್ಮ ಟಂಕಸಾಲಿಯವರ ಮಕ್ಕಳಾದ ಅಕ್ಕಾ, ನಿರ್ಮಲಾ, ಸುರೇಶ, ಹನುಮಂತ ಮತ್ತು ಮಧು, ಇವರಿಗೆ ಅಡಿಗೆ ಮಾಡಿ ಊಟ ಬಡಿಸುತ್ತಿದ್ದಳು. ನರಸಿಂಹಭಾವನು ನಮ್ಮ ಮನೆಯಲ್ಲಿದ್ದು ಪದವೀಧರನಾದ; ಲಲಿತಾಳೂ ಎಸ್.ಎಸ್.ಎಲ್.ಸಿ. ಪೂರೈಸಿದಳು.

ಇನ್ನೊಂದು ಸಂಗತಿಯೆಂದರೆ, ನನ್ನ ಅಕ್ಕ ಮೃಣಾಲಿನಿ ವನಿತಾ ಸೇವಾ ಸಮಾಜದಲ್ಲಿ ಟ್ರೇನಿಂಗ್ ಕಾಲೇಜ ಅಧ್ಯಯನ ಮುಗಿಸಿ ನೌಕರಿಗಾಗಿ ಮುಂಬಯಿಗೆ ಹೋಗಿದ್ದು. ನಾನು ಆಗ ಹೈಸ್ಕೂಲಿನಲ್ಲಿ ಓದುತ್ತಿದ್ದೆ. ಅಂದಿನ ಕಾಲದಲ್ಲಿ ಆ ಚಿಕ್ಕ

ಹೆಣ್ಣುಮಗಳು ಧೈರ್ಯದಿಂದ ತಾನೊಬ್ಬಳೇ ಮುಂಬೈಗೆ ಹೋಗಿ ಪ್ರಾಥಮಿಕ ಶಾಲೆಯೊಂದರಲ್ಲಿ ಶಿಕ್ಷಕಿಯಾಗಿ ದುಡಿಯಲು ಪ್ರಾರಂಭಿಸಿದ್ದು ನಿಜವಾಗಿಯೂ ಮೆಚ್ಚತಕ್ಕದ್ದೇ! ತಾನು ದುಡಿದ ಸಂಬಳದಲ್ಲಿ ಸ್ವಲ್ಪ ಉಳಿತಾಯ ಮಾಡಿ, ಧಾರವಾಡದಲ್ಲಿ ನಮ್ಮ ಕುಟುಂಬಕ್ಕೂ ಹಣ ಕಳಿಸುತ್ತಿದ್ದಳು. ಆ ಸಹಾಯ ನಮಗೆ ಬಹಳ ಪ್ರಯೋಜಕವಾಯಿತು. ನಾನು ಇಂಟರ್‌ದಲ್ಲಿ ಓದುತ್ತಿದ್ದಾಗ ಬಾಡದಕೆರೆ ಭಟ್ಟರ ಮನೆಯ ಗೋಪಾಲನೊಂದಿಗೆ ನನ್ನ ಹಲಸಿನಕಾಯಿ ಮಾವನ ಮನೆಯಲ್ಲಿ ಅವಳ ಲಗ್ನವಾಯಿತು. ಈ ಮೊದಲೇ ಹಲಸಿನಕಾಯಿ ಮಾವನ ಮನೆಯಲ್ಲಿ ನನ್ನ ಉಪನಯನವೂ ಆಗಿತ್ತು. ಗೋಪಾಲ ಭಾವನೂ ಆಗ ಮುಂಬೈಯಲ್ಲಿ ಪೋಲೀಸ್ ಇಲಾಖೆಯಲ್ಲಿದ್ದನಂತೆ. ನಂತರ ಅವನು ಕ್ರಮವಾಗಿ ಎ. ಜಿ. ಆಫೀಸಿನಲ್ಲಿ, ಜಾಯ್ ಐಸ್‌ಕ್ರೀಮ್ ಕಂಪನಿಯಲ್ಲಿ ವ್ಯವಸ್ಥಾಪಕನಾಗಿ, ಫಿಪ್ಸನ್ ಮತ್ತು ಕಂಪನಿಯಲ್ಲಿ ಮ್ಯಾನೇಜರ ಆಗಿ, ಮೈಸೂರು ಲ್ಯಾಂಪ್ಸ್‌ನಲ್ಲಿ ಮ್ಯಾನೇಜರ ಆಗಿ, ಮಜದಾ ಲ್ಯಾಂಪ್ಸ್‌ನಲ್ಲಿ ಮ್ಯಾನೇಜರನಾಗಿ, ಫಿಪ್ಸನ್‌ನಲ್ಲಿ ಮ್ಯಾನೇಜರನಾಗಿ ಮತ್ತು ಉಗಾರ ಸಕ್ಕರೆ ಕಾರ್ಖಾನೆಯಲ್ಲಿ ಮ್ಯಾನೇಜರನಾಗಿ ಸೇವೆ ಸಲ್ಲಿಸಿ ಇತ್ತೀಚೆಗೆ ನಿವೃತ್ತನಾಗಿದ್ದಾನೆ. ನಂತರ ಅವನ ಕುಟುಂಬ ಮುಂಬೈದಿಂದ ಬೆಂಗಳೂರಿಗೆ ಬಂದು ನೆಲೆಸಿತು.

## ಸ್ನಾತಕೋತ್ತರ ವಿಭಾಗದಲ್ಲಿ

ನಾನು ೧೯೬೧ರಲ್ಲಿ ಬಿ. ಎ. ಆನರ್ಸ್‌ದಲ್ಲಿ ಪಾಸಾದ ನಂತರ ಕರ್ನಾಟಕ ವಿಶ್ವವಿದ್ಯಾಲಯದ ಇತಿಹಾಸ ವಿಭಾಗದಲ್ಲಿ ಎಂ. ಎ. ಓದಲು ಪ್ರಾರಂಭಿಸಿದೆ. ರ್‍ಯಾಂಗಲರ್ ಡಿ. ಸಿ. ಪಾವಟೆ ಅಂದಿನ ಕುಲಪತಿಗಳು. ಎಸ್. ಎಸ್. ಒಡೆಯರರು ಕುಲಸಚಿವರು. ಪಾವಟೆಯವರಿಗೆ ಆಗ ದೊಡ್ಡ ಹೆಸರು. ರಾಷ್ಟ್ರ ಮತ್ತು ಅಂತರ ರಾಷ್ಟ್ರೀಯ ಮಟ್ಟದಲ್ಲಿ ಹೆಸರುವಾಸಿಯಾದ ವಿದ್ವಾಂಸರನ್ನು ಪಾವಟೆಯವರು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಆಮಂತ್ರಿಸಿ, ಅವರನ್ನೆಲ್ಲ ಬೇರೆ ಬೇರೆ ವಿಷಯಗಳಿಗೆ ಮುಖ್ಯಸ್ಥರನ್ನಾಗಿ ನೇಮಿಸಿದ್ದರು. ರಾಷ್ಟ್ರ ಪತ್ರಾಗಾರ ಇಲಾಖೆಯ ನಿವೃತ್ತ ನಿರ್ದೇಶಕರಾದ ಡಾ. ಬಿ. ಎ. ಸಾಲೆತೊರೆಯವರು ಇತಿಹಾಸ ವಿಭಾಗದ ಆಗಿನ ಮುಖ್ಯಸ್ಥರು. ಅವರು ಅಂತರರಾಷ್ಟ್ರೀಯ ಮಟ್ಟದ ಪ್ರತಿಭಾವಂತ ಪ್ರಾಧ್ಯಾಪಕರಾಗಿದ್ದರು. ವಿಷಯದ ಮೇಲೆ ಮತ್ತು ಆಂಗ್ಲ ಭಾಷೆಯ ಮೇಲೆ ಅವರಿಗೆ ಎಷ್ಟೊಂದು ಪ್ರಭುತ್ವವಿತ್ತೆಂದರೆ, ಅವರ ಭಾಷಣವನ್ನು ಕೇಳಿದವರಿಗೇ ಗೊತ್ತು. ಅವರೊಬ್ಬ ಮಹಾ ಸಂಶೋಧಕ, ಪ್ರಾಧ್ಯಾಪಕ, ವಾಗ್ಮಿ. ಸೂಟು, ಬೂಟು ಧರಿಸುತ್ತಿದ್ದ ಸಾಲೆತೊರೆಯವರು ನೋಡಲು ಐರೋಪ್ಯನಂತೆ ಕಾಣುತ್ತಿದ್ದರು. ದುಂಡಗಿನ ತೇಜಃಪುಂಜವಾದ ಅವರ ಮುಖ, ಕೆಂಚಕೂದಲು, ಕಣ್ಣುಗಳಿಗೆ ಚಾಳೀಸು, ಅಷ್ಟೊಂದು ಎತ್ತರವಲ್ಲದ ದೇಹ, ಗೌರವರ್ಣದ ದುಂಡಗಿನ ಮೈಕಟ್ಟು, ನಡೆ-ನುಡಿಗಳಲ್ಲಿ ಗಾಂಭೀರ್ಯ, ಇವೇ ಡಾ. ಸಾಲೆತೊರೆಯವರ ಲಕ್ಷಣಗಳು. ಅವರು ವಿದ್ಯಾರ್ಥಿ

ಗಳೊಂದಿಗೆ ಸಹೃದಯಿಗಳಾಗಿದ್ದರೂ, ವಿದ್ಯಾರ್ಥಿಗಳು ಅವರೊಂದಿಗೆ ಮಾತನಾಡಲು ಹೆದರುತ್ತಿದ್ದರು. ಅವರೆಂದರೆ ವಿದ್ಯಾರ್ಥಿಗಳಿಗೆ ಅತ್ಯಂತ ಭಯ-ಭಕ್ತಿ. ಅವರು ನಮಗೆ ಆಧುನಿಕ ಯುರೋಪದ ಚರಿತ್ರೆಯನ್ನು ಕಲಿಸುತ್ತಿದ್ದರು. ಆಗ ಜ್ಯೂನಿಯರ್ ಮತ್ತು ಸೀನಿಯರ್ ಎಂ. ಎ ವಿದ್ಯಾರ್ಥಿಗಳನ್ನು ಒಂದೇ ಕೊಠಡಿಯಲ್ಲಿ ಕೂಡ್ರಿಸಿ ಪಾಠ ಮಾಡಲಾಗುತ್ತಿತ್ತು. ಅಮೆರಿಕೆಯ ಚರಿತ್ರೆಯನ್ನು ಡಾ. ಜಿ. ಎಸ್. ದೀಕ್ಷಿತರು ಕಲಿಸಲು ಪ್ರಾರಂಭಿಸಿದ್ದರು. ಆದರೆ ಅವರು ಹೆಚ್ಚಿನ ಅಧ್ಯಯನಕ್ಕಾಗಿ ಒಂದು ವರ್ಷಕಾಲ ಅಮೆರಿಕೆಗೆ ತೆರಳಿದರು. ಆ ಅವಧಿಯಲ್ಲಿ ಅಮೆರಿಕೆಯ ಇತಿಹಾಸವನ್ನು ಅಮೆರಿಕೆಯ ವರ್ಜಿನಿಯಾದ ಡಾ. ಫರ್ನ್‌ಬ್ಯಾಕ್‌ರು ಕಲಿಸುತ್ತಿದ್ದರು. ಆದರೆ ಅವರು ಕಲಿಸುವ ಪದ್ಧತಿ ವಿದ್ಯಾರ್ಥಿಗಳಿಗೆ ಹಿಡಿಸದೆ, ಡಾ. ಸಾಲೆತೊರೆಯವರಿಗೆ ದೂರು ನೀಡಲಾಯಿತು. ಸಾಲೆತೊರೆಯವರು ಅವರು ಕಲಿಸುವದನ್ನೇ ಬಂದು ಮಾಡಿಸಿದರು. ಇನ್ನೊಬ್ಬ ಪ್ರಾಧ್ಯಾಪಕರು– ಪಾಂಡುರಂಗ ದೇಸಾಯಿಯವರು. ಕುಳ್ಳನೆಯ, ಸಾಮಾನ್ಯ ವ್ಯಕಟ್ಟಿನ ಸೂಟುಧಾರಿಯಾದ ಪಿ. ಬಿ. ದೇಸಾಯಿ ಯವರು ಕಪ್ಪುಟೊಪ್ಪಿ ಹಾಕುತ್ತಿದ್ದರು. ಅವರು ಕರ್ನಾಟಕದ ಪ್ರಸಿದ್ಧ ಇತಿಹಾಸ ಸಂಶೋಧಕರಾಗಿದ್ದರು. ವಿಜಯನಗರದ ಇತಿಹಾಸ ಕಲಿಸುವಾಗ ಅವರಿಗೆ ಉತ್ಸಾಹ ತುಂಬಿತುಳುಕುತ್ತಿತ್ತು. ಬ್ರಿಟಿಷ್ ಸಂವಿಧಾನ ಕಲಿಸಲು ಕಡ್ಡೀಪುಡಿ ಯವರು ಕರ್ನಾಟಕ ಕಾಲೇಜಿನಿಂದ ಬರುತ್ತಿದ್ದರು. ನಾನು ಎಂ. ಎ. ಅಂತಿಮ ವರ್ಷ ಓದುವಾಗ ಕರ್ನಾಟಕ ಕಾಲೇಜಿನ ಎಸ್. ಶೆಟ್ಟರ ಅವರು ವಿಶ್ವವಿದ್ಯಾಲಯ ವನ್ನು ಸೇರಿ, ಹಿಸ್ಟಾರಿಕಲ್ ಮೆಥೆಡ್ ಕಲಿಸಲು ಪ್ರಾರಂಭಿಸಿದರು. ಆಗ ಸಾಲೆತೊರೆ ಯವರು ನಿವೃತ್ತರಾಗಿದ್ದರು. ಅಷ್ಟೊತ್ತಿಗಾಗಲೇ ಅಮೆರಿಕೆಯಿಂದ ಡಾ. ಜಿ. ಎಸ್. ದೀಕ್ಷಿತರು ಧಾರವಾಡಕ್ಕೆ ಬಂದಿದ್ದರು. ಅವರು 'ಪ್ರಾಚೀನ ಭಾರತದ ರಾಜಕೀಯ ವಿಚಾರಗಳು ಮತ್ತು ಸಂಸ್ಥೆಗಳು' ಎಂಬ ವಿಷಯ ಕಲಿಸಲು ಪ್ರಾರಂಭಿಸಿದರು. ಸುಮಾರು ೫'-೭" ಎತ್ತರ, ತೆಳುವಾದ ಆದರೆ ಆರೋಗ್ಯಕರವಾದ ವ್ಯಕಟ್ಟು, ಪುಲ್‌ಸೂಟ್‌ಧಾರಿಯಾದ ಡಾ. ಜಿ. ಎಸ್. ದೀಕ್ಷಿತರು, ಸಾಲೆತೊರೆಯವರಂತೆ, ನೋಡಲು ಐರೋಪ್ಯರಂತೆ ಕಾಣುತ್ತಿದ್ದರು. ಸುದೈವದಿಂದ ೮೮ ವರ್ಷದ ಡಾ. ದೀಕ್ಷಿತರು ಇತಿಹಾಸ ವಿದ್ವಾಂಸರೆಲ್ಲರಿಗೆ ಮುಕುಟಪ್ರಾಯರಾಗಿ ಇಂದಿಗೂ ನಮ್ಮೊಂದಿಗಿದ್ದಾರೆ. ಅವರು ಅಚ್ಚುಕಟ್ಟಿನ ಶಿಸ್ತಿನ ವ್ಯಕ್ತಿ. ವೇಳೆಗೆ ಮತ್ತು ಕೆಲಸಕ್ಕೆ ಎಂಥ ಮಹತ್ವ ಕೊಡಬೇಕೆಂಬುದನ್ನು ಇತರರು ಅವರಿಂದ ಕಲಿಯಬೇಕು. ಸದಾ ಅಧ್ಯಯನ ನಿರತರು. ತಾವು ಕಲಿಸಬೇಕಾದ ವಿಷಯವನ್ನು ವ್ಯವಸ್ಥಿತವಾಗಿ, ವಿದ್ಯಾರ್ಥಿಗಳಿಗೆ ಮನದಟ್ಟಾಗುವಂತೆ ಕಲಿಸುವ ವಿಶೇಷ ಆಸಕ್ತಿ ಮತ್ತು ಪ್ರತಿಭೆ ಅವರಲ್ಲಿತ್ತು. ಅವರು ಯಾರನ್ನೂ, ಎಂದೂ ತೆಗಳಿದವರಲ್ಲ. ಅವರೊಬ್ಬ ಪ್ರಸಿದ್ಧ ಟೆನಿಸ್ ಆಟಗಾರರಾಗಿದ್ದರಿಂದಲೋ ಏನೋ, ಕ್ರೀಡಾಪಟುವಾದ ನನ್ನನ್ನು ಕಂಡರೆ ವಿಶೇಷ ಪ್ರೀತಿ. ಒಮ್ಮೊಮ್ಮೆ ತಾವು ಊರಿನಲ್ಲಿಲ್ಲದಾಗ, ಇಂದಿನ ಪಾವಟೆನಗರ

(ಅಂದಿನ ಭೋಟಾ ಮಹಾಬಲೇಶ್ವರ)ದಲ್ಲಿದ್ದ ತಮ್ಮ ಮನೆಯನ್ನು ನೋಡಿಕೊಳ್ಳಲು ನನಗೆ ಹೇಳಿ ಹೋಗುತ್ತಿದ್ದರು. ನನ್ನ ಮೇಲೆ ಅವರಿಗೆ ಅಷ್ಟು ನಂಬುಗೆ. ನನ್ನ ಮತ್ತು ಅವರ ನಡುವಿನ ಇಂಥ ಸಂಬಂಧ ಇಂದಿಗೂ ಸಾಗಿಬಂದಿದೆ.

ತರಗತಿಯ ಪಾಠಗಳು ಮುಗಿದ ಮೇಲೆ ಮತ್ತು ಕೆಲವೊಮ್ಮೆ ಮಧ್ಯಂತರ ಅವಧಿಯಲ್ಲಿ ಕನ್ನಡ ಸಂಶೋಧನಾ ಸಂಸ್ಥೆಯ ಗ್ರಂಥಾಲಯ, ಇಲ್ಲವೆ, ಪ್ರಧಾನ ಗ್ರಂಥಾಲಯಕ್ಕೆ ಹೋಗಿ ಅಧ್ಯಯನ ಮಾಡುತ್ತಿದ್ದೆ. ಅಲ್ಲಿ ನನ್ನ ಆತ್ಮೀಯ ಮಿತ್ರರಾಗಿದ್ದವರು ಗದುಗಿನ ಡಿ. ಟಿ. ಜೋಶಿ. ಜೋಶಿ ಬುದ್ಧಿವಂತ ಮತ್ತು ಪರಿಶ್ರಮ ಜೀವಿ. ನಾನು ಜೋಶಿ ಕೂಡಿ ವಿಶ್ವವಿದ್ಯಾಲಯದ ಕೆಳಭಾಗದಲ್ಲಿರುವ ಮಾವಿನ ತೋಪಿನಲ್ಲಿ, ಇಲ್ಲವೆ, ನನ್ನ ಮನೆಯಲ್ಲಿ ಅಭ್ಯಾಸ ಮಾಡುತ್ತಿದ್ದೆವು. ನಾನು ರಜೆಯದಿನಗಳಲ್ಲಿ ಕರ್ನಾಟಕ ಕಾಲೇಜಿನ ಯುನಿಯನ್ ಹಾಸ್ಟೆಲ್ ಎದುರಿಗಿನ ಮಾವಿನ ತೋಪಿನಲ್ಲಿ ಕುಳಿತು ಅಧ್ಯಯನ ಮಾಡುತ್ತಿದ್ದೆ. ಮೊದಲಿನಿಂದಲೂ ನನಗೆ ನಿಸರ್ಗದ ಮಡಿಲಲ್ಲಿ ಅಧ್ಯಯನ ಮಾಡುವದೆಂದರೆ ಇಷ್ಟ. ನಾಲ್ಕು ಗೋಡೆಗಳ ಮಧ್ಯೆ ಸದಾಕಾಲ ಇರಲು ನನಗೆ ಇಂದಿಗೂ ಸಾಧ್ಯವಿಲ್ಲ. ನಿಸರ್ಗ ನನಗೆ ಮೊದಲಿನಿಂದಲೂ ವಿಶೇಷ ಚೈತನ್ಯ ನೀಡುತ್ತ ಬಂದಿದೆ. ಡಿ. ಟಿ. ಜೋಶಿಗೆ ಶಿಷ್ಯವೇತನ ದೊರೆತಂತೆ ಸುದೈವದಿಂದ ಸ್ವಲ್ಪ ತಡವಾಗಿ ಆದರೂ ನನಗೂ ಕನ್ನಡ ಸಂಶೋಧನಾ ಸಂಸ್ಥೆಯಿಂದ ಪ್ರತಿ ತಿಂಗಳಿಗೆ ೫೦ ರೂಪಾಯಿಗಳಂತೆ ಶಿಷ್ಯವೇತನ ದೊರೆಯಿತು. ಡಾ॥ ಜಿ. ಎಸ್. ದೀಕ್ಷಿತ, ಡಾ॥ ಪಿ. ಬಿ. ದೇಸಾಯಿ, ಪ್ರಾಚಾರ್ಯ ಡಾ॥ ಮೆನೆಜಿಸ್ ಡಾ॥ ಎನ್ ಆರ್. ತಾವಡೆಯವರು ಈ ಶಿಷ್ಯವೇತನ ಕೊಡಿಸಲು ಸಹಾಯಕರಾದರು. ಶಿಷ್ಯವೇತನ ದೊರೆತೊಡನೆ ೨೪೫ ರೂಪಾಯಿಗಳನ್ನು ಕೊಟ್ಟು ಛಡ್ಡಾನ ಅಂಗಡಿಯಿಂದ ಹೊಸ ಫಿಲಿಪ್ಸ್ ಸೈಕಲ್ ಖರೀದಿಸಿದೆ. ಮುಂದಿನ ೧೪ ವರ್ಷ ಪರ್ಯಂತ ನಾನು ಆ ಸೈಕಲ್ ಸವಾರಿ ಮಾಡಿ, ಖರೀದಿಸಿದ ದುಡ್ಡಿಗೇ ಮಾರಿದೆ.

ಎಂ. ಎ. ಓದುತ್ತಿರುವಾಗಲೂ ನನ್ನ ಕ್ರೀಡಾ ಚಟುವಟಿಕೆಗಳನ್ನು ಮುಂದುವರಿಸಿದೆ. ೧೯೬೧ ರಲ್ಲಿ ವಿಶ್ವವಿದ್ಯಾಲಯದ ಕ್ರೀಡಾಕೂಟದಲ್ಲಿ ಮೂರು ಪ್ರಥಮ ಪಾರಿತೋಷಕಗಳನ್ನು ಪಡೆದು ತಿರುಪತಿಯಲ್ಲಿಯ ಅಂತರ ವಿಶ್ವವಿದ್ಯಾಲಯಗಳ ಕ್ರೀಡಾಕೂಟಕ್ಕೆ ಕರ್ನಾಟಕ ವಿಶ್ವವಿದ್ಯಾಲಯದ ಕಪ್ತಾನನಾಗಿ ಆಯ್ಕೆಗೊಂಡೆ. ೧೯೫೯ ರಲ್ಲಿ ಕಾನಪುರ ಮತ್ತು ೧೯೬೦ ರಲ್ಲಿ ಲಖನೌಗಳಲ್ಲಿ ನಡೆದ ಅಂತರವಿಶ್ವ ವಿದ್ಯಾಲಯಗಳ ಕ್ರೀಡಾಕೂಟದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಪ್ರತಿನಿಧಿಯಾಗಿ ಉದ್ದ ಜಿಗಿತ, ತ್ರಿವಿಧ ಜಿಗಿತ ಮತ್ತು ಪೋಲ್‌ವಾಲ್ಟ್‌ಗಳಲ್ಲಿ ಭಾಗವಹಿಸಿದೆ. ಮೈಸೂರಿನಲ್ಲಿ ನಡೆದ ದಸರಾ ಕ್ರೀಡಾಕೂಟದಲ್ಲಿಯೂ ಪಾರಿತೋಷಕಗಳನ್ನು ಪಡೆದೆ. ಎಂ. ಎ. ಓದುವಾಗ ತರಗತಿಯ ಪ್ರತಿನಿಧಿಯಾಗಿ ಕಾರ್ಯನಿರ್ವಹಿಸಿದೆ. ಸಮಾಜ ಶಾಸ್ತ್ರವಿಭಾಗದಲ್ಲಿ ಓದುತ್ತಿದ್ದ ಚಕ್ರ ಎಸೆತದ ಚಾಂಪಿಯನ್ ಕೊಡಗಿನ ಕಾವೇರಪ್ಪ

ನನ್ನ ಆತ್ಮೀಯ ಮಿತ್ರನಾಗಿದ್ದ. ಅವನು ನನ್ನನ್ನು ಪ್ರೀತಿಯಿಂದ 'ಮಣಿ' ಎಂದು ಕರೆಯುತ್ತಿದ್ದ. ಅವನ ಪ್ರಕಾರ 'ಮಣಿ' ಎಂದರೆ ನನ್ನ ಅಂದಿನ ಅಡ್ಡ ಹೆಸರಾಗಿದ್ದ ಟೊಣ್ಣೀಮನೆಯ ಶಾರ್ಟ್‌ಫಾರ್ಮ್ ನಮ್ಮ ತಂದೆಯವರ ಊರಾದ ಟೊಣ್ಣೀಮನೆ ಎಂಬುದೇ ಧಾರವಾಡದಲ್ಲಿದ್ದಾಗ ನನ್ನ ಅಡ್ಡ ಹೆಸರಾಗಿತ್ತು. ಹೀಗಾಗಿ ನನಗೆ ದೊರೆತ ಎಲ್ಲ ಪ್ರಮಾಣ ಪತ್ರಗಳಲ್ಲಿ 'ಎ. ಕೆ ಟೊಣ್ಣೀಮನೆ' ಅಥವಾ 'ಅನಂತ ಕೃಷ್ಣಶಾಸ್ತ್ರಿ ಟೊಣ್ಣೀಮನೆ' ಎಂದೇ ಉಲ್ಲೇಖಿಸಲಾಗಿದೆ.

ವೈ. ಎಚ್. ಕಲಾಲ, ಎಂ ಎಂ. ಘೋರ್ಪಡೆ, ಕಾಮೋಜಿ, ಹುಸೇನ, ಅಜ್ಜಪ್ಪ, ರಂಗಯ್ಯ, ಲೆನಿ ಮೆನೆಜಿಸ್, ವಸುಂಧರಾ ಕವಲಿ, ಶಾಂತಕುಮಾರಿ ಮುಂತಾದವರು ನಾನು ಕಲಿಯುವಾಗಿನ ವಿದ್ಯಾರ್ಥಿ – ವಿದ್ಯಾರ್ಥಿನಿಯರಾಗಿದ್ದರು. ೧೯೬೩ ರ ಎಂ. ಎ. ಪರೀಕ್ಷೆಯಲ್ಲ ನಾನು ದ್ವಿತೀಯ ಶ್ರೇಣಿಯಲ್ಲಿ ಪಾಸಾದೆ. ನಾನು ಎಂ.ಎ. ಓದುವಾಗ ನನ್ನ ಅಮ್ಮ ಮುಂಬೈಯ ಮೃಣಾಲಿನಿ ಅಕ್ಕನ ಮನೆಗೆ ಹೋಗಿ ತಂಗಿ ದಳು. ಹೀಗಾಗಿ, ಎಂ ಎ. ಓದುವಾಗ ಧಾರವಾಡದ ಮನೆಯಲ್ಲಿ ನಾನೇ ಅಡಿಗೆ ಮಾಡಿಕೊಂಡು ಊಟ ಮಾಡುತ್ತಿದ್ದೆ. ಬೊಮ್ಮನಹೊಂಡದ ಸುಬ್ಬಹೆಗಡೇರ ಮಗ ಉಮೇಶನೊಂದಿಗೆ ಲಲಿತಾಳ ವಿವಾಹವೂ ಆಯಿತು. ಉಮೇಶ (ಯು. ಎಸ್. ಹೆಗಡೆ) ಕರ್ನಾಟಕ ವಿಜ್ಞಾನ ಮಹಾವಿದ್ಯಾಲಯದಲ್ಲಿ ಭೌತಶಾಸ್ತ್ರ ವಿಭಾಗದ ಪ್ರಾಧ್ಯಾಪಕನಾಗಿ ದೀರ್ಘಕಾಲ ಸೇವೆ ಸಲ್ಲಿಸಿ ಇತ್ತೀಚೆಗೆ ನಿವೃತ್ತನಾಗಿದ್ದಾನೆ. ಅವನು ಜ್ಯೋತಿಷಿಯಾಗಿಯೂ ಪ್ರಸಿದ್ಧನಾಗಿದ್ದಾನೆ. ಉಮೇಶ ಮೃದು ಸ್ವಭಾವದ ವ್ಯಕ್ತಿ; ನಾಯಿಯಲ್ಲಿಯೂ ದತ್ತಾತ್ರೇಯನನ್ನು ಕಾಣುವ ಸೇವಾ ಮನೋಭಾವದ ಭಾವುಕ ವ್ಯಕ್ತಿ. ಶೈಲೇಶ ಮತ್ತು ಮಹೇಶರು ಉಮೇಶ ಮತ್ತು ಲಲಿತಾ ಇವರ ಸುಪುತ್ರರು. ಇಬ್ಬರೂ ಗಂಡುಮಕ್ಕಳು ಪ್ರತಿಭಾವಂತ ಕಂಪ್ಯೂಟರ್ ಇಂಜನಿಯರರಾಗಿರುತ್ತಾರೆ.

## ಬೀದರದಲ್ಲಿ ಒಂದು ಶೈಕ್ಷಣಿಕ ವರ್ಷ

೧೯೬೩ ರ ಜುಲೈ ೫ ರಂದು ನಾನು ಬೀದರಿನ ಬಿ. ವಿ. ಭೂಮರಡ್ಡಿ ಕಾಲೇಜಿನಲ್ಲಿ ಇತಿಹಾಸದ ಉಪನ್ಯಾಸಕನಾಗಿ ಸೇರಿಕೊಂಡೆ. ಧಾರವಾಡದಲ್ಲಿ ೧೪ ವರ್ಷಗಳ ಕಾಲ ಇದ್ದವನಿಗೆ ಬೀದರಕ್ಕೆ ಹೋಗಿ ನೆಲೆಸುವದು ಸುಲಭವಾಗಿರಲಿಲ್ಲ. ನನ್ನನ್ನು ವೈಸ್‌ಪ್ರಿನ್ಸಿಪಾಲ್ ಎಸ್. ಜಿ. ಪಾಟೀಲರು ಪ್ರಾಧ್ಯಾಪಕ ಗುಜರಾತಿಯವರ ಮನೆಗೆ ಇಳಿದುಕೊಳ್ಳಲು ಕರೆದೊಯ್ದರು. ಅವರ ಅಟ್ಟದ ಮೇಲಿನ ಮನೆಗೆ ಹೋಗುವ ಪ್ರವೇಶದ್ವಾರ ಗುಹೆ ಹೊಕ್ಕಂತೆ ಭಾಸವಾಯಿತು. ಧ್ಯಾನಮಗ್ನರಾಗಿದ್ದ ಗುಜರಾತಿಯವರು ಒಂದು ತಾಸಿನ ನಂತರ ನನಗೆ ಸಂದರ್ಶನವಿತ್ತರು. ನಂತರ ತಮ್ಮಲ್ಲಿಯೇ ಉಳಿಯಲು ವ್ಯವಸ್ಥೆ ಮಾಡಿದರು. ಅವರು ಮರಾಠಿ ಪ್ರಾಧ್ಯಾಪಕರಾಗಿದ್ದು ಹಾಸ್ಯಪ್ರವೃತ್ತಿಯವರಾಗಿದ್ದರು. ಪ್ರಿನ್ಸಿಪಾಲ್ ಬಿ. ಟಿ. ಸಾಸನೂರ ಮತ್ತು ಅವರ ಸಹೋದ್ಯೋಗಿ ಮಿತ್ರರಾದ ಅಂಟಿನ್, ವಸಂತ ಕುಷ್ಟಗಿ, ದೇಶಮುಖ,

ಕಾಂಬಳೆ, ದೇವೇಂದ್ರ ಮೊದಲಾದವರು ನನ್ನನ್ನು ಆತ್ಮೀಯವಾಗಿ ಬರಮಾಡಿ ಕೊಂಡರು. ನಾನು ಸೇರಿದ ವರ್ಷವೇ ಅರ್ಥಶಾಸ್ತ್ರಕ್ಕೆ ಕೆರೆಕೈ ಎಸ್. ಜಿ. ಭಟ್ಟ, ಲಾಜಿಕ್‌ಗೆ ಎಲ್. ವಿ. ಆಚಾರ್ಯ ಮತ್ತು ಇಂಗ್ಲಿಷ್‌ಗೆ ಸಿಂಪಿಯವರನ್ನು ಉಪನ್ಯಾಸಕರನ್ನಾಗಿ ನೇಮಿಸಲಾಯಿತು. ಕೆಲವು ದಿನಗಳ ನಂತರ ನಾನು ಮತ್ತು ಎಲ್. ವಿ. ಆಚಾರ್ಯ ಇಟ್ಟಿಗೆಪಲ್ಲಿ ದೇಶಪಾಂಡೆಯವರ ಕಂಪೌಂಡಿನ ಮನೆಯೊಂದ ರಲ್ಲಿ ತಿಂಗಳಿಗೆ ೩೫ ರೂಪಾಯಿ ಬಾಡಿಗೆ ಕೊಟ್ಟು ಇರಲು ಪ್ರಾರಂಭಿಸಿದೆವು. ಕೆರೆಕೈ ಸೀತಾರಾಮ ಮಾತ್ರ ಊರ ಹೊರವಲಯದ ಒಂದು ಕೊಠಡಿಯಲ್ಲಿ ವಾಸಿಸುತ್ತಿದ್ದ. ನಾವಿರುವ ಕಂಪೌಂಡ್ ಸ್ವಚ್ಛವಾಗಿದ್ದರೂ, ಹಿಂಭಾಗ ಹೊಲಸಾಗಿತ್ತು. ಸಮೀಪ ದಲ್ಲಿಯೇ ಸಿನೆಮಾ ಮಂದಿರ ಇದ್ದುದರಿಂದ ರಾತ್ರಿಹೊತ್ತಿನಲ್ಲಿ ಸ್ವಲ್ಪ ಗದ್ದಲವೂ ಆಗುತ್ತಿತ್ತು. ಸಾಮಾನ್ಯವಾಗಿ, ನಾನು, ಸೀತಾರಾಮ ಮತ್ತು ಆಚಾರ್ಯ ಕೂಡಿ ತಿರುಗಾಡುತ್ತಿದ್ದೆವು. ಸಿಖ್ಖರ ಪವಿತ್ರ ಸ್ಥಳವಾದ ಸಮೀಪದ ನಾನಕಝರಾ, ನರಸಿಂಹ ಝರಣಿ, ರಂಗೀನ ಮಹಲ, ಕೋಟೆ, ಬರೀದಶಹನ ಸಮಾಧಿ ಮುಂತಾದ ಪ್ರಶಾಂತ ಸ್ಥಳಗಳಿಗೆ ಆಗಾಗ ಹೋಗುತ್ತಿದ್ದೆವು. ಕಾಲೇಜಿನಲ್ಲಿ ಕಲಿಸಲು ನಮಗೆ ಹಿತಕರವಾದ ವಾತಾವರಣವಿದ್ದರೂ, ಬೀದರ ನಮಗೆ ಹಿಡಿಸಲಿಲ್ಲ. ಆದಷ್ಟು ಬೇಗ ಬೀದರ ಬಿಟ್ಟು ಇನ್ನೊಂದು ಒಳ್ಳೆಯ ಸ್ಥಳಕ್ಕೆ ಹೋಗಬೇಕೆಂಬುದೇ ನಮ್ಮ ಇಚ್ಛೆ. ಅಲ್ಲಿ ವಿದ್ಯಾರ್ಥಿಗಳ ಭೌತಿಕ ಮಟ್ಟವೂ ಅಷ್ಟಕ್ಕಷ್ಟೇ ಆಗಿದ್ದರಿಂದ ನನಗೆ ಕಲಿಸಲು ಯಾವ ತೊಂದರೆಯೂ ಆಗಲಿಲ್ಲ. ಇತಿಹಾಸ ವಿಭಾಗದಲ್ಲಿಯ ವಿದ್ಯಾರ್ಥಿಗಳ ಸಂಖ್ಯೆ ಬಹಳ ಕಡಿಮೆಯಿತ್ತು. ಕಾಲೇಜಿನಲ್ಲಿಯ ಪ್ರತಿಯೊಂದು ಚಟುವಟಿಕೆ ಯಲ್ಲೂ ನಾನು ಸಕ್ರಿಯವಾಗಿ ಭಾಗವಹಿಸುತ್ತಿದ್ದೆ. ಅಥ್ಲೆಟಿಕ್ಸ್ ವಿಭಾಗವನ್ನು ನಾನೇ ನೋಡಿಕೊಳ್ಳುತ್ತಿದೆ. ವಿದ್ಯಾರ್ಥಿಗಳಿಗೆ ತರಬೇತಿ ನೀಡಿ ಉತ್ತಮ ಕ್ರಿಡಾ ಪಟುಗಳನ್ನಾಗಿ ಮಾಡಿದೆ. ಸ್ವತಃ ಬಿ. ಟಿ. ಸಾಸನೂರರು ತಮ್ಮ ವಿದ್ಯಾರ್ಥಿ ಜೀವನ ದಲ್ಲಿ ಶ್ರೇಷ್ಠ ಕ್ರೀಡಾಪಟುವಾಗಿದ್ದರಿಂದ, ನನ್ನ ಬಗ್ಗೆ ಅವರಿಗೆ ವಿಶೇಷ ಪ್ರೀತಿ. ನಾನೂ ಕೂಡ ಅತ್ಯಂತ ಆಸಕ್ತಿಯಿಂದ ದುಡಿಯುತ್ತಿದ್ದೆ. "ಈ ಕಾಲೇಜಿನಲ್ಲಿ ವೇಳೆಗೆ ಮಹತ್ವ ನೀಡುವವರು ನಾನು ಮತ್ತು ಟೋಣ್ಣೇಮನೆ (ಎ. ಕೆ. ಶಾಸ್ತ್ರಿ)", ಎಂದು ಒಂದು ಸಂದರ್ಭದಲ್ಲಿ ಬಹಿರಂಗವಾಗಿ ವ್ಯಕ್ತಪಡಿಸಿದ್ದರು.

ಹೊಸ ಹೊಸ ಗ್ರಂಥಗಳನ್ನು ಓದುವ ಹವ್ಯಾಸ ಬೆಳೆಸಿಕೊಂಡೆ. ಟಾಲ್ ಸ್ಟಾಯ್‌ರ 'War and Peace' ಓದಿದೆ. ಆ ಬೃಹತ್ ಕಾದಂಬರಿಯಲ್ಲಿಯ ಕೆಲವು ವಾಕ್ಯಗಳು ನನಗೆ ಬಹಳ ಹಿಡಿಸಿದವು. ಅವುಗಳಲ್ಲಿ ಕೆಲವು ಇಂತಿವೆ–

"Oh ! money, money ! How many ills it causes in this world."

"I will remember that one must not expect any reward in this world; in this world there is neither honour nor justice. In this world one must be scheming and evil."

"...that marriage in my opinion a divine institution to which we are bound to conform."

"...We like people in proportion to the good we do them, and not to good they do us."

"...Marriages are made in heaven."

"...Friendship ignores distance."

'Current Events' ದಲ್ಲಿಯ ಅಮೆರಿಕೆಯ ಅಧ್ಯಕ್ಷ ಕೆನಡಿಯ ಮಾತುಗಳನ್ನೂ ಓದಿದೆ. ಅವು ಇಂತಿವೆ–

"...The courage of life is often a less dramatic spectacle than the courage of a final moment; but it is no less than a magnificent mixture of triumph and tragedy. A man does what he must- in spite of personal consequences, in spite of obstacles and dangers and pressures- and this is the basis of all human morality."

"And, my fellow Americans, ask not what your country can do for you; ask what you can do for your country."

"One path we shall never choose, and that is the path of surrender, or submission. Our goal is not the victory of might, but the vindication of right; not peace at the expense of freedom, but both peace and freedom here in this hemisphere, and, we hope around the world. God willing, that goal will be achieved."

ಕೆನಡಿಯವರ ಅಂತಿಮ ಭಾಷಣದ ವಾಕ್ಯಗಳನ್ನು ಗಮನಿಸಿ– "This is a dangerous and uncertain world... No one expects our lives to be easy- not in this decade, not in this century."

ಕೆನಡಿಯವರ ಉತ್ತರಾಧಿಕಾರಿಗಳಾದ ಲಿಂಡನ್ ಜಾನ್ಸನ್ನರ ಮಾತನ್ನೂ ನಾನು ಬೀದರನಲ್ಲಿ ಬರೆದ ದಿನಚರಿಯಿಂದ ಉಲ್ಲೇಖಿಸುತ್ತಿರುವೆ– "Ambition is the hall mark of all men who rise to eminence."

'War and Peace' ನಲ್ಲಿಯ ಇನ್ನೂ ಕೆಲವು ವಾಕ್ಯಗಳನ್ನು ಹೇಳಬೇಕೆಂದೆನಿಸುತ್ತದೆ.

"Love conquers all."

"Praise from a great general is the soldier's best reward."

"If God is merciful no doctors are necessary."

"It is not the mind that understands God; it is life that makes us understand him."

ಬರೀದಶಹನ ಸಮಾಧಿಯ ಮೇಲೆ ಬರೆದ ವಾಕ್ಯವು ನನ್ನ ಮನಸ್ಸಿನ ಮೇಲೆ ಪರಿಣಾಮ ಬೀರಿತು. ಆ ವಾಕ್ಯದ ಇಂಗ್ಲಿಷ್ ಅನುವಾದ ಇಂತಿದೆ– "Alas, without me for thousands of years– The Rose will blossom and the spring will bloom; but those who have secretly understood my heart, they will approach and visit the grave where I lie."

ಬೀದರಿನಲ್ಲಿರುವಾಗ ಜರುಗಿದ ಒಂದು ಭಯಾನಕ ಘಟನೆ ನೆನಪಾಗುತ್ತಿದೆ. ಶುಕ್ರವಾರ ದಿನಾಂಕ ೩೧-೧-೧೯೬೪ ರಂದು ನಮ್ಮ ಕಾಲೇಜಿನ ಮೈದಾನದಲ್ಲಿ ಬೆಳಿಗ್ಗೆ ೭-೫೦ ಕ್ಕೆ ತರಬೇತಿ ವಿಮಾನವೊಂದು ನೆಲಕ್ಕೆ ಅಪ್ಪಳಿಸಿ, ಭಸ್ಮವಾಗಿ ಗೌತಮನೆಂಬ ಪೈಲಟ್ ಮೃತನಾದ. ಆ ಭೀಕರ ದೃಶ್ಯ ಇನ್ನೂ ನನ್ನ ಕಣ್ಣುಗಳಲ್ಲಿ ಕಟ್ಟಿದೆ.

ಸೋಮವಾರ, ದಿನಾಂಕ ೨೪-೨-೧೯೬೪ ರಂದು ನಡೆದ ನಮ್ಮ ಕಾಲೇಜಿನ ವಾರ್ಷಿಕ ಸ್ನೇಹ ಸಮ್ಮೇಳನಕ್ಕೆ ಗಣಿ ಮತ್ತು ಭೂಗರ್ಭ ಶಾಸ್ತ್ರದ ಮಂತ್ರಿಗಳಾದ ಮಕ್ಸದಅಲಿಖಾನರು ಮುಖ್ಯ ಅತಿಥಿಗಳಾಗಿ ಬಂದದ್ದರು.

'War and Peace' ಕುರಿತು ದಿನಚರಿಯಲ್ಲಿ ಬರೆದ ಇನ್ನೂ ಕೆಲವು ವಾಕ್ಯಗಳನ್ನು ಉಲ್ಲೇಖಿಸಬೇಕೆಂದೆನಿಸುತ್ತದೆ.

"The heart of a king is in the hand of God."

"Do not fancy that sorrow is the work of man– he is but an instrument in the hand of God."

"Forgiveness is a woman's grace, for a man it is different; he cannot, and he ought not to forget, nor to forgive."

"A good commander is a man who leaves nothing to chance; who can guess what is in his enemy's mind."

"The battle is always won by the leader who is most determined to win it."

When Napoleon was suffering from cold at Moscow, "Our body is just a living machine... our body is a living machine neither more or less."

"Time and events do not stand still."

"Love of one's neighbour, of one's enemy, of each and all, is the love of God in all his mainfestations ! To love those near and dear to us is human love; but to love one's enemy is almost divine... Human love may turn to hatred, but divine love is perennial" ಇಂಥ ಅನೇಕ ಮಹತ್ವದ ಹೇಳಿಕೆಗಳನ್ನೊಳಗೊಂಡ "War and Peace" ಒಂದು ಅದ್ಭುತ ಕೃತಿ.

ವಾರ್ಷಿಕ ಸ್ನೇಹ ಸಮ್ಮೇಳನದ ವಿದ್ಯಾರ್ಥಿಗಳಿಗೆ ಪಾರಿತೋಷಕಗಳನ್ನು ನೀಡಲೆಂದು, ಅವುಗಳನ್ನು ತರಲು ನಾನು ಮತ್ತು ಎಲ್. ವಿ. ಆಚಾರ್ಯ, ಗುರುವಾರ, ದಿ. ೨೦-೨-೧೯೬೪ ರಂದು ಹೈದರಾಬಾದಿಗೆ ಹೋಗಿ ಗ್ರೀನ್ ಹೊಟೆಲ್‌ನಲ್ಲಿ ತಂಗಿ, ೨೨ ರಂದು ಬೀದರಿಗೆ ಮರಳಿದೆವು. ಇದಕ್ಕಿಂತಲೂ ಮುನ್ನ, ನಾನು, ಆಚಾರ್ಯ, ಸೀತಾರಾಮ ಮತ್ತು ಸಿಂಪಿ, ಹೈದರಾಬಾದನ್ನು ನೋಡಲು ಹೋಗಿದ್ದೆವು. ಆಗ ಕೋಟೆಯ ಸಮೀಪದ ತಾಜಮಹಲಿನಲ್ಲಿ ಉಳಿದಿದ್ದೆವು. ಹೈದರಾಬಾದ ರೇಲ್ವೆ ಸ್ಟೇಷನ್‌ನಲ್ಲಿಳಿದು, ರಸ್ತೆ ದಾಟುವಾಗ ನಮ್ಮ ಸಿಂಪಿ (ಸಿಂಪಿ ಲಿಂಗಣ್ಣನವರ ಮಗ) ಪೋಲೀಸರ ಕೈಯಲ್ಲಿ ಸಿಕ್ಕಿಬಿದ್ದ ಘಟನೆಯನ್ನು ನೆನಪಿಸಿಕೊಂಡರೆ ನನಗೆ ನಗು ಮತ್ತು ಸಿಟ್ಟು, ಎರಡೂ ಬರುತ್ತವೆ.

ಬೀದರದಲ್ಲಿರುವಾಗ ನಾನು ಅನೇಕ ಗ್ರಂಥಗಳನ್ನು ಓದಿದೆ. ಪಿ. ಶಂಕರ ನಾರಾಯಣನ್‌ರು ಬರೆದ 'Values in History' ಥಾಮಸ್ ಹಾರ್ಡಿಯವರ 'The Life and Death of the Mayor of Casterbridge' ಮತ್ತು ಇತಿಹಾಸಕ್ಕೆ ಸಂಬಂಧಿಸಿದ ಅನೇಕ ಗ್ರಂಥಗಳನ್ನು ಓದಿದೆ.

೧೯೬೪ ರ ಮಾರ್ಚ್ ತಿಂಗಳ ೧೩ ರಂದು ನಾನು ಬೀದರ ಬಿಟ್ಟೆ. ಧಾರವಾಡದ ವಿಶ್ವವಿದ್ಯಾಲಯದಲ್ಲಿ, ಗಿಲ್‌ಬರ್ಟ್‌ರು ಬರೆದ 'The Art of Teaching' ಎಂಬ ಪುಸ್ತಕ ಓದಿದೆ. ವಿಷಯವನ್ನು ಕುರಿತು ಆಳವಾದ ಜ್ಞಾನ, ದೃಢ ಸಂಕಲ್ಪ,

ವಿದ್ಯಾರ್ಥಿಗಳ ಬಗ್ಗೆ ದಯೆ, ಪರಸ್ಪರ ಪೂರಕವಾದ ಈ ಮೂರು ಲಕ್ಷಣಗಳನ್ನು ಯೋಗ್ಯ ಶಿಕ್ಷಕನೆಂದೆನಿಸಿಕೊಳ್ಳುವವನು ಹೊಂದಿರಬೇಕಾಗುತ್ತದೆಂಬ ವಿಚಾರ ಈ ಪುಸ್ತಕದಿಂದ ತಿಳಿದುಬಂತು. ಡಾ. ಬಿ. ಎ. ಸಾಲೆತೊರೆಯವರ 'Ancient Indian Political Thought and Institutions' ಮತ್ತು ಎ. ಫೆನ್ನರ್‌ರು ಬರೆದ 'The Indian Crisis' ಎಂಬ ಗ್ರಂಥಗಳನ್ನೂ ಓದಿದೆ.

ನಾನು ಧಾರವಾಡದಲ್ಲಿ ರಜೆ ಕಳೆಯುತ್ತಿದ್ದಾಗ, ೧೯೬೪ರ ಮೇ ತಿಂಗಳ ೨೭ ರಂದು ಭಾರತದ ಪ್ರಧಾನಿ, ಪಂಡಿತ ಜವಾಹರಲಾಲ ನೆಹರು ಅವರು ಮೃತರಾದರು. ಶಾಂತಿ ಬಯಸುವ ರಾಷ್ಟ್ರಗಳಿಗೆಲ್ಲ ಅವರ ಮರಣವು ದೊಡ್ಡ ಆಘಾತವಾಗಿ ಪರಿಣಮಿಸಿತು.

ಗುರುವಾರ ದಿನಾಂಕ ೨೮–೫–೧೯೬೪ ರಂದು ೧೧-೫ಕ್ಕೆ ಉಮೇಶನೊಂದಿಗೆ ಹೊನ್ನೇಗದ್ದೆ ಲಲಿತಾಳ ವಿವಾಹವಾಯಿತು. ಅಮ್ಮ ಮತ್ತು ಮೃಣಾಲಿನಿ ಲಗ್ನಕ್ಕೆ ಹೊನ್ನೇಗದ್ದೆಗೆ ಹೋಗಿದ್ದರು.

೧೯೬೪ರ ಜೂನ್ ತಿಂಗಳಿನ ೧೪ ರಾಡು ಶಿರಸಿಗೆ ಬಂದು, ಸಿಂಪಿಗಲ್ಲಿಯಲ್ಲಿದ್ದ ನನ್ನ ಮಿತ್ರ ಪರಮೇಶ್ವರ(ಪಿ. ಎಂ. ಹೆಗಡೆ)ನ ಕೊಠಡಿಯಲ್ಲಿ ನಾಲ್ಕು ದಿನ ಉಳಿದು, ದಿನಾಂಕ ೧೯ ರಂದು ಗ್ಯಾರೇಜ ಕೃಷ್ಣಣ್ಣನ ಮನೆಯ ಒಂದು ಭಾಗವನ್ನು ಬಾಡಿಗೆಗೆ ತೆಗೆದುಕೊಂಡು ಉಳಿಯಲು ಪ್ರಾರಂಭಿಸಿದೆ. ಜೂನ್ ೧೯ ರಂದು ಮಾಡರ್ನ್ ಎಜ್ಯುಕೇಶನ್ ಸೊಸೈಟಿಯ ಮಹಾವಿದ್ಯಾಲಯದಲ್ಲಿ ಇತಿಹಾಸದ ಉಪನ್ಯಾಸಕನಾಗಿ ಸೇವೆ ಸಲ್ಲಿಸಲು ಪ್ರಾರಂಭಿಸಿದೆ. ಉಪನ್ಯಾಸಕನಾಗಿ ಒಂದು ವರ್ಷ ಅನುಭವವಿದ್ದರೂ, ನನಗೆ ಯಾವುದೇ ಹೆಚ್ಚಿನ ಸಂಬಳ ನೀಡಲಿಲ್ಲ. ಶಿರಸಿಯಲ್ಲಿ ಇತಿಹಾಸ ಪ್ರಧಾನವಾದ ವಿಷಯ ಮತ್ತು ಶಿರಸಿ ಧಾರವಾಡಕ್ಕೆ ಸಮೀಪ ಎಂಬ ಕಾರಣಗಳಿಂದಾಗಿ ನನಗೆ ಹೆಚ್ಚಿನ ವೇತನ ಕೊಡದಿದ್ದರೂ ನಾನು ಶಿರಸಿಗೆ ಬಂದೆ. ಬೀದರದಲ್ಲಿ ನಾನು ೧೫೦ + ೪೦ = ೧೯೦ ರೂಪಾಯಿ ಸಂಬಳ ಪಡೆಯುತ್ತಿದ್ದೆ. ಶಿರಸಿಗೆ ಬಂದಾಗ ಹೊಸ ಸ್ಕೇಲ್ ಪ್ರಾರಂಭವಾಗಿದ್ದರಿಂದ, ೨೦೦ + ೩೫ = ೨೩೫ ರೂಪಾಯಿ ಸಂಬಳ ದೊರೆಯತೊಡಗಿತು.

ಒಟ್ಟಿನಲ್ಲಿ, ಬೀದರದಲ್ಲಿ ಒಂದು ಶೈಕ್ಷಣಿಕ ವರ್ಷ ಮುಗಿಸಿ, ಶಿರಸಿಗೆ ಬಂದೆ. ನನ್ನ ಅಪ್ಪನಿಗೆ ನಾನು ಶಿರಸಿಯಲ್ಲಿ ನೌಕರಿ ಮಾಡಲು ಇಷ್ಟವಿರಲಿಲ್ಲ. ಆದರೆ ವಿಧಿ ನನ್ನನ್ನು ಶಿರಸಿಗೆ ಎಳೆದು ತಂದಿತು.

**ಶಿರಸಿಯಲ್ಲಿ ದೀರ್ಘಸೇವೆ**

ಬೀದರಕ್ಕೆ ೧೯೬೩ರಲ್ಲಿ ಹೋಗುವ ಮುಂಚೆ ನಾನು ಎಂದೂ ದಿನಚರಿ ಬರೆದಿರಲಿಲ್ಲ. ಆದರೆ ಬೀದರದಲ್ಲಿರುವಾಗ ಬರೆಯಲು ಪ್ರಾರಂಭಿಸಿದ ದಿನಚರಿ

ಯನ್ನು ಇಂದಿಗೂ ಬರೆಯುತ್ತಿರುವೆ. ಈ ೩೫ ವರ್ಷಗಳ ಅವಧಿಯಲ್ಲಿ ನಾನು ಬರೆದ ದಿನಚರಿಯೇ ಒಂದು ಬೃಹದ್ಗ್ರಂಥವಾಗುವಷ್ಟಿದೆ. ಅವುಗಳನ್ನೆಲ್ಲ ಪ್ರಸ್ತುತ ದಲ್ಲಿ ನಿರೂಪಿಸಲು ಸಾಧ್ಯವಿಲ್ಲ. ಅನೇಕ ಕಹಿ ಘಟನೆಗಳೂ ಜರುಗಿವೆ. ಅವುಗಳನ್ನು ಸ್ಮರಿಸಿಕೊಳ್ಳಲು ನನಗೆ ಇಷ್ಟವಿಲ್ಲ. ಅಂಥ ವಿಷಯಗಳನ್ನು ಬಿಚ್ಚಿದರೆ ಕೆಲವರು ನೊಂದುಕೊಳ್ಳುವ ಸಾಧ್ಯತೆ ಇದೆ. ಆದ್ದರಿಂದ ಶಿರಸಿಗೆ ೩೪ ವರ್ಷಗಳ ಹಿಂದೆ ನಾನು ಮರಳಿ ಬಂದಾಗಿನಿಂದ ಇಂದಿನ ವರೆಗಿನ ಕೆಲವು ಘಟನೆಗಳನ್ನು ಸ್ಮರಿಸಿ ಕೊಳ್ಳುವೆ. ಈ ದೀರ್ಘ ಅವಧಿಯ ನನ್ನ ಜೀವನಯಾನವನ್ನು ತಿಳಿಯಲಿಚ್ಛಿಸು ವವರು ನನ್ನನ್ನು ನೇರವಾಗಿ ಸಂಪರ್ಕಿಸಬಹುದು, ಇಲ್ಲವೆ, ತೆರೆದಿಟ್ಟ ನನ್ನ ದಿನಚರಿ ಯನ್ನು ಓದಿ ತಿಳಿಯಬಹುದು.

ಶಿರಸಿಗೆ ಬಂದನಂತರ ಅಧ್ಯಯನ ಮತ್ತು ಪಠ್ಯೇತರ ಚಟುವಟಿಕೆಗಳಲ್ಲಿ ನನ್ನನ್ನು ಹೆಚ್ಚೆಚ್ಚು ತೊಡಗಿಸಿಕೊಂಡೆ. ವಿದ್ಯಾರ್ಥಿಗಳಿಗೆ ನಾನು ಗೌರವಾನ್ವಿತ ಮತ್ತು ಪ್ರೀತಿಯ ಶಿಕ್ಷಕನಾದೆ. ೧೯೬೪ ರ ಶನಿವಾರ ಆಗಸ್ಟ ತಿಂಗಳ ೩೦ ರಂದು, ಶುಲ್ಕ ಇಳಿಸುವಂತೆ ವಿದ್ಯಾರ್ಥಿಗಳು ಮುಷ್ಕರ ಹೂಡಿದರು. ಆ ಘಟನೆ ನಮ್ಮೆಲ್ಲರ ಮನಸ್ಸಿಗೆ ನೋವನ್ನುಂಟು ಮಾಡಿತು. ಈ ಸಂದರ್ಭದಲ್ಲಿ ನಾನು ಪಂಡಿತ ಜವಾಹರಲಾಲರ 'The Discovery of India' ಓದುತ್ತಲಿದ್ದೆ. ಆ ಗ್ರಂಥ ದಲ್ಲಿಯ ಕೆಲವು ವಾಕ್ಯಗಳನ್ನು ಉಲ್ಲೇಖಿಸುವೆ. "Hinduism's essential spirit seems to be to live and let live" ಮಹಾತ್ಮಾ ಗಾಂಧಿಯವರು ಇದನ್ನೇ ಈ ರೀತಿ ಅರ್ಥೈಸಿದ್ದಾರೆ- "If I were asked to define the Hindu creed, I should simply say : search after truth through nonviolent means. A man may not believe in God and still call himself a Hindu. Hinduism is a relentless pursuit after truth... Hinduism is the religion of truth. Truth is God. Denial of God we have known. Denial of truth we have not known."

ರೊಮೆನ್ ರೋಲಂಡ್‌ರು ಹೇಳುವಂತೆ- "If there is one place on the face of the earth where all the dreams of living men have found a home from the very earliest days when man began the dream of existence, it is India."

ಸತ್ಯಾಚರಣೆ ಮನುಷ್ಯನನ್ನು ದೈವತ್ವದೆಡೆಗೆ ಒಯ್ಯುವ ಮಾರ್ಗವೆಂಬುದನ್ನು ಉಪನಿಷತ್ತುಗಳಲ್ಲಿ ವಿವರಿಸಿದ್ದನ್ನು ಕುರಿತು ಹೇಳುವಾಗ ಮ್ಯಾಕ್ಸ್‌ಮುಲ್ಲರರ ಅಭಿಪ್ರಾಯವನ್ನು ಉಲ್ಲೇಖಿಸಿದ್ದಾರೆ. "The Upanishads are the sources of the Vedanta Philosophy, a system in which

human speculation seems to me to have reached its very acme. I spend my happiest hours in reading Vedantic books. They are to me like the light of the morning, like the pure air of the mountains — so simple, so true, if once understood."

೧೯೬೫ ರ ಹೊತ್ತಿಗಾಗಲೇ ಶಿರಸಿಯಲ್ಲಿ ಇಂಗ್ಲಿಷ್ ವಿಭಾಗದ ಪರಮೇಶ್ವರ ಹೆಗಡೆ ಹೊರತಾಗಿ, ಅರ್ಥಶಾಸ್ತ್ರ ವಿಭಾಗದ ಜಿ. ವಿ ಭಟ್ಟ ಮತ್ತು ವಾಣಿಜ್ಯ ವಿಭಾಗದ ಡಿ.ಸಿ. ಭಟ್ಟರೊಂದಿಗೆ ಗೆಳೆತನ ಬೆಳೆಯಿತು. ನಾನು ಮತ್ತು ಜಿ.ವಿ. ಭಟ್ಟ ಕುಮಟಾ ಕಾಲೇಜಿನ ಕರಿಮುಲ್ಲಾ, ಕೊಲ್ಲಿ, ಆನಂದರಾವ್, ಜಿ. ಎ. ಭಟ್ಟ ಮುಂತಾದ ಪ್ರಾಧ್ಯಾಪಕ ಮಿತ್ರರನ್ನು ಕಂಡು, ಜಿ. ವಿ. ಭಟ್ಟರ ಕೊಂಕೆರಿ ಮನೆಗೆ ಹೋಗಿ, ೧೯೬೫ ರ ಮಾರ್ಚ ತಿಂಗಳ ೧೩ ಕ್ಕೆ ಹೊರಟವರು ದಿನಾಂಕ ೧೮ ರಂದು ಶಿರಸಿಗೆ ಮರಳಿದೆವು. ಜಿ. ವಿ. ಭಟ್ಟರ ತಂದೆ ವಿಷ್ಣು ಭಟ್ಟರು ಘನಗಾಂಭೀರ್ಯ ಉಳ್ಳವರಾಗಿದ್ದು, ಅತ್ಯಂತ ಆತ್ಮೀಯರೂ ಆಗಿದ್ದರು. ಜಿ. ವಿ. ಯವರ ಹಿರಿಯ ಅಣ್ಣ ಪರಮೇಶ್ವರ ಭಟ್ಟರು ನನ್ನನ್ನು ಬಹುಪ್ರೀತಿಯಿಂದ ಸ್ವಾಗತಿಸಿದರು.

೧೯೬೫ ರ ಮಾರ್ಚ ತಿಂಗಳ ೨೯ ರಿಂದ ಎಪ್ರಿಲ್ ೨೪ ರ ವರೆಗೆ ನಾನು ಬೆಂಗಳೂರಿನ ಕಂಠೀರವ ಕ್ರೀಡಾಂಗಣದಲ್ಲಿ ಲಿಂಗಪ್ಪನವರಿಂದ ಅಥ್ಲೆಟಿಕ್ ತರಬೇತಿ ಪಡೆದೆ. ರಾಜ್ಯಕ್ಕೆ ಪ್ರಥಮ ಸ್ಥಾನವನ್ನೂ ಪಡೆದೆ. ಶಿಬಿರಾರ್ಥಿಗಳ ಪ್ರತಿನಿಧಿಯಾಗಿ ನಾನು ಇಂಗ್ಲಿಷ್‌ನಲ್ಲಿ ಮಾತನಾಡಿದೆ. ಜೆ. ಬಿ. ಮಲ್ಲಾರಾಧ್ಯರಿಂದ ಪ್ರಮಾಣ ಪತ್ರ ಪಡೆದೆ ಡೆಕ್ಕನ್ ಹೆರಾಲ್ಡ್ ಪತ್ರಿಕೆಯಲ್ಲಿ ನನ್ನ ಛಾಯಾಚಿತ್ರವೂ ಮೂಡಿಬಂದಿತು.

ಶಿರಸಿಗೆ ಬಂದಾಗಿನಿಂದ ನನ್ನ ಅಮ್ಮನ ಆರೋಗ್ಯ ಕೆಡುತ್ತ ಬಂದಿತು. ಡಾ. ಎ. ಎನ್. ಪಟವರ್ಧನರ ಆದೇಶದಂತೆ ೧೯೬೫ ರ ಮೇ ೧೨ ರಂದು ನಾನು ಅವಳನ್ನು ಹುಬ್ಬಳ್ಳಿಯ ಕೆ. ಎಂ. ಸಿ. ಆಸ್ಪತ್ರೆಗೆ ಸೇರಿಸಿದೆ. ಅಲ್ಲಿ ಯಾವ ಸುಧಾರಣೆಯೂ ಕಂಡುಬರಲಿಲ್ಲ. ನಂತರ ಪಾಟೀಲರ ಕೋ-ಆಪರೇಟಿವ್ ಆಸ್ಪತ್ರೆಗೆ ಸೇರಿಸಿದೆ ಅಲ್ಲಿಯೂ ಪ್ರಯೋಜನವಾಗಲಿಲ್ಲ. ಶಿರಸಿಗೆ ಕರೆತಂದು ಪಟವರ್ಧನರ ಧರ್ಮಶಾಲೆ ಆಸ್ಪತ್ರೆಗೆ ಸೇರಿಸಿದೆ. ಈ ಸಮಯದಲ್ಲೆಲ್ಲ ನನ್ನ ಸಹಾಯಕ್ಕೆ ಬಂದವರು ಹೊನ್ನೇಗದ್ದೆಯ ನನ್ನ ಭಾವ ಗೋಪಾಲಕೃಷ್ಣ ಹೆಗಡೆ ಮತ್ತು ಅಕ್ಕ ಸೀತಾ. ತಾಯಿಯ ಅಂತಿಮ ಸೇವೆಯನ್ನು ಸೀತಕ್ಕನೇ ಮಾಡಿದಳು. ಗುರವಾರ, ದಿ. ೧೨ ೮-೧೯೬೫ ರಂದು ಬೆಳಿಗ್ಗೆ ೫-೧೫ ಕ್ಕೆ ನನ್ನ ಅಮ್ಮ ನಮ್ಮೆಲ್ಲರನ್ನು ಅಗಲಿದಳು. ಅವಳಿಗೆ ಗರ್ಭಕೋಶದಲ್ಲಿ ಕ್ಯಾನ್ಸರ ಆಗಿತ್ತೆಂದು ಹುಬ್ಬಳ್ಳಿಯ ಪಾಟೀಲ ಡಾಕ್ಟರರಿಂದ ತಿಳಿದು ಬಂದಿತು. ಒಟ್ಟಿನಲ್ಲಿ ಜೀವನದಲ್ಲಿ ಅವಳು ಸುಖವನ್ನೇ ಕಾಣಲಿಲ್ಲ. ಚಿಕ್ಕ ವಯಸ್ಸಿನಲ್ಲೇ ಪತಿಯನ್ನು ಕಳೆದುಕೊಂಡು, ನನ್ನನ್ನು ಸಾಕಿ, ಇಂದಿನ ಈ ಸ್ಥಿತಿಗೆ ತಂದವಳು

ಆ ಸಾಧ್ವಿ ಮಹಿಳೆ. ಅವಳ ಚಾರಿತ್ರ್ಯ, ಧೈರ್ಯ, ಸಂಕಲ್ಪ, ಸ್ವಾಭಿಮಾನಗಳನ್ನು ಎಲ್ಲರೂ ಮೆಚ್ಚಿಕೊಂಡಿದ್ದರು. ನಾನು ಕಂಡಂತೆ ಅವಳೊಬ್ಬ ಅತ್ಯಂತ ಪ್ರಾಮಾಣಿಕ ಮಹಿಳೆಯಾಗಿದ್ದಳು. ಅವಳ ಮರಣದ ಸಮಯದಲ್ಲಿ ನಾನು, ಸೀತಕ್ಕ ಮತ್ತು ಮೃಣಾಲಿನಿ ಪಕ್ಕದಲ್ಲಿಯೇ ಇದ್ದೆವು. ಒಟ್ಟಿನಲ್ಲಿ ಭೂಮಿಯ ಮೇಲಿನ ಅವಳ ಋಣ ತೀರಿತು. ಇಂದಿನ ಜೆ ಓ. ಸಿ. ಕಟ್ಟಡದ ಹಿಂಭಾಗದಲ್ಲಿ ಅವಳನ್ನು ಚಿತೆಗೆ ಏರಿಸಲಾಯಿತು. ಆಗ ಅಲ್ಲಿ ಕಟ್ಟಡವಿರಲಿಲ್ಲ. ಅದು ಬರೀ ಅಡವಿಯಾಗಿತ್ತು. ನಂತರ ಆ ಸ್ಥಳವೆಲ್ಲ ಎಂ. ಇ. ಸೊಸೈಟಿಗೆ ಬಂದು, ಕಾಲೇಜಿನ ಕಟ್ಟಡಗಳು ತಲೆ ಎತ್ತಿದವು. ನಾನು, ಭಾವ ಮತ್ತು ಸೀತಕ್ಕ ಗೋಕರ್ಣಕ್ಕೆ ಹೋಗಿ ಅಪರಕಾರ್ಯಗಳನ್ನೆಲ್ಲ ಮುಗಿಸಿಕೊಂಡು ಬಂದೆವು. ಗೋಕರ್ಣದ ಹನುಮಂತೇಶ್ವರ ಪುರಾಣಿಕರು ಎಲ್ಲವನ್ನೂ ಧರ್ಮಶಾಸ್ತ್ರಕ್ಕನುಗುಣವಾಗಿ ಸಾಗಿಸಿಕೊಟ್ಟರು. ಕೆಲವು ಕಾಲ ನನ್ನ ಜೀವನವೇ ಬರಡಾದಂತೆ ನನಗೆ ತೋರುತ್ತಿತ್ತು. ಒಮ್ಮೊಮ್ಮೆ ಅಳುತ್ತಲಿದ್ದೆ. ಕೆಲವು ಕಾಲ ಹಾಗೆಯೆ ಕಳೆದು, ಜೀವನದ ಮತ್ತೊಂದು ಅಂಕ ಪ್ರಾರಂಭವಾಯಿತು.

೧೯೬೫ ರ ಡಿಸೆಂಬರ್ ತಿಂಗಳ ೧೬ (ಗುರುವಾರ)ರಂದು ಬನವಾಸಿಯ ದತ್ತು ಭಾವ ನನ್ನ ಮನೆಗೆ ಬಂದು ತನ್ನ ಮಗಳಾದ ವೀಣಾಳ ಪ್ರಸ್ತಾಪ ಮಾಡಿ ಲಗ್ನ ನಿಶ್ಚೈಸಿಕೊಂಡು ಹೋದ.

ಪಾಕಿಸ್ತಾನ ಮತ್ತು ಭಾರತದ ಮಧ್ಯೆ ಶಾಂತಿಯನ್ನುಂಟು ಮಾಡಲು ಕಾರಣರಾದ, ೧೮ ತಿಂಗಳುಗಳಿಂದ ಭಾರತದ ಪ್ರಧಾನಿಯಾಗಿ ಕಾರ್ಯನಿರ್ವಹಿಸುತ್ತಲಿದ್ದ ಅಪ್ಪಟ ಗಾಂಧೀವಾದಿ ಲಾಲಬಹದ್ದೂರ ಶಾಸ್ತ್ರಿಯವರು ರಶಿಯಾದ ತಾಷ್ಕೆಂಟಿನಲ್ಲಿ ೧೯೬೬ ರ ಗುರುವಾರ (ದಿನಾಂಕ ೧೧-೧-೧೯೬೬) ದಂದು ಬೆಳಿಗ್ಗೆ ೧-೨೦ ಕ್ಕೆ ಮೃತರಾದರು. ಅಂಥ ಪ್ರಧಾನಿ ಭಾರತಕ್ಕೆ ಕೊನೆಗೆಂದೂ ದೊರೆಯಲಿಲ್ಲ.

೧೯೬೬ ರ ಬೇಸಿಗೆ ರಜೆಯಲ್ಲಿ ಎನ್. ಸಿ. ಸಿ. ನೌಕಾದಳದ ಪ್ರಿಕಮಿಷ್‌ನ ತರಬೇತಿಯನ್ನು ನಾನು ಕೋಚೀನದ ಐ.ಎನ್.ಎಸ್. ವೆಂಡುರ್ತಿಯಲ್ಲಿ ಪಡೆದೆ. ಬೇಸಿಕ್ ಸ್ಕೂಲ್, ಗನ್ನರಿ, ಸಿಗ್ನಲ್ ಮುಂತಾದ ಸ್ಕೂಲಗಳಲ್ಲಿ ನಾನು ಚೆನ್ನಾಗಿ ಮಾಡಿದೆ. ಆದರೆ ನ್ಯಾವಿಗೇಶನ್ ಡೈರೆಕ್ಷನ್ ಸ್ಕೂಲಿನಲ್ಲಿ ಬಹಳ ತೊಂದರೆಯಾಯಿತು. ವಿಜ್ಞಾನಕ್ಕೆ ಸಂಬಂಧಿಸಿದ ಉನ್ನತ ಅಭ್ಯಾಸವನ್ನು ಅಲ್ಲಿ ಬೋಧಿಸಲಾಗುತ್ತಿತ್ತು. ನಾವು ಒಟ್ಟು ೩೫ ಪ್ರಾಧ್ಯಾಪಕರು ಅಲ್ಲಿ ತರಬೇತಿ ಪಡೆಯುತ್ತಿದ್ದೆವು. ಕರ್ನಾಟಕದವರು ನಾವು ೮ ಜನರಿದ್ದಂತೆ ನೆನಪು. ನಾನು, ಡಿ ಜಿ. ಭಟ್ಟ, ಎಸ್.ವಿ. ನಾಯ್ಕ, ವಿ. ಆರ್. ಕುಲಕರ್ಣಿ, ಎಲ್ಲರೂ ಉತ್ತರ ಕನ್ನಡ ಜಿಲ್ಲೆಯವರು. ತರಬೇತಿಯ ಅವಧಿಯಲ್ಲಿ ಬಿಡುವು ದೊರೆತಾಗ ನಾವೆಲ್ಲ ಕನ್ಯಾಕುಮಾರಿಗೆ ಹೋಗಿದ್ದೆವು. ದಾರಿಯಲ್ಲಿ ತ್ರಿವೇಂದ್ರಮ್ ಕೂಡ ನೋಡಿದೆವು. ರಾಮನಾಥ, ಹುಸೇನ, ಚಂದ್ರಯ್ಯ

ಮುಂತಾದವರ ನೆನಪೂ ಬರುತ್ತಿದೆ. ೧೯೬೬ ರ ಜುಲೈ ತಿಂಗಳ ಒಂದರಂದು, ಶೂಟಿಂಗ್‌ನಲ್ಲಿ ವಿಶೇಷ ತರಬೇತಿ ಪಡೆಯಲು ಕೊಯಿಮತ್ತೂರಿಗೆ ಹೋಗಿದ್ದೆವು. ೩೦೩ ರೈಫಲ್ ಹಾರಿಸುವಾಗ ನನ್ನ ಬಲ ಭುಜಕ್ಕೆ ಸ್ವಲ್ಪ ಹೊಡೆತ ಬಿತ್ತು. ಕೋಚೀನದಲ್ಲಿ ಯಶಸ್ವಿಯಾಗಿ ನೌಕಾದಳದ ತರಬೇತಿ ಪಡೆದು, ೧೯೬೬ ರ ಜುಲೈ ತಿಂಗಳಿನಲ್ಲಿ ನಾನು ಪುನಃ ಶಿರಸಿಗೆ ಬಂದೆ. ಆದರೆ ಶಿರಸಿಯಲ್ಲಿ ನನಗೆ ಆಘಾತ ಕಾದಿತ್ತು. ಶಿರಸಿಗೆ ಬಂದು ಒಂದು ವರ್ಷದಲ್ಲಿ ತಾಯಿಯನ್ನು ಕಳೆದುಕೊಂಡೆ. ಕೋಚೀನದಿಂದ ಶಿರಸಿಗೆ ಬಂದಾಗ, ಕಾಲೇಜಿನ ಇತಿಹಾಸ ವಿಭಾಗದಲ್ಲಿ ಮತ್ತು ಕಾಲೇಜಿನಲ್ಲಿ ನನ್ನ ಸೇವಾ ಜ್ಯೇಷ್ಠತೆಯನ್ನು ಕಳೆದುಕೊಂಡಿದ್ದೆ. ಒಟ್ಟಿನಲ್ಲಿ, ನನ್ನ ಬೆನ್ನಿಗೆ ಚೂರಿ ಹಾಕಲಾಯಿತು. ಈ ವಿಷಯ ಕುರಿತು ಹೆಚ್ಚಿಗೆ ಬರೆದು ನನ್ನ ಮನಸ್ಸಿಗೆ ಮತ್ತೊಮ್ಮೆ ನೋವನ್ನುಂಟುಮಾಡಿಕೊಳ್ಳಲು ನಾನು ಬಯಸುವದಿಲ್ಲ. ಒಟ್ಟಿನಲ್ಲಿ, ಇಲ್ಲಿಯ ಪರಿಸ್ಥಿತಿ ಬೀದರಿನ ಹಾಗೆ ಆರೋಗ್ಯಕರವಾಗಿಲ್ಲ ಮತ್ತು ಸಂಸ್ಥೆಯ ಚುಕ್ಕಾಣಿಯಾಗಿದ್ದವರು ಅಯೋಗ್ಯರೆಂಬುದು ಸ್ಪಷ್ಟವಾಯಿತು. ಈ ಘಟನೆಯ ನಂತರದ ನನ್ನ ಜೀವನ ಬರೇ ಹೋರಾಟದ ಜೀವನ. ಈ ಹೋರಾಟದ ಬದುಕಿನಲ್ಲಿಯೇ ಅನೇಕ ಘಟನೆಗಳು ಜರುಗಿವೆ. ಈ ಅವಧಿಯಲ್ಲಿಯ ಅನೇಕ ಸಾಧನೆಗಳೂ ನನ್ನದಾಗಿವೆ. ಅವುಗಳೆಲ್ಲದರ ಲಘು ಪರಿಚಯ ಇಂತಿದೆ—

ಸರಿಯಾದ ಅಧ್ಯಯನ ಮಾಡಿ ವಿದ್ಯಾರ್ಥಿಗಳಿಗೆ ನಾನು ಕಲಿಸುತ್ತಿದ್ದುದರಿಂದ ವಿದ್ಯಾರ್ಥಿಗಳೊಂದಿಗೆ ಆತ್ಮೀಯತೆ ಬೆಳೆಯಿತು. ವಿದ್ಯಾರ್ಥಿಗಳಿಗೆ ಅಥ್ಲೆಟಿಕ್ಸ್ ತರಬೇತಿ ಮತ್ತು ನೌಕಾದಳದ ತರಬೇತಿ ನೀಡತೊಡಗಿದ್ದರಿಂದ ನನ್ನ ಹೆಚ್ಚಿನ ವೇಳೆಯನ್ನು ಕಾಲೇಜಿನಲ್ಲಿಯೇ ಕಳೆಯತೊಡಗಿದೆ. ನನಗಾದ ಅನ್ಯಾಯವನ್ನು ತಾತ್ಕಾಲಿಕವಾಗಿ ಮರೆಯಲು ಸಾಧ್ಯವಾಗುತ್ತಿತ್ತು.

೧೯೬೬ ರ ದೀಪಾವಳಿ ರಜೆಯಲ್ಲಿ ನನ್ನ ಎನ್. ಸಿ. ಸಿ. ವಿದ್ಯಾರ್ಥಿಗಳನ್ನು ಮಂಗಳೂರಿನಲ್ಲಿ ನಡೆದ ಕ್ಯಾಂಪ್‌ನಲ್ಲಿ ಭಾಗವಹಿಸಲು ಕರೆದುಕೊಂಡು ಹೋಗಿದ್ದೆ.

ನನ್ನ ಜೀವನದಲ್ಲಿಯ ಮತ್ತೊಂದು ಮಹತ್ವದ ಘಟನೆಯೆಂದರೆ, ೧೯೬೬ ರ ಡಿಸೆಂಬರ ತಿಂಗಳಿನ, ಸೋಮವಾರ ದಿನಾಂಕ ೨೬ ರಂದು ಬೆಳಿಗ್ಗೆ ೧೧-೩೫ (ಪರಾಭವ ಸಂ. ಮಾರ್ಗಶೀರ್ಷ ಮಾಸ, ಶುದ್ಧ, ಕುಂಭಲಗ್ನ)ಕ್ಕೆ ಬನವಾಸಿಯಲ್ಲಿ ದತ್ತಾತ್ರೇಯ ಭಟ್ಟ ಮತ್ತು ಭಾಗೀರಥಿ ಇವರ ಹಿರಿಯ ಪುತ್ರಿ, ವೀಣಾಳೊಂದಿಗೆ ನನ್ನ ವಿವಾಹವಾಯಿತು. ನನ್ನ ಆತ್ಮೀಯ ಮಿತ್ರರಾದ ಜಿ.ವಿ. ಭಟ್ಟ, ವಿಷ್ಣುಮೂರ್ತಿ, ಡಿ. ಸಿ. ಭಟ್ಟ, ಆರ್. ವಿ. ಶಾಸ್ತ್ರಿ, ರಾಮನಾಥ ಮುಂತಾದವರು ಲಗ್ನಕ್ಕೆ ಆಗಮಿಸಿದ್ದರು. ಧಾರವಾಡದಿಂದ ನಾಡಕರ್ಣಿ ಕುಟುಂಬದವರೆಲ್ಲ ಬಂದಿದ್ದರು.

೧೯೬೭ ರ ಡಿಸೆಂಬರ್ ತಿಂಗಳಿನ ೮, ೯ ಮತ್ತು ೧೦ ರಂದು ಬೀದರದಲ್ಲಿ ನಡೆದ ಅಂತರ ಕಾಲೇಜು ಅಥ್ಲೆಟಿಕ್ಸ್ ಪಂದ್ಯಗಳಲ್ಲಿ ಭಾಗವಹಿಸಲು ನಮ್ಮ ವಿದ್ಯಾರ್ಥಿಗಳನ್ನು ಕರೆದುಕೊಂಡು ಹೋಗಿದ್ದೆ. ನಮ್ಮ ವಿದ್ಯಾರ್ಥಿಗಳು ೧೪ ಅಂಕಗಳನ್ನು ಪಡೆದು ವಿಶ್ವವಿದ್ಯಾಲಯಕ್ಕೆ ೮ ನೆಯ ಸ್ಥಾನ ಪಡೆದರು. ವೀಣಾಳೂ ನನ್ನೊಂದಿಗೆ ಬಂದಿದ್ದಳು. ನಾವೆಲ್ಲ ಹೈದರಾಬಾದಿಗೆ ಹೋಗಿ ಬಂದೆವು.

ನಾನು ಮತ್ತು ವೀಣಾ ೧೯೬೯ ರ ಮಾರ್ಚ್ ೧೧ ರಂದು ದಿಲ್ಲಿಗೆ ಪ್ರಯಾಣಿಸಿ, ಅದೇ ತಿಂಗಳ ೨೫ ರಂದು ಶಿರಸಿಗೆ ಮರಳಿದೆವು. ಪುಣೆಯ ಆರ್ಮಿ ಕ್ಯಾಡೆಟ್ ಕಾಲೇಜಿನ ಇತಿಹಾಸ ಉಪನ್ಯಾಸಕ ಹುದ್ದೆಯ ಯು.ಪಿ.ಎಸ್.ಸಿ. ಯ ಸಂದರ್ಶನ ದಿನಾಂಕ ೧೭ ರಂದು ಧೋಲಪುರ ಹೌಸನಲ್ಲಿ ನಡೆಯಿತು. ಒಂದೇ ಹುದ್ದೆಯಿದ್ದ ಈ ಸ್ಥಳಕ್ಕೆ ನನ್ನನ್ನು ಆಯ್ಕೆ ಮಾಡಿದ್ದರ ಕುರಿತು ಕೆಲವು ತಿಂಗಳಗಳ ನಂತರ ನನಗೆ ಆಜ್ಞಾಪತ್ರವನ್ನು ಕಳುಹಿಸಲಾಯಿತು. ದಿಲ್ಲಿಯಲ್ಲಿ ನಾವು ನನ್ನ ಮಿತ್ರನಾದ ಕೋಡದ ಮನೆಯಲ್ಲಿ ಉಳಿದೆವು. ರಾಷ್ಟ್ರೀಯ ವಸ್ತುಸಂಗ್ರಹಾಲಯ, ರಾಷ್ಟ್ರಪತಿ ಭವನ, ಸೆಕ್ರೆಟೇರಿಯಟ್, ಪಾರ್ಲಿಮೆಂಟ್ ಭವನ, ಕೊನ್ನಾಟ ಸರ್ಕಸ್, ಬಿಗ್ ಬ್ಯಾಂಕ್ಸ್, ಜಂತರ ಮಂತರ. ಕುತುಬ್‌ಮಿನಾರ್, ಕೆಂಪುಕೋಟೆ, ಬುದ್ಧ ಪಾರ್ಕ್ ಮುಂತಾದವುಗಳನ್ನು ನೋಡಿಕೊಂಡು, ಆಗ್ರಾದ ತಾಜಮಹಲ್ ನೋಡಿಕೊಂಡು ಮುಂಬೈಯಲ್ಲಿನ ನನ್ನ ಮಿತ್ರನಾದ ಯು. ಎನ್. ನಾಡಕರ್ಣಿ (ಪ್ರಕಾಶ)ಯ ಮನೆಗೆ ಬಂದು ತಂಗಿದೆವು. ಮುಂಬೈಯಲ್ಲಿ ಅವನೊಂದಿಗೆ ವಿ.ಟಿ., ಅಕ್ವೇರಿಯಮ್, ಮುಂಬಯಿ ವಿಶ್ವವಿದ್ಯಾಲಯ, ಉಷಾಕಿರಣ, ಚೌಪಾಟಿ, ದಾದರ, ಮಾತುಂಗಾ, ಅಪನಾ ಬಝಾರ, ಮಲಬಾರ ಹಿಲ್, ಕಮಲಾ–ನೆಹರು ಪಾರ್ಕ್ ನೋಡಿ, ಎರಾಸ್ ಸಿನೆಮಾ ಮಂದಿರದಲ್ಲಿ 'The Reflections in the Golden Eyes' ಎಂಬ ಸಿನೆಮಾ ನೋಡಿದೆವು. ದಿಲ್ಲಿಯ ಪ್ರವಾಸ ಒಟ್ಟಿನಲ್ಲಿ ಹಿತಕರವಾಗಿತ್ತು.

೧೯೬೯ ರ ಮೇ ತಿಂಗಳಿನ ದಿನಾಂಕ ೧೮, ೧೯ ಮತ್ತು ೨೦ ರಂದು ಶಿವಮೊಗ್ಗಾದಲ್ಲಿ ಕೆಳದಿಯ ಚರಿತ್ರೆಗೆ ಸಂಬಂಧಿಸಿ ಸಮ್ಮೇಳನ ಜರುಗಿತು. ಸಮ್ಮೇಳನಕ್ಕೆ ನಾನೂ ಹೋಗಿದ್ದೆ. ಡಾ. ಎಸ್.ಆರ್. ರಾವ್. ಡಾ. ಜಿ.ಎಸ್. ದೀಕ್ಷಿತ, ಎನ್. ಲಕ್ಷ್ಮೀನಾರಾಯಣರಾವ್ ಮುಂತಾದ ವಿದ್ವಾಂಸರು ಉಪಸ್ಥಿತರಿದ್ದರು. ಭುವನಗಿರಿಯ ಸ್ವಾಮಿಗಳು ನಮ್ಮನ್ನು ಕೆಳದಿ. ಇಕ್ಕೇರಿ, ಜೋಗ, ಬಿದನೂರು, ನಗರ ಮತ್ತು ಭುವನಗಿರಿದುರ್ಗ ಸ್ಥಳಗಳಿಗೆ ಕರೆದೊಯ್ದರು. ಮುಂದೆ ನಡೆದ ಅನೇಕ ಇತಿಹಾಸ ಸಮ್ಮೇಳನಗಳಲ್ಲಿ ಸಕ್ರಿಯವಾಗಿ ಭಾಗವಹಿಸಲು ನನಗೆ ಆಸಕ್ತಿ ಉಂಟಾಗಿದ್ದು ಈ ಸಮ್ಮೇಳನದಿಂದಲೇ ಎಂದು ಹೇಳಬಹುದು.

೧೯೬೯ ರ ಜುಲೈ ತಿಂಗಳ ೨೦ ರಂದು ಅಮೆರಿಕೆಯ ಗಗನಯಾತ್ರಿಗಳಾದ ಆರ್ಮ್‌ಸ್ಟ್ರಾಂಗ್ ಮತ್ತು ಅಲ್ಡ್ರಿನ್ಸ್‌ರು ಜಗತ್ತಿನ ಚರಿತ್ರೆಯಲ್ಲಿಯೇ ಪ್ರಥಮ

ಬಾರಿಗೆ ಚಂದ್ರನ ಮೇಲೆ ಪಾದಾರ್ಪಣ ಮಾಡಿದರು. ಈ ಘಟನೆಯನ್ನು ದಿನಚರಿಯಲ್ಲಿ ಉಲ್ಲೇಖಿಸಿದ್ದೇನೆ.

೧೯೬೯ ರ ಅಕ್ಟೋಬರ್ ದಿನಾಂಕ ೧೫ ರಂದು ೧೯ ಎನ್.ಸಿ.ಸಿ. ನೌಕಾದಳದ ವಿದ್ಯಾರ್ಥಿಗಳನ್ನು ಬೆಂಗಳೂರು ಕ್ಯಾಂಪ್‌ಗೆ ಕರೆದುಕೊಂಡು ಹೋಗಿ ೨೬ ರಂದು ತಿರುಗಿ ಬಂದೆ. ಆದರೆ ೧೯೭೦ ರ ಎಪ್ರಿಲ್ ೧ ರಂದು ನಾನು ಎನ್. ಸಿ. ಸಿ. ಗೆ ರಾಜೀನಾಮೆ ನೀಡಿದೆ. ಒಬ್ಬ ವಿದ್ಯಾರ್ಥಿಯನ್ನು ಅಶಿಸ್ತು ಮತ್ತು ಗೈರಹಾಜರಿ ಕಾರಣಗಳಿಗಾಗಿ ಹೊರತಳ್ಳಿದ್ದೆ. ದುರ್ದೈವದಿಂದ ಆ ವಿದ್ಯಾರ್ಥಿಗೆ ಪ್ರವೇಶ ನೀಡಲಾಯಿತು. ಎನ್.ಸಿ ಸಿ ಯಲ್ಲಿಯೇ ಶಿಸ್ತಿಗೆ ಬೆಲೆ ಇಲ್ಲದ ಮೇಲೆ, ನಾನು ಆ ಸಂಸ್ಥೆಯ ಅಧಿಕಾರಿಯಾಗಿ ಮುಂದುವರಿಯುವದು ಸರಿಯಲ್ಲವೆಂದು, ಹುದ್ದೆಗೆ ರಾಜೀನಾಮೆ ನೀಡಿದೆ. ನೌಕಾದಳವೇ ನನ್ನ ನಿರ್ಗಮನದಿಂದಾಗಿ ಸತ್ತುಹೋಯಿತು. ಕಾರವಾರದಲ್ಲಿ ಮುಂದಿನ ವರ್ಷಗಳಲ್ಲಿ ಸೀಬರ್ಡ್ ಅಸ್ತಿತ್ವಕ್ಕೆ ಬಂದಿತು. ನೌಕಾದಳ ನಮ್ಮಲ್ಲಿದ್ದಿದ್ದರೆ ನಮ್ಮ ವಿದ್ಯಾರ್ಥಿಗಳಿಗೆ ಸೀಬರ್ಡ್‌ನಲ್ಲಿ ಅವಕಾಶಗಳು ದೊರೆಯುವ ಸಾಧ್ಯತೆಗಳಿದ್ದವು. "ತಾನೊಂದು ಬಗೆದರೆ ವಿಧಿ ಮತ್ತೊಂದು ಬಗಿದಿತು", ಎಂದ ಹಾಗೆ ಆಯಿತು.

ನಾನು ಕಟ್ಟಿಸಿದ 'ಭವಾನಿ' ಮನೆಯ ಕೆಸರಕಲ್ಲು ಮುಹೂರ್ತ ೧೯೭೦ ರ ಅಗಸ್ಟ್ ತಿಂಗಳಿನ ೩೦ ರಂದು ಬೆಳಿಗ್ಗೆ ೧೧-೩೦ ಕ್ಕೆ ಜರುಗಿತು. ಗೃಹಪ್ರವೇಶ ೧೯೭೧ ರ ಮಾರ್ಚ್, ೨೭ ಶನಿವಾರದಂದು ಜರುಗಿತು. ವಾದಿರಾಜ ಜೋಯ್ಸರು ಕಾರ್ಯ ನೆರವೇರಿಸಿಕೊಟ್ಟರು. ಮನೆ ಕಟ್ಟಿಕೊಡಲು ಮಹಾಬಲಾಚಾರಿಯವರಿಗೆ ೨೨೦೦೦-೦೦ ರೂಪಾಯಿಗಳನ್ನು ಮುಟ್ಟಿಸಿದೆ. ಸುಮಾರು ೧೫೦೦೦-೦೦ ಸಾಲ ಮಾಡಿದೆ. ಸಾಲ ತೀರಿಸಲು ಸುಮಾರು ೧೫ ವರ್ಷಗಳೇ ಬೇಕಾದವು.

೧೯೭೧ ರ ಅವಧಿಯಲ್ಲಿ ಟಾಲ್‌ಸ್ಟಾಯ್‌ರ ಕೊನೆಯ ಮಹಾನ್ ಕಾದಂಬರಿ, 'Resurrection' ಓದಿದೆ.

ಡಾ. ಕಲಾಭಟ್ಟರ ನರ್ಸಿಂಗ್‌ಹೋಮ್‌ನಲ್ಲಿ ಗುರುವಾರ, ದಿ. ೨೮-೫-೧೯೭೧ ರಂದು ಮಧ್ಯಾಹ್ನ ೨-೪೦ ಕ್ಕೆ ವೀಣಾ ನವೀನನಿಗೆ ಜನ್ಮವಿತ್ತಳು. ಮಗು ಆರೋಗ್ಯಕರವಾಗಿತ್ತು.

ಇತಿಹಾಸ ಸಂಶೋಧನಾ ಕಾರ್ಯದಲ್ಲಿ ನನ್ನನ್ನು ತೊಡಗಿಸಿಕೊಳ್ಳಬೇಕೆಂಬ ಆಸಕ್ತಿ ನನ್ನಲ್ಲಿ ಹೆಚ್ಚಾಗತೊಡಗಿತು. ನನ್ನ ವಿದ್ಯಾಗುರುಗಳಾದ ಡಾ. ಜಿ. ಎಸ್. ದೀಕ್ಷಿತರ ಆದೇಶದಂತೆ ನಾನು ೧೯೭೧ ರ ಅಕ್ಟೋಬರ್ ೨೬ ಮಂಗಳವಾರದಂದು ಶೃಂಗೇರಿಗೆ ಹೋಗಿ, ಜಗದ್ಗುರುಗಳಾದ ಶ್ರೀ ಶ್ರೀ ಅಭಿನವವಿದ್ಯಾತೀರ್ಥರ ದರ್ಶನ ಪಡೆದು, ಅಲ್ಲಿ ಸಂಗ್ರಹಿಸಿ ಇಡಲಾದ ಕಡತಗಳನ್ನು ನೋಡಿಕೊಂಡು, ೨೯ ರ

ಸಂಜೆ ಶಿರಸಿಗೆ ಬಂದೆ. ಶೃಂಗೇರಿ ಮಠದ ಚಾರಿತ್ರಿಕ ದಾಖಲೆಗಳ ಅಧ್ಯಯನ ಅಂದು ಪ್ರಾರಂಭವಾದದ್ದು ಇಂದಿಗೂ ಮುಂದುವರೆದಿದೆ. ಸಂಶೋಧನಾ ಕಾರ್ಯಕ್ಕಾಗಿ ಅದೆಷ್ಟು ಸಲ ನಾನು ಶೃಂಗೇರಿಗೆ ಹೋದೆ! ಧಾರವಾಡದ ಕೊಪ್ಪಳ ಮಾಸ್ತರ ಮತ್ತು ಮುಖ್ಯವಾಗಿ ಕೆಳದಿಯ ಗುಂಡಾ ಜೋಯ್ಸರಿಂದ ಕಡತಗಳಲ್ಲಿಯ ಕನ್ನಡ ಲಿಪಿಯನ್ನು ಓದಲು ಕಲಿತೆ. ಹೆಚ್ಚಿನ ರೂಢಿಯ ಮೇಲಿಂದ, ಮುಂದಿನ ವರ್ಷಗಳಲ್ಲಿ ಸಹಸ್ರಾರು ಚಾರಿತ್ರಿಕ ದಾಖಲೆಗಳನ್ನು ಓದಿ, ಅರ್ಥೈಸಿಕೊಂಡು, ಅವುಗಳಿಗೆಲ್ಲ ಸರಿಯಾದ ಸ್ವರೂಪ ಕೊಡಲು ಸಾಧ್ಯವಾಯಿತು. ಶನಿವಾರ, ದಿನಾಂಕ ೨–೩–೧೯೭೪ ರಂದು ಭುವನಗಿರಿ ದುರ್ಗದ ಶ್ರೀ ಮಹಾಮಹತ್ತಿ ಮಠದ ಶ್ರೀ ಮಹಾಮಹಂತ ವೀರಭದ್ರ ಶಿವಾಚಾರ್ಯ ಮಹಾಸ್ವಾಮಿಗಳು ನಮ್ಮ ಮನೆಗೆ ಬಂದಿದ್ದರು. ಭುವನಗಿರಿ ಮಠದ ಕಡತಗಳನ್ನು ಪರಿಶೀಲಿಸಿ, ಆ ಮಠದ ಚರಿತ್ರೆ ಬರೆಯುವಂತೆ ನನಗೆ ಅಪ್ಪಣೆ ನೀಡಿದ್ದರು. ನಾನು ಮತ್ತು ಕರ್ನಾಟಕ ಪತ್ರಾಗಾರ ಇಲಾಖೆಯ ಅಂದಿನ ನಿರ್ದೇಶಕರಾದ ಡಾ. ಎಸ್. ವಿ. ದೇಶಿಕಾಚಾರ್ ಅವರು ಭುವನಗಿರಿಗೆ ಹೋಗಿದ್ದೆವು. ಆದರೆ ಬೇರೆ ಬೇರೆ ಸಂಶೋಧನಾ ಕಾರ್ಯಗಳಲ್ಲಿ ನಿರತನಾದದ್ದರಿಂದ ಅಲ್ಲಿಯ ಕಡತಗಳ ಅಧ್ಯಯನ ಮಾಡಲು ನನಗೆ ಸಾಧ್ಯವಾಗಲಿಲ್ಲ. ಅದಕ್ಕಾಗಿ ನಾನು ಸ್ವಾಮಿಗಳಲ್ಲಿ ಕ್ಷಮೆಯಾಚಿಸಿದೆ. ೧೯೭೬ ರಲ್ಲಿ ನಾನು ಮಂಡಿಸಿದ 'A History of Sringeri' ಎಂಬ ಮಹಾಪ್ರಬಂಧಕ್ಕೆ ಕರ್ನಾಟಕ ವಿಶ್ವವಿದ್ಯಾಲಯ ಪಿಎಚ್. ಡಿ. ಪದವಿ ದಯಪಾಲಿಸಿತು. ನನಗೆ ಮಾರ್ಗದರ್ಶಕರಾಗಿದ್ದವರು ಡಾ. ಜಿ. ಎಸ್. ದೀಕ್ಷಿತ.

ಗುರುವಾರ, ದಿನಾಂಕ ೫–೬–೧೯೭೫ ರಂದು ಹೊನ್ನೇಗದ್ದೆ ಸೀತಕ್ಕಳ ಮಗಳಾದ ಗಿರಿಜಾಳನ್ನು, ಭದ್ರಾವತಿಯ ಕಾಲೇಜಿನಲ್ಲಿ ಅರ್ಥಶಾಸ್ತ್ರದ ಉಪನ್ಯಾಸಕನಾದ ಕೋಡ್ಸರದ ರಾಜಾರಾಮ ವಿ. ಹೆಗಡೆಗೆ ಕೊಟ್ಟು ವಿವಾಹ ಮಾಡಲಾಯಿತು.

ಗುರುವಾರ, ದಿನಾಂಕ ೧೧–೯–೧೯೭೫ ರಂದು ನನ್ನ ಕರ್ನಾಟಕ ಕಾಲೇಜಿನ ಮಿತ್ರ ಪರಮೇಶ್ವರ ಎಸ್. ಉಪ್ಪುಂದ ಮೂತ್ರಕೋಶದ ಸಮಸ್ಯೆಯಿಂದಾಗಿ ಮೃತನಾದ. ಆಗ ಅವನಿಗೆ ೩೩ ವಯಸ್ಸು. ದುರ್ದೈವದ ಸಂಗತಿಯೆಂದರೆ ಅವನು ಆಗತಾನೇ ಲಗ್ನವಾಗಿದ್ದ.

೧೯೭೬ ರ ಜನವರಿಯ ದಿನಾಂಕ ೫ ಮತ್ತು ೬ ರಂದು ಶೃಂಗೇರಿ ಜಗದ್ಗುರು ಶ್ರೀ ಶ್ರೀ ಅಭಿನವ ವಿದ್ಯಾತೀರ್ಥರು ಮತ್ತು ಶ್ರೀ ಶ್ರೀ ಭಾರತೀ ತೀರ್ಥರು ಶಿರಸಿಯಲ್ಲಿ ಜರುಗಿದ ಕಾರ್ಯಕ್ರಮಗಳಲ್ಲಿ ಭಾಗವಹಿಸಿದರು. ಅಡ್ಡಪಲ್ಲಕ್ಕಿ ಉತ್ಸವವನ್ನು ಏರ್ಪಡಿಸಲಾಗಿತ್ತು. ಶ್ರೀ ಮಾರಿಕಾಂಬಾ ದೇವಾಲಯದಲ್ಲಿ ಸನ್ಮಾನ ಪತ್ರವನ್ನು ನಾನು ಓದಿದೆ. ಜಿ. ಎಸ್. ಹೆಗಡೆ ಕಡೆಕೋಡಿಯವರು ಸ್ವಾಗತಿಸಿದರು, ಎಂ. ಜಿ.

ಹೆಗಡೆ ಆಲೇಸರರು ಸ್ವಾಗತಗೀತೆ ಹಾಡಿದರು. ಶ್ರೀ ಅಭಿನವ ವಿದ್ಯಾತೀರ್ಥರು ದಿನಾಂಕ ೬ ರಂದು ನಮ್ಮ ಮನೆಗೆ ಮತ್ತು ಕಾಲೇಜಿಗೆ ಭೆಟ್ಟಿನೀಡಿ, ವಿದ್ಯಾರ್ಥಿಗಳನ್ನು ಕುರಿತು ಉಪನ್ಯಾಸ ನೀಡಿದರು. ಶಿರಸಿಯಿಂದ ಅವರು ಮುಂದೆ ಬನವಾಸಿಗೆ ತೆರಳಿ ಶಂಕರ ಶೆಟ್ಟಿಯವರ ಮನೆಯಲ್ಲಿ ತಂಗಿದರು.

ಕಾಲೇಜಿನಲ್ಲಿ ನಡೆಯುತ್ತಿದ್ದ ಸಕಲ ರೀತಿಯ ಅವ್ಯವಹಾರಗಳನ್ನು ಸಹಿಸ ಲಾರದೆ ಎಂ. ಇ. ಸೊಸೈಟಿಯ ವ್ಯವಸ್ಥಾಪಕ ಮಂಡಲಿಯವರು ಶನಿವಾರ ದಿನಾಂಕ ೧೭-೧-೧೯೭೬ ರಂದು ನನ್ನನ್ನು ಎಂ. ಎಂ. ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯದ ಪ್ರಾಚಾರ್ಯನನ್ನಾಗಿ ಒಮ್ಮತದಿಂದ ನೇಮಿಸಿತು. ಆದರೆ ದುಷ್ಟರ ಉಪಟಳ ಸಹಿಸಲಾರದೆ ಪರಿಸ್ಥಿತಿಯ ಒತ್ತಡದಿಂದಾಗಿ ಸೋಮವಾರ, ೧೯ ರಂದು ಮಧ್ಯಾಹ್ನ ಸುಮಾರು ೨-೩೦ ಕ್ಕೆ ಆ ಸ್ಥಾನ ತ್ಯಜಿಸಿದೆ. ಅಧ್ಯಕ್ಷರಾದ ಶ್ರೀ ವಿ.ಎಸ್. ಸೋಂದೆ ಮತ್ತು ಕೆಲವು ಸದಸ್ಯರೂ ತಮ್ಮ ತಮ್ಮ ಸ್ಥಾನ ತ್ಯಜಿಸಿದರು. ಅದರಿಂದಾಗಿ ಕಾಲೇಜಿನ ಪರಿಸ್ಥಿತಿ ಮತ್ತೂ ಬಿಗಡಾಯಿಸಿತು. ವಿದ್ಯಾರ್ಥಿಗಳಲ್ಲಿ ಅಶಿಸ್ತು ಹೆಚ್ಚೆಚ್ಚು ಬೆಳೆಯತೊಡಗಿತು. ಪ್ರಾಧ್ಯಾಪಕರಿಗೆಲ್ಲ ತಮ್ಮ ತಮ್ಮ ಕೊಠಡಿಗಳಲ್ಲಿ ಪಾಠಮಾಡುವದೇ ದೊಡ್ಡ ಸಮಸ್ಯೆಯಾಯಿತು. ಆದರೆ ತಾವೇ ತಮ್ಮ ಕಾಲಮೇಲೆ ಹೊಡೆದುಕೊಂಡ ಕೊಡಲಿಪೆಟ್ಟು ಅದಾಗಿತ್ತು. ಆಗ ಅನೇಕ ಆಷಾಢಭೂತಿಗಳು ತಾತ್ಕಾಲಿಕವಾಗಿ ರಾರಾಜಿಸಿದರು. ನಾನು ಬರೆದ 'A History of Sringeri' ಎಂಬ ಮಹಾ ಪ್ರಬಂಧಕ್ಕೆ ಪಿಎಚ್ ಡಿ. ಪ್ರದಾನವಾಗಿದ್ದೂ ೧೯೭೬ ರಲ್ಲೇ ಎಂಬುದನ್ನು ನಾನು ಪುನಃ ಜ್ಞಾಪಿಸುವೆ. ನಾನು ಬರೆದ 'ಶೃಂಗೇರಿಯ ಇತಿಹಾಸ' ಎಂಬ ಪುಸ್ತಕವನ್ನು ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗ ೧೯೭೬ ರಲ್ಲಿ ಪ್ರಕಾಶಿಸಿತು. ಮುಂದೆ ಆ ಪುಸ್ತಕ ಮೂರು ಮುದ್ರಣಗಳನ್ನು ಕಂಡಿತು.

ಗಿರೀಶ ಕಾರ್ನಾಡ ನನ್ನ ವಿದ್ಯಾರ್ಥಿ ಜೀವನದಲ್ಲಿಯೇ ಪರಿಚಯದ ವ್ಯಕ್ತಿ. ದಿನಾಂಕ ೨೭-೭- ೧೯೭೬ ರಂದು ನಾನು ಅಕಸ್ಮಾತ್ ಗಿರೀಶ ಕಾರ್ನಾಡ, ಬಿ. ವಿ. ಕಾರಂತ ಮತ್ತು ಸತೀಶ ಟಗರಪುರರನ್ನು ಧಾರವಾಡದ ಬಸ್ ನಿಲ್ದಾಣದಲ್ಲಿ ಭೆಟ್ಟಿಯಾದೆ. ಸುಮಾರು ಅರ್ಧಘಂಟೆ ಅನೇಕ ವಿಷಯಗಳನ್ನು ಕುರಿತು ಮಾತನಾಡಿದೆವು ನಮ್ಮ ಕಾಲೇಜಿಗೆ ಬರುವ ಇಂಗಿತವನ್ನೂ ಅವರು ವ್ಯಕ್ತಪಡಿಸಿದರು. ಆದರೆ ನನ್ನ ಮತ್ತು ಗಿರೀಶರ ಭೆಟ್ಟಿ ನಂತರ ಆಗಲೇ ಇಲ್ಲ.

ನನ್ನ ದಿವಂಗತ ಅಮ್ಮನ ಅಭಿಲಾಷೆ ಪೂರೈಸಲು ನಾನು ರವಿವಾರ ದಿನಾಂಕ ೧೯-೧೨-೧೯೭೬ ರಂದು ದೊಡ್ಡ ಗಣಪತಿ ದೇವಸ್ಥಾನದಲ್ಲಿ ಗಣಹೋಮ ಮಾಡಿಸಿದೆ. ನಾನು, ವೀಣಾ, ನವೀನ, ಹೊನ್ನೇಗದ್ದೆ ಅಕ್ಕ-ಭಾವ, ಮಾವ-ಅತ್ತೆ ಉಪಸ್ಥಿತರಿದ್ದರು.

ಕರ್ನಾಟಕ ಸಾಹಿತ್ಯ ಅಕಾಡೆಮಿಯ ಆಶ್ರಯದಲ್ಲಿ ೧೯೭೭ರ ಫೆಬ್ರುವರಿ ತಿಂಗಳಿನ ೫ ರಂದು ನಮ್ಮ ಕಾಲೇಜಿನಲ್ಲಿ 'ಹಳಗನ್ನಡ ಯುಗದ ನಂತರದ ಜೀವನದ ಯುಗ' ಮತ್ತು 'ಹಳಗನ್ನಡ ಯುಗ' ಕುರಿತು ಕ್ರಮವಾಗಿ ಡಾ. ವೃಷಭೇಂದ್ರ ಸ್ವಾಮಿ ಮತ್ತು ರಾವ್‌ಬಹಾದ್ದೂರರು ಮಾತನಾಡಿದರು. ದಿನಾಂಕ ೬ ರಂದು 'ನವಯುಗಾರಂಭ', 'ವಚನಕಾರರ ಯುಗ' ಮತ್ತು 'ವಿಜಯನಗರ ಕಾಲದ ಜೀವನ' ಕುರಿತು ಕ್ರಮವಾಗಿ ಡಾ. ಆರ್. ವೈ ಧಾರವಾಡಕರ, ಗೌರೀಶ ಕಾಯ್ಕಿಣಿ ಮತ್ತು ಶ್ರೀಮತಿ ಕಮಲಾ ಹಂಪನಾ ಅವರು ಮಾತನಾಡಿದರು. ಒಟ್ಟಿನಲ್ಲಿ ಕಾರ್ಯಕ್ರಮ ಚೆನ್ನಾಗಿತ್ತು. ವೃಷಭೇಂದ್ರಸ್ವಾಮಿ, ಧಾರವಾಡಕರ ಮತ್ತು ರಾವ್‌ಬಹಾದ್ದೂರರು ಆ ಸಂದರ್ಭದಲ್ಲಿ ನಮ್ಮ ಮನೆಗೂ ಬಂದಿದ್ದರು.

ನಮ್ಮ ಮನೆಯಲ್ಲಿ ಮತ್ತೊಂದು ಮಹತ್ವದ ಘಟನೆ ಜರುಗಿತು. ಬುಧವಾರ ಶಿವರಾತ್ರಿ, ದಿನಾಂಕ ೧೬-೨-೧೯೭೭ ರಂದು ಸಂಜೆ ೬-೫೨ಕ್ಕೆ ಡಾ. ಕಲಾ ಭಟ್ಟರ ಲಕ್ಷ್ಮಿ ಕ್ಲಿನಿಕ್‌ನಲ್ಲಿ ವೀಣಾ ನೀಲೇಶನಿಗೆ ಜನ್ಮ ನೀಡಿದರು. ಹೀಗಾಗಿ ನನ್ನಿಬ್ಬರು ಮಕ್ಕಳಾದ ನವೀನ ಮತ್ತು ನೀಲೇಶ ಶಿರಸಿಯ ಲಕ್ಷ್ಮಿ ಕ್ಲಿನಿಕ್‌ನಲ್ಲೇ ಜನಿಸಿದರು. ರವಿವಾರ ದಿ. ೨೭-೨-೧೯೭೭ ರಂದು ನೀಲೇಶನನ್ನು ತೊಟ್ಟಿಲಕ್ಕೆ ಹಾಕಲಾಯಿತು.

ದೇಶದ ರಾಜಕೀಯದಲ್ಲಿ ಬದಲಾವಣೆಯಾಗಿ ದಿನಾಂಕ ೨೪-೩-೧೯೭೭ರಂದು ಮುರಾರ್ಜಿ ದೇಸಾಯಿಯವರು ದೇಶದ ಪ್ರಧಾನಿಯಾದ ಸಂಗತಿಯನ್ನೂ ನನ್ನ ದಿನಚರಿಯಲ್ಲಿ ಉಲ್ಲೇಖಿಸಿದ್ದೇನೆ.

೧೯೭೭ರಲ್ಲಿ ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯ ಉಪನಿರ್ದೇಶಕ ಹುದ್ದೆಗೆ ಅರ್ಜಿ ಹಾಕಿದ್ದೆ. ಅದೇ ಇಲಾಖೆಯಲ್ಲಿ ಸೇವೆ ಸಲ್ಲಿಸಿದ ಮತ್ತು ಪಿಎಚ್. ಡಿ. ಪದವಿ ಪಡೆದ ನನಗೆ ಆ ಹುದ್ದೆ ದೊರೆಯಲಿಲ್ಲ; ಅಥವಾ ಕೆ. ಪಿ. ಎಸ್ ಸಿ. ಯವರು ನನಗೆ ಕೊಡಲಿಲ್ಲ ಎನ್ನಿ. ಸಮಸ್ತ ಭಾರತಕ್ಕೆ ಪುಣೆಯಲ್ಲಿದ್ದ ಒಂದು ಅಧಿಕಾರ ಸ್ಥಾನಕ್ಕೆ ಯುನಿಯನ್ ಪಬ್ಲಿಕ್ ಸರ್ವಿಸ್ ಕಮಿಷನ್ ನನ್ನನ್ನು ಆಯ್ಕೆ ಮಾಡಿದ್ದರೂ, ನಮ್ಮ ಕರ್ನಾಟಕ ಪಬ್ಲಿಕ್ ಸರ್ವಿಸ್ ಕಮಿಷನ್ನಿಗೆ ಯೋಗ್ಯತೆಯನ್ನು ಕಡೆಗಣಿಸುವುದೇ ಮೇಲೆಂದೆನಿಸಿರಬೇಕು.

ನಾನು ಕೃಷ್ಣಣ್ಣ – ಕಮಲಕ್ಕರ ಮನೆಯಲ್ಲಿ ಬಾಡಿಗೆಗೆ ಇದ್ದೆನಷ್ಟೆ ! ೧೯೭೭ರ ಅಗಸ್ಟ್ ತಿಂಗಳ ೨ ರಂದು ಬೆಳಿಗ್ಗೆ ೧೦ ಘಂಟೆಗೆ ೫೬ ವಯಸ್ಸಿನ ಕೃಷ್ಣಣ್ಣ ಹೃದಯಾಘಾತದಿಂದ ಮೃತರಾದರು. ಕಮಲಕ್ಕ, ನೂತಾ ಎಲ್ಲರೂ ಅಳುತ್ತಲಿದ್ದರು. ನಾನೂ ಒಬ್ಬ ಅವರ ಮನೆಯ ಸದಸ್ಯನಂತಿದ್ದುದರಿಂದ ನನಗೂ ಅಳುಬಂದಿತು. ಕೃಷ್ಣಣ್ಣ ನನ್ನ ಜೊತೆಗೆ ಯಾವಾಗಲೂ ಹರಟೆಹೊಡೆಯುತ್ತಿದ್ದರು. ಅವರೊಂದಿಗೆ ಮಾತನಾಡುವದೇ ನನಗೆ ಖುಶಿಯಾಗುತ್ತಿತ್ತು. ಆದರೆ ಎಲ್ಲವೂ ವಿಧಿವಿಲಾಸ !

೧೯೭೭ ರ ನವೆಂಬರ್ ತಿಂಗಳಿನ ದಿನಾಂಕ ೫, ೬ ಮತ್ತು ೭ ರಂದು ಡಾ. ಪಟವರ್ಧನರ ದವಾಖಾನೆಯ ಹಿಂಭಾಗದಲ್ಲಿ ಭದ್ರಗಿರಿ ಅಚ್ಯುತದಾಸರು ಮಾರ್ಮಿಕವಾದ ಕೀರ್ತನೆ ಮಾಡಿದರು. ದಿನಚರಿಯಲ್ಲಿ ಬರೆದ ಕೀರ್ತನೆಯ ಕೆಲವು ವಾಕ್ಯಗಳನ್ನು ಉಲ್ಲೇಖಿಸುವೆ. "ಜನಕ ರಾಜರ್ಷಿಯಂತೆ ಎಲ್ಲರೂ ಸಾರ್ಥಕ ಬಾಳನ್ನು ಬಾಳಬೇಕು. ಒಂದೇ ಗುಲಾಬಿ ಗಿಡದಲ್ಲಿ ಮೂರು ಹೂವುಗಳಾದರೂ, ಒಂದೊಂದು ಹೂವಿಗೆ ಒಂದೊಂದು ಯೋಗ. ಒಂದು ದೇವರ ಪ್ರಸಾದ; ಇನ್ನೊಂದು ಹೆಂಗಸಿನ ಮುಡಿಯಲ್ಲಿ ಬಾಡಿ ಬತ್ತುವದು; ಮತ್ತೊಂದು ರಸ್ತೆಯಲ್ಲಿ ಬಿದ್ದು ತುಳಿಯಲ್ಪಡುವದು. ಕಲ್ಲುಕುಟುಕನಿಂದ ಹೆಚ್ಚಿನ ಏಟು ತಿಂದ ಕಲ್ಲು ದೇವರ ಮೂರ್ತಿಯಾಗಿ ಪರಿಣಮಿಸುವದು; ಸ್ವಲ್ಪ ಕಡಮೆ ಪೆಟ್ಟು ತಿಂದದ್ದು ದೇವಸ್ಥಾನದ ಕಂಬ; ವಿಶೇಷ ಪೆಟ್ಟು ತಿನ್ನದೇ ಇದ್ದದ್ದು ಬಾಗಿಲದ ನೆಲದ ಮೇಲೆ ಎಲ್ಲರಿಂದ ತುಳಿಯಲ್ಪಡುತ್ತದೆ. ಅದರಂತೆ ಜೀವನದಲ್ಲಿ ಹೆಚ್ಚಿನ ಶ್ರಮಪಟ್ಟರೆ, ಹೆಚ್ಚಿನ ಫಲ ಲಭಿಸುತ್ತದೆ......... ಈಗಿನ ಕಾಲದವರಿಗೆ ಮಸ್ತಕಜ್ಞಾನ ಕಡಿಮೆ; ಕೇವಲ ಪುಸ್ತಕ ಜ್ಞಾನ ಹೆಚ್ಚು...... ತಾಯಿ ಕಪ್ಪು ಇರಲಿ ಅಥವಾ ಬೆಳ್ಳಗಿರಲಿ, ಅವಳನ್ನು ಬದಲು ಮಾಡಿಕೊಳ್ಳಬೇಕೆಂದರೆ ಎಂದೂ ಸಾಧ್ಯವಿಲ್ಲ...... ದಾರಿಯಲ್ಲಿ ಬಿದ್ದ ಕಪಿಯ (ಹನುಮಂತನ) ಬಾಲವನ್ನು ಅಲುಗಿಸಲೂ ಆಗದಿದ್ದಾಗ, ಭೀಮನ ಅಹಂಕಾರ ಮರ್ದನವಾಗುತ್ತದೆ", ಇತ್ಯಾದಿ ಹೇಳಿಕೆಗಳನ್ನೊಳಗೊಂಡ ಅವರ ಕಂಚಿನ ಕಂಠದ ಕೀರ್ತನೆಯನ್ನು ಒಮ್ಮೆ ಕೇಳಿದರೆ, ಮತ್ತೊಮ್ಮೆ ಕೇಳಬೇಕೆಂದೆನಿಸುತ್ತದೆ.

೧೯೭೮ ರ ಜುಲೈ ತಿಂಗಳಿನ ೧೦ ರಂದು ಬೆಂಗಳೂರಿನ ಅಂಬೇಡ್ಕರ ಕಾಲೇಜಿನಲ್ಲಿ ನಡೆದ ಸಂದರ್ಶನದಲ್ಲಿ ನನ್ನನ್ನು ಆ ಕಾಲೇಜಿನ ಪ್ರಾಚಾರ್ಯನೆಂದು ಆಯ್ಕೆ ಮಾಡಲು ವ್ಯವಸ್ಥಾಪಕ ಮಂಡಲಿಯವರು ಸಿದ್ಧರಿದ್ದರು. ಆದರೆ ಸಂಬಳದ ವಿಷಯದಲ್ಲಿ ನನಗೆ ಅವರೊಂದಿಗೆ ಹೊಂದಾಣಿಕೆ ಆಗದಕಾರಣ ನಾನು ಆ ವಿಚಾರವನ್ನು ಅಲ್ಲಿಗೇ ಬಿಟ್ಟೆ.

೧೯೭೮ ರ ಸಪ್ಪಂಬರದಲ್ಲಿ ಡಿ. ವಿ. ಜಿ. ಯವರ 'ಜೀವನ ಸೌಂದರ್ಯ ಮತ್ತು ಸಾಹಿತ್ಯ' ಎಂಬ ಗ್ರಂಥವನ್ನು ಓದಿದೆ. ಕೆಲವು ಸಾಲುಗಳನ್ನು ಉಲ್ಲೇಖಿಸಬಯಸುತ್ತೇನೆ. "ವಿಸ್ತಾರವಾದ ಅರ್ಥದಲ್ಲಿ ಸಾಹಿತ್ಯವು ವಿವಿಧ ಗ್ರಂಥ ಸಮೂಹ; ಪರಿಮಿತವಾದ ಅರ್ಥದಲ್ಲಿ ಕಾವ್ಯಸಮುದಾಯ... ದುಂಬಿಯನ್ನು ರೇಗಿಸಬೇಕೆಂದಲ್ಲ ಮಲ್ಲಿಗೆ ಬಿರಿಯುವದು; ವಿರಹಿಯನ್ನು ನೋಯಿಸಬೇಕೆಂದಲ್ಲ ಕೋಗಿಲೆ ಬಾಯ್ಬಿಡುವದು. ಸೌಂದರ್ಯದ ಹಾಡನ್ನು ಹಾಡುತ್ತಿರುವದು ಕವಿಯ ಸಹಜ ಧರ್ಮ; ಅದನ್ನು ಕೇಳಿದವನ ಅಂತರಂಗದ ಕಲ್ಲು ಬೆಣ್ಣೆಯಾಗುವದೂ, ಮಣ್ಣು ವಜ್ರವಾಗುವದೂ ಮಾನವ ಕುಲದ ಸಹಜ ಧರ್ಮ..." "ಸೌಂದರ್ಯವು ಮನಸ್ಸನ್ನು ಹಿಡಿದು, ನಿಲ್ಲಿಸಿ, ಕರಗಿಸಿ, ತಿರುಗಿಸುವ ಶಕ್ತಿ... ಕಾವ್ಯವು ದೇಶದಲ್ಲಿರತಕ್ಕ ಪಾಪ, ದೋಷ,

ಅಜ್ಞಾನ, ದುಃಖ- ಇವುಗಳ ನಾಶಕ್ಕೆ ಸಹಾಯವಾಗತಕ್ಕ ಶಕ್ತಿ; ಅದು ಬರಿಯ ಹೂಮಾಲೆಯಲ್ಲ. ಅದು ಹೆಂಗಸಿನಂತೆ ವಿಲಾಸೈಕ ಪರವಾದುದಲ್ಲ; ಗಂಡಸಿನ ವೀರಚರ್ಯೆಯೂ ಅದಕ್ಕೆ ಸೇರಿದೆ." ಎಂಬುದೇ ಹೆಯಿನ್ ಕವಿಯ ಮನೋಗತ. "ಕಾವ್ಯಪಾಠವು ದೊಂಬರ ಆಟದಂತಲ್ಲ; ಇಸ್ಪೀಟು ಚಮತ್ಕಾರದಂತಲ್ಲ. ಅದು ಉತ್ತಮವಾದ ಜೀವನಮಾರ್ಗದ ದೀಪಿಗೆ... ಸಂಶೋಧನೆ, ಸ್ವತಂತ್ರ ಬುದ್ಧಿ ಪರಿಶ್ರಮ... ಜಗತ್ತು ಸುಳ್ಳಲ್ಲ. "ಜಗನ್ಮಿಥ್ಯಾ" ಸಿದ್ಧಾಂತವು ಬ್ರಹ್ಮದೃಷ್ಟಿಯಿಂದ ಒಪ್ಪಿಗೆ ಪಡೆಯಬಹುದೇ ಹೊರತು ಜೀವದೃಷ್ಟಿಯಿಂದಲ್ಲ. ಜೀವದ ಪಾಲಿಗೆ ಜಗತ್ತು ಸತ್ಯ. ಮನುಷ್ಯನ ಧರ್ಮಾಧರ್ಮಗಳಿಗೂ ಪುಣ್ಯಪಾಪಗಳಿಗೂ ಅವಕಾಶ ಗಳನ್ನೂ, ಕಾರಣಗಳನ್ನೂ, ಸಾಧನಗಳನ್ನೂ ಒದಗಿಸುವದು ಜಗತ್ತು. ನಮ್ಮ ಜೀವನವನ್ನು ಕೆಣಕಿ, ಕಲಕಿ, ಏರ್ಪಡಿಸಿ, ಮಾರ್ಪಡಿಸಿ, ನಮಗೆ ಶಾಂತಿಯನ್ನೋ ಅಶಾಂತಿಯನ್ನೋ ತರುತ್ತಿರುವುದು ಈ ಲೋಕದ ಸೌಂದರ್ಯ ಸೌಭಾಗ್ಯಗಳು. ಸೌಂದರ್ಯವೆಂದರೆ ನಮಗೆ ಬೇಕೆನಿಸುವ, ಅಥವಾ ನಮ್ಮನ್ನು ಸಮಾಧಾನಗೊಳಿಸುವ ವಸ್ತುಗುಣಗಳು ಅಥವಾ ವಸ್ತುಲಕ್ಷಣಗಳು", ಇತ್ಯಾದಿ. ಡಿ. ವಿ. ಗುಂಡಪ್ಪನವರ ಪಾಂಡಿತ್ಯ ಹಾಗೂ ಸರಳ ಶೈಲಿಗೆ ನಾನು ಮಾರುಹೋದೆ.

ಅದೇ ತಿಂಗಳಿನಲ್ಲಿ ಶಿವರಾಮ ಕಾರಂತರ 'ಸ್ವಪ್ನದ ಹೊಳೆ'ಯನ್ನೂ ಓದಿದೆ. "ಈ ಕಾದಂಬರಿಯಲ್ಲಿ ಸ್ವಪ್ನಗಾರನ ಮನಸ್ಸೊಂದರ ಪರಿಚಯವನ್ನು ಮಾಡಿ ಕೊಟ್ಟಂತೆ, ಒಂದು ಪ್ರಗಲ್ಭ ಸಮಸ್ಯೆಯ ವಿರಾಟ ರೂಪವನ್ನು, ಅದರ ಹಿಂದು, ಮುಂದನ್ನೂ ಕಲಾವಿದನ ಕಣ್ಣಿನಿಂದ" ಕಾರಂತರು ತೋರಿಸಲು ಪ್ರಯತ್ನಿಸಿದ್ದಾರೆ. "ಗಂಡು ಹೆಣ್ಣಿನ ಮೋಹ, ಬಂಧನ, ಮರುಳು ಇವಾವುದನ್ನೂ ಅರ್ಥಮಾಡಿಕೊಳ್ಳು ವದು ಕಷ್ಟ; ನಾವು ಆಡುವಷ್ಟು ಸುಲಭದ ವಿಷಯ ಅದಲ್ಲ", ಇತ್ಯಾದಿ.

೧೯೭೮ ರ ನವೆಂಬರ್ ತಿಂಗಳಿನ ದಿನಾಂಕ ೬ ರಂದು ಧಾರವಾಡದಲ್ಲಿ ಜರುಗಿದ ಶ್ರೀಪಾದ ಶೆಟ್ಟಿಯವರ ಷಷ್ಟ್ಯಬ್ದಿ ಸಮಾರಂಭದಲ್ಲಿ ನಾನು ಪಾಲ್ಗೊಂಡೆ. ಗೋವೆಯ ಮುಖ್ಯ ಸಚಿವೆ ಶಶಿಕಲಾ ಕಾಕೋಡಕರ ಅಧ್ಯಕ್ಷತೆ ವಹಿಸಿದ್ದ ಈ ಸಮಾರಂಭದಲ್ಲಿ, ನಾನು, ಡಾ ಆರ್. ಬಿ ಪಾಟೀಲ, ಡಾ. ಅಂಕೋಲಾ ಮತ್ತು ವಸಂತ ಗಾಡಗೀಳ ಮಾತನಾಡಿದೆವು.

೧೯೮೦ ರ ಫೆಬ್ರುವರಿ ತಿಂಗಳ ದಿನಾಂಕ ೧೬ ರಂದು, ೮೨ ವರ್ಷಗಳ ನಂತರ ಖಗ್ರಾಸ ಸೂರ್ಯಗ್ರಹಣವು ಜರುಗಿತು. ಇನ್ನೊಮ್ಮೆ ಇಂಥ ಖಗ್ರಾಸ ಸೂರ್ಯ ಗ್ರಹಣವು ಇದೇ ಸ್ಥಳದಲ್ಲಿ ಆಗಬೇಕಾದರೆ ೩೬೦ ವರ್ಷಗಳು ಬೇಕು. ಸಂಜೆ ೨-೧೭ ಕ್ಕೆ ಪ್ರಾರಂಭವಾದದ್ದು ೪-೫೨ ಕ್ಕೆ ಬಿಟ್ಟಿತು. ಸಂಜೆ ೩ ಗಂಟೆ ೩೮ ನಿಮಿಷ ೩೩ ಸೆಕೆಂಡ್ಸ್‌ಗಳಿಗೆ ಪ್ರಾರಂಭವಾಗಿ ಎರಡು ನಿಮಿಷಗಳ ಕಾಲ ಖಗ್ರಾಸವಿತ್ತು. ಆಗ ಸೂರ್ಯ ಸಂಪೂರ್ಣವಾಗಿ ಚಂದ್ರನಿಂದ ಆವೃತನಾಗಿದ್ದು, ಸುತ್ತಲೂ ಕೇವಲ

ಜ್ವಾಲೆಯಷ್ಟೇ ಗೋಚರವಾಗುತ್ತಿತ್ತು. ಖಗ್ರಾಸ ಪ್ರಾರಂಭವಾಗುವ ಪೂರ್ವದಲ್ಲಿ ಮತ್ತು ನಂತರದಲ್ಲಿ ಒಂದು ನಿಮಿಷ ಭೂಮಿಯ ಮೇಲೆ ವಿಚಿತ್ರ ರೀತಿಯ ಅಲೆಗಳು ಕಾಣಿಸಿಕೊಂಡವು. ಮಧ್ಯಾಹ್ನದ ಕಾಲವು ಸಂಜೆ ೭ ಗಂಟೆಯ ಅನುಭವವನ್ನು ತಂದುಕೊಟ್ಟಿತು.

ಅದೇ ವರ್ಷ ಎಪ್ರಿಲ್ ೧೯ ರಂದು ಶಿರಸಿಯ ರೋಟರಿ ಕ್ಲಬ್‌ನಲ್ಲಿ ಯೋಗಾಸನಗಳನ್ನು ಕುರಿತು ಭಾಷಣ ಮಾಡಿ, ನಂತರ ಕೆಲವು ಆಸನಗಳನ್ನೂ ಪ್ರದರ್ಶಿಸಿದೆ. "ಯೋಗ" ಎನ್ನುವ ಪದ ಸಂಸ್ಕೃತ ಮೂಲಧಾತುವಾದ "ಯುಜ್" ಎನ್ನುವದರಿಂದ ಬಂದಿದ್ದು. ಬಂಧಿಸು, ಕೂಡಿಸು, ನೊಗಕ್ಕೆ ಕಟ್ಟು, ಚಿತ್ತವನ್ನು ನಿರ್ದೇಶಿಸಿ ಕೇಂದ್ರೀಕರಿಸು, ಉಪಯೋಗಿಸು ಮತ್ತು ಆಸಕ್ತಿವಹಿಸು ಎನ್ನುವ ಅರ್ಥಗಳನ್ನು ಕೊಡುತ್ತದೆ. ಮಹಾದೇವ ದೇಸಾಯಿಯವರು 'ಗಾಂಧೀಜಿಯವರ ದೃಷ್ಟಿಯಲ್ಲಿ ಗೀತೆ' ಎನ್ನುವ ಪುಸ್ತಕದ ಪ್ರಸ್ತಾವನೆಯಲ್ಲಿ, "ಶರೀರದ, ಮನಸ್ಸಿನ ಮತ್ತು ಆತ್ಮದ ಸರ್ವಶಕ್ತಿಗಳನ್ನೂ ಭಗವಂತನೊಡನೆ ಸಂಯೋಜಿಸುವದು ಯೋಗ. ಇದು ಚಿತ್ತ, ಮನಸ್ಸು, ಭಾವನೆಗಳು, ಇಚ್ಛೆ ಎನ್ನುವ ಯೋಗದ ಮೂಲ ಭಾವನೆಗಳನ್ನು ಶಿಸ್ತುಗೊಳಿಸುವದು ಮತ್ತು ಜೀವನದ ಎಲ್ಲ ಅಂಶಗಳನ್ನೂ ಸಮದೃಷ್ಟಿಯಿಂದ ನೋಡಲು ಸಹಾಯಕವಾಗುವ ಆತ್ಮದ ಒಂದು ನಿಲುವು" ಎಂದು ಹೇಳುತ್ತಾರೆ.

ಸಾಗರ ಅಕ್ಕಿ ಗಿರಣಿಯ ಗೋವಿಂದರಾವ್‌ರು ಕೊಟ್ಟ "ಶ್ರೀ ದಶಪ್ರಕರಣ ಗ್ರಂಥ"ವನ್ನು ಬುಧವಾರ ದಿನಾಂಕ ೭-೫-೧೯೮೦ ರಂದು ಓದಿ ಮುಗಿಸಿದೆ. ಶ್ರೀಹರಿ ನಾರಾಯಣ ಭಗವಂತನು ಶ್ರೀ ವ್ಯಾಸರೂಪದಿಂದ ಸರ್ವವೇದಾಂತಗಳನ್ನೂ ಗ್ರಹಣ ಮಾಡಿ, ಅವುಗಳಿಂದ ತಾತ್ಪರ್ಯಾರ್ಥವನ್ನು ತೆಗೆದು, ಆ ವೇದಾರ್ಥದಿಂದ ಯುಕ್ತವಾಗುವ ೧೮ ಪುರಾಣಗಳನ್ನು ರಚಿಸಿದವನೆಂಬುದು ಆ ಗ್ರಂಥದಿಂದ ತಿಳಿದು ಬರುತ್ತದೆ. ಮೇ ತಿಂಗಳಲ್ಲಿ ಎಸ್. ಸಿ. ನಂದಿಮಠರು ಬರೆದ 'ಕನ್ನಡ ನಾಡಿನ ಚರಿತ್ರೆ'ಯನ್ನು ಓದಿದೆ.

ಆದಿತ್ಯವಾರ ದಿನಾಂಕ ೧೪-೭-೧೯೮೦ ರಂದು ನಾನೇ ಸ್ಥಾಪಿಸಿದ Youth Sports Club ನ ಉದ್ಘಾಟನೆಯನ್ನು ಮಹಾರಾಷ್ಟ್ರ ಚಿಕ್ಕ ಉಳಿತಾಯ ಯೋಜನೆಯ ಮಾಜಿ ನಿರ್ದೇಶಕ, ಶ್ರೀ ಪಿ.ಕೆ. ಕರೂರವರು ಮಾಡಿದರು. ಅರ್ಬನ್ ಬ್ಯಾಂಕಿನ ಚೇರಮನ್ ಶ್ರೀ ಎಸ್. ಎ. ಕಾಸರಕೋಡರು ಸಭೆಯ ಅಧ್ಯಕ್ಷತೆ ವಹಿಸಿದ್ದರು. ನಾನೇ ರಚಿಸಿದ ಓಲಿಂಪಿಕ್ ಪದ್ಯ ಹಾಡಿ ಸ್ವಾಗತಿಸಿದೆ. ಮಾಧ್ಯಮಿಕ ಮತ್ತು ಕಾಲೇಜಿನ ವಿದ್ಯಾರ್ಥಿಗಳಿಗೆ ಕ್ರೀಡೆಗಳಲ್ಲಿ ಯೋಗ್ಯ ತರಬೇತಿ ನೀಡಿ, ವಿದ್ಯಾರ್ಥಿಗಳಲ್ಲಿ ಶಿಸ್ತು-ಸಂಯಮ ಬೆಳೆಸುವದೇ ಈ ಕ್ಲಬ್‌ನ ಮುಖ್ಯ ಉದ್ದೇಶ ಎಂದು ನಾನು ಹೇಳಿದೆ.





ಐ. ಸಿ. ಎಚ್. ಆರ್. (ಭಾರತೀಯ ಇತಿಹಾಸ ಅನುಸಂಧಾನ ಪರಿಷತ್ತು) ನ ಪಶ್ಚಿಮ ವಲಯದ ಸಮ್ಮೇಳನ ೧೯೮೧ ರ ಫೆಬ್ರುವರಿ ೨೫, ೨೬ ಮತ್ತು ೨೭ ರಂದು ಪಣಜಿಯಲ್ಲಿ ನಡೆಯಿತು. ನಾನು, Economic conditions of the Sringeri Dharma Samsthana from 15th to 19th century ಎಂಬ ವಿಷಯ ಕುರಿತು ಮಾತನಾಡಿದೆ. ಹೊಟೆಲ್ ಟೂರಿಸ್ಟ್‌ದಲ್ಲಿ ನಾನು ಉಳಿದೆ. ವೀಣಾ, ನೂತಾಳ ಮನೆಯಲ್ಲಿದ್ದಳು. ಈ ಸಮ್ಮೇಳನದಲ್ಲಿ ಪ್ರತಿನಿಧಿಗಳಿಗೆ ನೀಡಿದ ಆತಿಥ್ಯ ಭರ್ಜರಿಯಾಗಿತ್ತು.

ನನ್ನ ಅಕ್ಕನ ಹಿರಿಯ ಮಗ ಸುಬ್ಬರಾಯನ ಲಗ್ನ ತಟ್ಟೀಸರದ ಶ್ರೀದೇವಿಯೊಂದಿಗೆ ದಿನಾಂಕ ೧೭, ರವಿವಾರದಂದು ಜರುಗಿತು.

ಬೆಂಗಳೂರಿನಲ್ಲಿ ೧೯೮೧ ನವೆಂಬರ್ ತಿಂಗಳಿನ ೮, ೯ ಮತ್ತು ೧೦ರಂದು ನಡೆದ ಕರ್ನಾಟಕ ಹಿಸ್ಟೊರಿ ಕಾಂಗ್ರೆಸ್‌ದ ಅಧಿವೇಶನದಲ್ಲಿಯ ಒಂದು ಗೋಷ್ಠಿಗೆ ನನ್ನನ್ನು ಅಧ್ಯಕ್ಷನನ್ನಾಗಿ ಆಯ್ಕೆ ಮಾಡಲಾಯಿತು. 'ಶೃಂಗೇರಿ ಮತ್ತು ವಿಜಯನಗರ' ಎಂಬ ವಿಷಯ ಕುರಿತು ನಾನು ಉಪನ್ಯಾಸ ಮಾಡಿದೆ.

ಕರ್ನಾಟಕ ವಿಶ್ವವಿದ್ಯಾಲಯವು ಮಿರ್ಜಾನದಲ್ಲಿ ಏರ್ಪಡಿಸಿದ ಉಪನ್ಯಾಸ ಶಿಬಿರದಲ್ಲಿ ದಿನಾಂಕ ೧೮-೧೨-೧೯೮೧ ರಂದು ಬಿ. ಎಚ್. ಶ್ರೀಧರರು 'ಉತ್ತರ ಕನ್ನಡ ಜಿಲ್ಲೆಯ ಯಕ್ಷಗಾನ' ಮತ್ತು ನಾನು, 'ಉತ್ತರ ಕನ್ನಡ ಜಿಲ್ಲೆಯ ದೇವಾಲಯಗಳು' ಎಂಬ ವಿಷಯ ಕುರಿತು ಮಾತನಾಡಿದೆವು. ಅಲ್ಲಿಯ ಮಾಧ್ಯಮಿಕ ಶಾಲೆಯ ವಾರ್ಷಿಕ ಸ್ನೇಹಸಮ್ಮೇಳನಕ್ಕೆ ನಾವೇ ಅತಿಥಿಗಳಾಗಿದ್ದೆವು. ಅಲ್ಲಿಯ ಶ್ರೀ ಲಕ್ಷ್ಮೀನಾರಾಯಣ ದೇವಸ್ಥಾನದ ಅಟ್ಟದ ಮೇಲೆ ಉಳಿದಿದ್ದೆವು.

ನನ್ನ ಮೃಣಾಲಿನಿ ಅಕ್ಕನ ಮಗಳಾದ ವೀಣಾ ಮತ್ತು ಅಜ್ಜೀಬಳ ಎಂ. ಆರ್. ಹೆಗಡೆಯವರ ತೃತೀಯ ಪುತ್ರ ಸುಬ್ಬರಾಯ ಇವರ ವಿವಾಹವು ಶಿರಸಿಯ ತೋಟಿಗರ ಕಲ್ಯಾಣ ಮಂಟಪದಲ್ಲಿ ದಿನಾಂಕ ೧೦-೧-೧೯೮೩ ರಂದು ಬೆಳಿಗ್ಗೆ ೧೧-೧೯ ಕ್ಕೆ ಜರುಗಿತು. ಆ ಕಲ್ಯಾಣ ಮಂಟಪದಲ್ಲಿ ಜರುಗಿದ ಪ್ರಥಮ ವಿವಾಹ ಇವರದು.

ಮಂಗಳೂರಿನಲ್ಲಿ, ೧೯೮೩ ರ ಜನವರಿ ೨೮, ೨೯ ಮತ್ತು ೩೦ ರಂದು ನಡೆದ ಕರ್ನಾಟಕ ಹಿಸ್ಟೊರಿ ಕಾಂಗ್ರೆಸ್‌ನ ೩ ನೆಯ ಸಮ್ಮೇಳನದಲ್ಲಿ ನಾನು, 'Haider and Tipu's contacts with the Sringeri Matha' ಎಂಬ ವಿಷಯ ಕುರಿತು ಮಾತನಾಡಿದೆ. ಡಾ. ಜಿ. ಎಸ್. ದೀಕ್ಷಿತರು ಸಮ್ಮೇಳನಾಧ್ಯಕ್ಷರು ಮತ್ತು ಡಾ. ಜಿ. ಎಂ. ಮೊರೇಸ್‌ರು ಮುಖ್ಯ ಅತಿಥಿಗಳಾಗಿದ್ದರು. ಪ್ರತಿನಿಧಿಗಳ ಪರವಾಗಿ ಅಂತಿಮ ದಿನ ನಾಲ್ಕು ಮಾತುಗಳನ್ನಾಡಲು ನನ್ನನ್ನು ವಿನಂತಿಸಿಕೊಳ್ಳಲಾಯಿತು.

ಮಂಗಳೂರು ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ. ಶೇಖಅಲಿಯವರು ನನ್ನನ್ನು ಮತ್ತು ಬೆಂಗಳೂರು ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾದ ಡಾ. ವಿರೂಪಾಕ್ಷಪ್ಪ ಅವರನ್ನು ತಮ್ಮ ಮನೆಗೆ ಕರೆದೊಯ್ದು ಉಪಚರಿಸಿದರು.

೧೯೮೨ ರಲ್ಲಿ ನಾನು ಮಂಡಿಸಿದ 'A History of Sringeri' ಎಂಬ ಮಹಾ ಪ್ರಬಂಧವನ್ನು ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟಪಡಿಸಿತು. 'ಶೃಂಗೇರಿ ಧರ್ಮಸಂಸ್ಥಾನ' ಎಂಬ ಗ್ರಂಥವನ್ನು ೧೯೮೩ ರಲ್ಲಿ ಶೃಂಗೇರಿ ಮಠದವರು ಪ್ರಕಾಶಿಸಿದರು.

ನಾನು, ವೀಣಾ, ನೀಲೇಶ ೧೯–೧೦–೧೯೮೪ ರಂದು ಮುಂಬೈಗೆ ಹೋಗಿ, ನವೆಂಬರ್ ದಿನಾಂಕ ೩ ರಂದು ಶಿರಸಿ ತಲುಪಿದೆವು. ನಾವು ಮುಂಬೈಯಲ್ಲಿದ್ದಾಗ ಅಕ್ಟೋಬರ ದಿನಾಂಕ ೩೧ ಬುಧವಾರದಂದು ದೇಶದ ಪ್ರಧಾನಿ ಇಂದಿರಾ ಗಾಂಧಿ ಯವರನ್ನು ಅವರ ಅಂಗರಕ್ಷಕರೇ ಗುಂಡಿಟ್ಟು ಕೊಂದರು. ಗೋಪಾಲಭಾವ, ಮೃಣಾಲಿನಿ ಅಕ್ಕ, ಎಲ್ಲರೂ ಕೂಡಿ ಎಲಿಫಂಟಾ, ಗೇಟವೇ ಆಫ್ ಇಂಡಿಯಾ, ಮತ್ಸ್ಯಾಲಯ, ಮಲಬಾರ ಹಿಲ್, ಚೌಪಾಟಿ ಮೊದಲಾದ ಸ್ಥಳಗಳನ್ನು ನೋಡಿದೆವು. ಶೈಲೇಶನಿದ್ದ ಪವಾಯಿಗೆ ಹೋಗಿ ಕಂಪ್ಯೂಟರ್ ವಿಭಾಗವನ್ನೂ ನೋಡಿದೆವು.

ದಿನಾಂಕ ೧೨–೯–೧೯೮೬ ರಂದು ನಮ್ಮ ಕಾಲೇಜಿನ ಯುನಿಯನ್ ಮತ್ತು ಜಿಮ್‌ಖಾನಾ ಉದ್ಘಾಟನಾ ಸಮಾರಂಭಕ್ಕೆ ಮುಖ್ಯ ಅತಿಥಿಗಳಾಗಿ ಬೆಂಗಳೂರಿನ ಮಹಾರಾಣಿ ಕಾಲೇಜಿನ ಪ್ರಾಧ್ಯಾಪಕರಾದ ಅ. ರಾ. ಮಿತ್ರರು ಬಂದಿದ್ದರು. ಅವರು ಹಾಸ್ಯಕ್ಕೇ ಹೆಸರಾದವರು. ಕೈಲಾಸಂ, ರಾಜರತ್ನಂ ಮತ್ತು ದ. ರಾ. ಬೇಂದ್ರೆಯವರ ಕೃತಿಗಳಲ್ಲಿಯ ಕೆಲವು ಹಾಸ್ಯ ಸನ್ನಿವೇಶಗಳನ್ನು ಸುಂದರವಾಗಿ ನಿರೂಪಿಸಿದರು. ಕೆಲವು ಇಂತಿವೆ—

ಟಿ. ಪಿ. ಕೈಲಾಸಂ ಅವರ ಖೋಲಿಗೆ ರಾಜರತ್ನಂ ಮತ್ತು ಅವರ ಮಿತ್ರರು ಹೋದಾಗ, ಕೊಠಡಿಯ ದುರ್ವಾಸನೆಯಿಂದಾಗಿ ರಾಜರತ್ನಂ ಅವರ ಮಿತ್ರರು ಮೂಗು ಮುಚ್ಚಿಕೊಂಡರು. ಆಗ ಕೈಲಾಸಂ, "ನೋಡಿ, ಕಸ ಎಂದರೆ ಯಾವುದು ಗೊತ್ತಾ ? ಎಲ್ಲಿ ಯಾವುದು ಬೇಡವಾದ ವಸ್ತುವೋ ಅದು ಕಸ. ಬಹುಶಃ, ಇಲ್ಲಿ ನೀವು ಬೇಡವಾಗಿದ್ದೀರಿ".

ಹೊಟ್ಟೆ ಮುಂದೆ ಬಂದವನಿಗೆ ಮತ್ತೊಬ್ಬ ಹೇಳಿದ್ದ– "ನಿನಗೆ ಬಹಳ ದೊಡ್ಡ ಫ್ಯೂಚರ್ ಇದೆಯಪ್ಪಾ."

ಮಾರ್ಕ್ ಟ್ವೇನ್ ಒಮ್ಮೆ ಹೇಳಿದ್ದ– "ನಾನು ಕ್ಷೌರಿಕನೊಬ್ಬನನ್ನು ಬಿಟ್ಟರೆ ಇನ್ನ್ಯಾರಿಗೂ ತಲೆ ತಗ್ಗಿಸಲಿಲ್ಲ". ಆದರೆ ಒಬ್ಬ ಬಕ್ಕನೆತ್ತಿಯವ ಹೇಳಿದ್ದ– "ನಾನು ಕ್ಷೌರಿಕನಿಗೂ ತಲೆ ತಗ್ಗಿಸಿದವನಲ್ಲ".

ಶಾಲೆಯ ಹೆಡ್‌ಮಾಸ್ತರರೊಬ್ಬರು ಒಳ್ಳೆಯ ಶಿಕ್ಷಕರೊಬ್ಬರಿಗೆ ತೊಂದರೆ ಕೊಡುತ್ತಿದ್ದರು. ಆ ಬುದ್ಧಿವಂತ ಶಿಕ್ಷಕರು ಒಮ್ಮೆ ಹೆಡ್‌ಮಾಸ್ತರರು ತನ್ನ ತರಗತಿಯ ಹತ್ತಿರ ಬಂದಾಗ, ಒಬ್ಬ ದಡ್ಡ ಹುಡುಗನನ್ನು ಎಬ್ಬಿಸಿ, "ನಿನ್ನಂಥ ದಡ್ಡನಿಗೆ ಇಲ್ಲಿ ಸ್ಥಾನವಿಲ್ಲ. ಬೇರೆ ಶಿಕ್ಷಕರಲ್ಲೂ ನಿನಗೆ ಸ್ಥಾನವಿಲ್ಲ. ಹೀಗೆ ನೀನು ದಡ್ಡನಾದರೆ ನಿನ್ನನ್ನು ಹೆಡ್‌ಮಾಸ್ತರರ ಹತ್ತಿರವೇ ಕಳಿಸಬೇಕಾಗುತ್ತದೆ".

ಸರಕಾರಕ್ಕೆ ಅರ್ಜಿಗಳನ್ನು ಸಲ್ಲಿಸಿ, ಸೋತವನೊಬ್ಬ, ಕೊನೆಗೆ ತಾನೇ ಅರ್ಜಿಯೊಂದಿಗೆ ಆಫೀಸಿಗೆ ಹೋದಾಗ ಕಾರಕೂನ ಅವನಿಗೆ ಹೇಳಿದ್ದು- "ನಿಮ್ಮ ಅರ್ಜಿಗಳೆಲ್ಲ ಕಾಣೆಯಾಗಿವೆ. ಹೊಸ ಅರ್ಜಿಯನ್ನು ಟೇಬಲ್ ಮೇಲೆ ಇಡಿ. ಮೇಲೆ ಪಂಖ ತಿರುಗುತ್ತಿದೆ; ಅರ್ಜಿ ಹಾರಬಹುದು. ಆದ್ದರಿಂದ ಅದರ ಮೇಲೆ ಭಾರ ಹೇರಿ ಏನಾದರೂ ಇಡಿ."

ಶುಕ್ರವಾರ ದಿನಾಂಕ ೨೩-೧-೧೯೮೭ ರಂದು ನಮ್ಮ ಕಾಲೇಜಿನ ವಾರ್ಷಿಕ ಸ್ನೇಹಸಮ್ಮೇಳನಕ್ಕೆ ಮಣಿಪಾಲ ಇಂಡಸ್ಟ್ರೀಸನ ಚೇರಮನ್ ಶ್ರೀ ಕೆ. ಕೆ. ಪೈ ಅವರು ಆಗಮಿಸಿದ್ದರು. "ಯಾವ ಕೆಲಸದಲ್ಲಿ ಯಾರಿಗೆ ಇಷ್ಟವಿದೆಯೋ ಅದನ್ನೇ ಮಾಡಲು ಅಂಥವರಿಗೆ ಅವಕಾಶ ಕಲ್ಪಿಸಿಕೊಡಬೇಕೇ ಹೊರತು, ಇಷ್ಟವಿಲ್ಲದ್ದನ್ನಲ್ಲ. ದೈಹಿಕ ಶ್ರಮದ ಕೆಲಸಕ್ಕೂ, ಮಾನಸಿಕ ಶ್ರಮದ ಕೆಲಸಕ್ಕೂ ದೊರೆಯುವ ವೇತನದಲ್ಲಿ ಬಹಳ ಅಂತರವಿರಬಾರದು" ಎಂದು ಹೇಳಿದರು.

ಗುರುವಾರ ದಿನಾಂಕ ೨೬-೨-೧೯೮೭, ಮಹಾಶಿವರಾತ್ರಿಯಂದು ನಾನು, ವೀಣಾ, ನೀಲೇಶ, ಬಾಳೇತೋಟದ ಸೀತಾರಾಮ, ಶಾರದಾ, ಅವರ ಮಕ್ಕಳು, ಬೆಳ್ಳೆಕೆರೆಯ ಕಾಶಕ್ಕ, ಮಂಜುನಾಥ, ಹೊನ್ನೇಗದ್ದೆಯ ಪ್ರಕಾಶ ಮತ್ತು ಗಿರಿಜಾ ಜೀಪು ಮಾಡಿಕೊಂಡು ೪೦ ಕಿ ಮಿ. ದೂರದಲ್ಲಿಯ ಯಾಣಕ್ಕೆ ಹೋದೆವು. ಸುಣ್ಣದ ಬಂಡೆಗಲ್ಲುಗಳಿಂದ ನಿರ್ಮಿತವಾದ ಮತ್ತು ಮೇಲಿನಿಂದ ನೋಡಲು ಕಪ್ಪು ಶಿಲೆಯಂತೆ ತೋರುವ ಭೈರವೇಶ್ವರ ಮತ್ತು ಮೋಹಿನಿ ಶಿಖರಗಳು ಅತ್ಯದ್ಭುತವಾಗಿವೆ. ದುರ್ಗಮ ಅರಣ್ಯದಲ್ಲಿಯ ಈ ಶಿಖರಗಳು ಸೃಷ್ಟಿಯ ಅದ್ಭುತವೇ ಸರಿ!

ಸೋಮವಾರ ದಿನಾಂಕ ೯-೩-೧೯೮೭ ರಂದು ಸಂಜೆ ೮-೩೦ ಕ್ಕೆ ೮೬ ವರ್ಷದ ನನ್ನ ಕುಳುವೆ ದೊಡ್ಡಮ್ಮ (ಪಾರ್ವತಿ) ತೀರಿಕೊಂಡಳು. ನಾನು ಮತ್ತು ವೀಣಾ ದಹನ ಕಾರ್ಯಕ್ಕೆ ಹೋಗಿದ್ದೆವು. ನಾಲ್ಕು ತಿಂಗಳಕಾಲ ಅವಳು ಬಹಳೇ ತೊಂದರೆ ಪಟ್ಟಳು. ಅವಳು ನನಗೆ ನನ್ನ ಅಮ್ಮನಷ್ಟೇ ಪ್ರೀತಿಯವಳಾಗಿದ್ದಳು. ಬಹಳ ದುಃಖವಾಯಿತು.

೧೯೮೭ ರ ಜುಲೈ ತಿಂಗಳಿನ ೧೫, ೧೬ ಮತ್ತು ೧೭ ರಂದು ಬೆಂಗಳೂರಿನ ನೃಪತುಂಗ ರಸ್ತೆಯಲ್ಲಿರುವ ಯುವಕ ಕೇಂದ್ರದಲ್ಲಿ ಕರ್ನಾಟಕ ಇತಿಹಾಸ

ಅಕಾದೆಮಿಯ ಪ್ರಥಮ ಸಮ್ಮೇಳನ ಜರುಗಿತು. ಡಾ. ಜಿ. ಎಸ್. ದೀಕ್ಷಿತರು ಅಕಾದೆಮಿಯ ಪ್ರಥಮ ಅಧ್ಯಕ್ಷರು. ಡಾ. ವಿ. ಕೃ. ಗೋಕಾಕರು ಸಮ್ಮೇಳನವನ್ನು ಉದ್ಘಾಟಿಸಿದರು. ರಾಜಮಹಲ್ ಬಡಾವಣೆಯಲ್ಲಿಯ ಸ್ಯಾಂಕಿಟ್ಯಾಂಕಿಗೆ ಎದುರಾಗಿದ್ದ ಗೋಕಾಕರ ಮನೆಗೆ ಹೋಗಿ ನಾನು ಬರೆದ 'ಶೃಂಗೇರಿ ಧರ್ಮಸಂಸ್ಥಾನ' ಮತ್ತು 'ಉಪಾಖ್ಯಾನ' ಪುಸ್ತಕಗಳನ್ನು ಅರ್ಪಿಸಿ, ಮತ್ತೊಂದು ಕವನ ಸಂಗ್ರಹವನ್ನು ತಿದ್ದುಪಡಿ ಮಾಡಿಕೊಡುವಂತೆ ವಿನಂತಿಸಿಕೊಂಡೆ. ಧಾರವಾಡದ ಕರ್ನಾಟಕ ಕಾಲೇಜದಲ್ಲಿಯ ಹಳೆಯ ದಿನಗಳನ್ನು ನಾವಿಬ್ಬರೂ ನೆನಪಿಸಿಕೊಂಡೆವು. ಅವರೊಂದಿಗೆ ನನ್ನ ಭೆಟ್ಟಿ ಅದೇ ಕೊನೆಯದಾಯಿತು.

ಶನಿವಾರ ದಿನಾಂಕ ೬-೬-೧೯೮೭ ರಂದು ಮಧ್ಯಾಹ್ನ ೨-೩೦ ಕ್ಕೆ ಕುಳುವೆಯ ಶಾರದತ್ತಿಗೆ ೬೦ನೆಯ ವಯಸ್ಸಿನಲ್ಲಿ ಬಳಗಂಡಿಯವರ ಆಸ್ಪತ್ರೆಯಲ್ಲಿ ಹೃದಯಾಘಾತದಿಂದ ಮೃತಳಾದಳು. ಅತ್ತೆ ಸತ್ತು ೩ ತಿಂಗಳೊಳಗೆ ಸೊಸೆಯೂ ತೀರಿಕೊಂಡಳು.

ದಿನಾಂಕ ೧೨-೨-೧೯೮೮, ಮಧ್ಯಾಹ್ನ ೩ ಘಂಟೆಗೆ ವಿಧಾನಸೌಧದಲ್ಲಿ ನಾನು ಸಿದ್ಧಪಡಿಸಿದ 'Catalogue of the records of the Sringeri Matha' ಎಂಬ ಪುಸ್ತಕವನ್ನು ಕರ್ನಾಟಕ ರಾಜ್ಯ ವಸತಿ ಶಾಖೆ ಸಚಿವರಾದ ಮಹಮ್ಮದ ಮೊಯಿನುದ್ದೀನ ಬಿಡುಗಡೆ ಮಾಡಿದರು. ವಾರ್ತಾ, ಪ್ರವಾಸೋದ್ಯಮ ಮತ್ತು ಪತ್ರಾಗಾರ ಸಚಿವ ಎಂ. ಪಿ. ಪ್ರಕಾಶರು ಸಮಾರಂಭದ ಅಧ್ಯಕ್ಷರು. ನನ್ನನ್ನು ಗೌರವಿಸಲಾಯಿತು.

ಮಂಗಳವಾರ, ೮-೩-೧೯೮೮ ರ ಸಂಜೆ ನೆಲಮಾವ ಮಠದ ಶ್ರೀ ನಾರಾಯಣಾನಂದ ಭಾರತೀ ಸ್ವಾಮಿಗಳು ನಮ್ಮ ಮನೆಗೆ ಬಂದು ಅಲ್ಲಿಯ ಅನೇಕ ವಿದ್ಯಮಾನಗಳನ್ನು ಕುರಿತು ನಿವೇದಿಸಿದರು.

ಹೊನ್ನೇಗದ್ದೆ ಪ್ರಕಾಶನ ಲಗ್ನವು ಅಗಸಾಲ ಬೊಮ್ಮನಳ್ಳಿ ಗಣಪತಿ ಭಟ್ಟರ ಜ್ಯೇಷ್ಠ ಪುತ್ರಿ ಶಾರದಾಳೊಂದಿಗೆ ಶುಕ್ರವಾರ ರಾತ್ರಿ ೩-೪೫ ಕ್ಕೆ ಅಗಸಾಲದಲ್ಲಿ ನಡೆಯಿತು. ನಾನು ಮತ್ತು ವೀಣಾ ಹೋಗಿದ್ದೆವು.

ನಾನು, ವೀಣಾ, ನೀಲೇಶ, ಮೃಣಾಲಿನಿ, ಲಲಿತಾ, ಗಿರಿಜಾ, ಕಿರಣ ದಿನಾಂಕ ೧೫-೧೦-೧೯೮೮ ರಂದು ಔರಂಗಾಬಾದಿಗೆ ಪ್ರಯಾಣಿಸಿ ನರಸಿಂಹಭಾವನ ಮನೆಯಲ್ಲಿ ಉಳಿದು, ಅಜಂತಾ, ಎಲ್ಲೋರಾ ನೋಡಿಕೊಂಡು ದಿನಾಂಕ ೨೪ ರಂದು ಶಿರಸಿಗೆ ಮರಳಿದೆವು. ನರಸಿಂಹಭಾವ ಮತ್ತು ಜಾನಕಕ್ಕ ಒಳ್ಳೆಯ ಆತಿಥ್ಯನೀಡಿದರು.

೧೩-೪-೧೯೮೯ ರಂದು ನಾನು, ವೀಣಾ, ನೀಲೇಶ, ಗೋಪಾಲಭಾವ ಮೃಣಾಲಿನಿ, ರೇಖಾ, ಸುದೀಪ ನಾಗರಹೊಳೆ, ಮಡಕೇರಿ, ತಳಕಾವೇರಿ ಮತ್ತು ಊಟಿ ನೋಡಿಕೊಂಡು ೧೭ ರ ಸಂಜೆ ಬೆಂಗಳೂರು ತಲುಪಿದೆವು.

ದಿನಾಂಕ ೨೧-೯-೧೯೮೯ ಗುರುವಾರದಂದು ಶೃಂಗೇರಿಯ ಶ್ರೀ ಶ್ರೀ ಅಭಿನವ ವಿದ್ಯಾತೀರ್ಥ ಮಹಾಸ್ವಾಮಿಗಳು ಬ್ರಹ್ಮೀಭೂತರಾದರು. ಈ ಸಮಾಚಾರ ನನಗೆ ಸಿಡಿಲು ಬಡಿದಂತಾಯಿತು. ಅವರು ನನ್ನನ್ನು ಅತ್ಯಂತ ವಾತ್ಸಲ್ಯದಿಂದ ಕಂಡು ಶೃಂಗೇರಿ ಮಠದ ಚಾರಿತ್ರಿಕ ದಾಖಲೆಗಳ ಅಧ್ಯಯನ ಮಾಡಲು ಸಕಲರೀತಿಯಿಂದ ಪ್ರೋತ್ಸಾಹಿಸಿದ್ದರು.

ಮೈಸೂರಿನಲ್ಲಿ ದಿನಾಂಕ ೨೩-೯-೧೯೮೯ ರಂದು ನಡೆದ ರಾಷ್ಟ್ರಮಟ್ಟದ 'ಟಿಪ್ಪುಸುಲ್ತಾನ ವಿಚಾರ ಸಂಕಿರಣ'ದಲ್ಲಿ ನಾನು 'Tipusultan and the Sringeri Matha' ಎಂಬ ವಿಷಯ ಕುರಿತು ಮಾತನಾಡಿದೆ.

ರವಿವಾರ ದಿನಾಂಕ ೧೨-೧೧-೧೯೮೯ ರಂದು ಶೃಂಗೇರಿಗೆ ಹೋಗಿ, ಬುಧವಾರ ೧೫-೧೧-೧೯೮೯ ರಂದು ಶಿರಸಿಗೆ ಬಂದೆ. ಶ್ರೀ ಶ್ರೀ ಭಾರತೀ ತೀರ್ಥಸ್ವಾಮಿಗಳು ದಿನಾಂಕ ೧೪ ರಂದು ಬೆಳಿಗ್ಗೆ ೧೦-೪೫ ರ ಸುಮಾರಿಗೆ ಶ್ರೀ ಶಾರದಾಂಬೆಗೆ ನವರಾತ್ರಿಯಲ್ಲಿ ಹೊದೆಸಿದ ಕಂಬಿಪೀತಾಂಬರವನ್ನು ನನಗೆ ಹೊದೆಸಿ, ಮಂತ್ರಾಕ್ಷತೆ ನೀಡಿದರು. ಶೃಂಗೇರಿ ಮಠದ ಇತಿಹಾಸ ರಚಿಸಿದ ಬಗ್ಗೆ ನನಗೆ ಈ ಮರ್ಯಾದೆ ಎಂದು ಶ್ರೀಗಳವರು ನರಸಿಂಹವನದಲ್ಲಿ ಸೇರಿದ ಭಕ್ತರೆದುರು ನುಡಿದರು.

ಸೋಮವಾರ ದಿನಾಂಕ ೪-೧೨-೧೯೮೯ ರಂದು ಮಧ್ಯಾಹ್ನ ೧೨-೩೫ ಕ್ಕೆ ವಿನಯ ಮತ್ತು ಮಮತಾಳ ಲಗ್ನವು ಮಲ್ಲೇಶ್ವರದ ಕಾಶೀಮಠದಲ್ಲಿ ಜರುಗಿತು. ಹೊನ್ನೇಗದ್ದೆ ಭಾವ, ಕುಳುವೆ ಮಹಾಬಲೇಶ್ವರ ಅಣ್ಣಯ್ಯ, ಬಂಡೀಮನೆ ನಾಗವೇಣಕ್ಕ ಲಗ್ನಕ್ಕೆ ಬಂದಿದ್ದರು.

ಶುಕ್ರವಾರ, ದಿನಾಂಕ ೨೬-೨-೧೯೯೦ ರಂದು ಪ್ರೆಸಿಡೆಂಟ್ ೧೧ ಮತ್ತು ಕಾಲೇಜಿನ ನಡುವೆ ನಡೆದ ಕ್ರಿಕೆಟ್ ಪಂದ್ಯಾಟದ ಉದ್ಘಾಟನೆಯನ್ನು ಕಾಲೇಜಿನ ಮೈದಾನದಲ್ಲಿ ಮಾಡಿದೆ. ಅಂದೇ ಸಂಜೆ ಹುಳಗೋಳದ ಪೇರಲಕುಂದ್ರಿ ಶಾಲೆಯ ಬೆಳ್ಳಿಹಬ್ಬದ ಸಮಾರಂಭದಲ್ಲಿ 'ಚಿಗುರು' ಸ್ಮರಣ ಸಂಚಿಕೆಯನ್ನು ಬಿಡುಗಡೆ ಮಾಡಿದೆ. ದಿನಾಂಕ ೨೭ ರಂದು ನಡೆದ ನಮ್ಮ ಕಾಲೇಜಿನ ಸಂಸ್ಥಾಪಕರ ದಿನಾಚರಣೆಯ ಸಂದರ್ಭದಲ್ಲಿ ನಾನು ಸಂಪಾದಿಸಿದ 'ಶಿರಸಿ ತಾಲೂಕಾ ದರ್ಪಣ'ವನ್ನು ಧಾರವಾಡದ ಕೃಷಿ ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ. ಆರ್.ಕೆ. ಹೆಗಡೆಯವರು ಬಿಡುಗಡೆ ಮಾಡಿದರು.

೧೯೯೦ ರ ಫೆಬ್ರುವರಿ ತಿಂಗಳ ೧೦ ಮತ್ತು ೧೧ ರಂದು ಕಾರವಾರದಲ್ಲಿ ನಡೆದ ಇತಿಹಾಸ ಸಮ್ಮೇಳನದಲ್ಲಿ ನಾನು, 'Records of the Sringeri Matha relating to the Uttara Kannada District' ಎಂಬ ವಿಷಯ ಕುರಿತು

ಉಪನ್ಯಾಸ ಮಾಡಿದೆ. ಡಾ. ಎ. ಸುಂದರ ಮತ್ತು ಜಿಲ್ಲಾ ನ್ಯಾಯಾಧೀಶರಾದ ರಾಮಕೃಷ್ಣರು ಅತಿಥಿಗಳಾಗಿದ್ದರು. ಅತಿಥಿಗಳ ಪರಿಚಯುವನ್ನೂ ನಾನೇ ಮಾಡಿ ಕೊಟ್ಟೆ. ದೀಪಕ್ ಗಾಂವಕರರು ಈ ಸಮ್ಮೇಳನವನ್ನು ಸಂಘಟಿಸಿದ್ದರು.

ನೀಲೇಶನ ಉಪನಯನವನ್ನು ಬುಧವಾರ, ೩೦-೫-೧೯೯೦ ರಂದು ಬೆಳಗ್ಗೆ ೮ ಘಂಟೆಗೆ ಗಂಗಾಧರ ಭಟ್ಟರು ನೆರವೇರಿಸಿಕೊಟ್ಟರು.

ಬುಧವಾರ, ದಿನಾಂಕ ೬-೬-೧೯೯೦ ರಂದು ನಾನು ಮತ್ತು ವಿ. ಎಸ್. ಸೋಂದೆಯುವರು ಗೋವೆಯ ಪರ್ತಗಾಳಿ ಮಠಕ್ಕೆ ಹೋಗಿಬಂದೆವು. ಶ್ರೀ ವಿದ್ಯಾಧಿ ರಾಜತೀರ್ಥ ಒಡೆಯರು ನಮ್ಮನ್ನು ಆತ್ಮೀಯವಾಗಿ ಸ್ವಾಗತಿಸಿ, ಗೋಕರ್ಣ ಜೀವೋತ್ತಮ ಪರ್ತಗಾಳಿ ಮಠದಲ್ಲಿಯ ಪೋರ್ತುಗೀಜ, ಮರಾಠಿ, ಪಾರ್ಸಿ, ಕೊಂಕಣಿ ಮತ್ತು ಕನ್ನಡದಲ್ಲಿಯ ಚಾರಿತ್ರಿಕ ದಾಖಲೆಗಳನ್ನು ತೋರಿಸಿದರು. ಅವು ಗಳ ವ್ಯವಸ್ಥಿತ ಅಧ್ಯಯನ ಇನ್ನೂ ಆಗಬೇಕಾಗಿದೆ.

ಬುಧವಾರ, ದಿನಾಂಕ ೩೦-೧-೧೯೯೦ ರಂದು ನಾನು ಮತ್ತು ವಿ. ಎಸ್. ಸೋಂದೆಯುವರು ನಡಗೋಡಿಗೆ ಹೋಗಿ ಬಂದೆವು. ಅಲ್ಲಿ ಸ್ವರ್ಣವಲ್ಲೀ ಮಠದ ನಿಯೋಜಿತ ಶ್ರೀಗಳಾದ ವೇದಮೂರ್ತಿ ಪರಮೇಶ್ವರ ಶಿವರಾಮ ಭಟ್ಟರ ಬೀಳ್ಕೊಡುವ ಸಮಾರಂಭದಲ್ಲಿ ಮಾತನಾಡಿದೆವು. ಎಸ್. ಆರ್ ಹೆಗಡೆ, ಕಡವೆ ಮತ್ತು ಕೆರೆಕೈ ಉಮಾಕಾಂತ ಭಟ್ಟರೂ ಮಾತನಾಡಿದರು. ದಿನಾಂಕ ೨-೨-೧೯೯೧ ರಂದು ಕಂಚಿಕಾಮಕೋಟಿ ಪೀಠದ ಶ್ರೀ ಜಯೇಂದ್ರ ಸರಸ್ವತಿಗಳು ಪರಮೇಶ್ವರ ಭಟ್ಟರಿಗೆ ಸನ್ಯಾಸ ನೀಡಿ, ಪಟ್ಟಾಭಿಷೇಕ ಮಾಡಿ, ಶ್ರೀ ಗಂಗಾಧರೇಂದ್ರ ಸರಸ್ವತೀ ಎಂದು ನಾಮಕರಣ ಮಾಡಿದರು.

ಮಂಗಳವಾರ, ದಿನಾಂಕ ೨೧-೫-೧೯೯೧ ರ ರಾತ್ರಿ ಸುಮಾರು ೧೦-೧೦ ಕ್ಕೆ ಪ್ರಧಾನಿ ರಾಜೀವ ಗಾಂಧಿಯನ್ನು ತಮಿಳನಾಡಿನ ಪೆರಂಬದೂರನಲ್ಲಿ ಬಾಂಬ ಸ್ಫೋಟಿಸಿ ಕೊಲ್ಲಲಾಯಿತು.

೧೯೯೧ ರ ಅಕ್ಟೋಬರ್ ೨೩ ರಂದು ನಾನು, ವೀಣಾ, ನೀಲೇಶ, ಗೋಪಾಲ ಭಾವ ಮತ್ತು ಮೃಣಾಲಿನಿ ಮೈಸೂರು, ಸೋಮನಾಥಪುರ ನೋಡಿ ಬಂದೆವು. ಹೊಯ್ಸಳರ ಸೋಮನಾಥಪುರದ ಕೇಶವ ದೇವಾಲಯ ಕಲಾಪ್ರೌಢಿಮೆಗೆ ಹೆಸ ರಾಗಿದೆ. ದಿನಾಂಕ ೨೭ ರಂದು ನಾನು, ವೀಣಾ, ನೀಲೇಶ, ಭಾವ, ಮೃಣಾಲಿನಿ, ಸುಬ್ಬು, ವೀಣಾ, ಸಂದೀಪ, ವಿಜೇತಾ, ಸಂಧ್ಯಾ, ವಿಶ್ವನಾಥ, ಪುಟ್ಟಿ ತಮಿಳು ನಾಡಿನಲ್ಲಿಯ ಹೊಗೆನಕಲ್ ಫಾಲ್ಸ್‌ಗೆ ಹೋಗಿ ಬಂದೆವು.

ಶನಿವಾರ, ದಿನಾಂಕ ೨೨-೨-೧೯೯೨ ರಂದು ಸಂಜೆ ೬-೩೦ ರ ಸುಮಾರಿಗೆ, ಶಿಗ್ಗಾಂವದ ಹತ್ತಿರ ಸುದರ್ಶನನ ಕಾರು ಅಪಘಾತಕ್ಕೀಡಾಗಿ, ಅವನ ಹೆಂಡತಿ ಮಂಗಲಾ ಮತ್ತು ಅವಳ ಭಾವಮೈದುನ ಮೃತರಾದರು.

ಮಂಗಳವಾರ ದಿನಾಂಕ ೨೮-೪-೧೯೯೨ ರಂದು ನನ್ನ ಪೂಜ್ಯ ಗುರುಗಳಾದ ಡಾ. ವಿನಾಯಕ ಕೃಷ್ಣ ಗೋಕಾಕರು ಮುಂಬೈಯಲ್ಲಿಯ ತಮ್ಮ ಏಕೈಕ ಪುತ್ರ ಅನಿಲನ ಮನೆಯಲ್ಲಿ ಹೃದಯದ ತೊಂದರೆಯುಂಟಾಗಿ ಮೃತರಾದರು. ಅವರಿಗೆ ೮೨ ವರ್ಷಗಳಾಗಿದ್ದವು. ಅವರ ಮೇರು ಕೃತಿ 'ಭಾರತ ಸಿಂಧುರಶ್ಮಿ'ಗೆ ಇತ್ತೀಚೆಗೆ ಜ್ಞಾನಪೀಠ ಪ್ರಶಸ್ತಿ ದೊರಕಿತ್ತು.

ಅಜ್ಜೀಬಳದ ಸರೋಜಾಳೊಂದಿಗೆ ವೀಣಾಳ ತಮ್ಮ ಸುದರ್ಶನನ ಮರು ವಿವಾಹವು ರವಿವಾರ ದಿನಾಂಕ ೨೮ ೬-೧೯೯೨ ರಂದು ಶ್ರೀ ಮಾರಿಕಾಂಬಾ ಕಲ್ಯಾಣ ಮಂಟಪದಲ್ಲಿ ಅಭಿಜಿನ ಮುಹೂರ್ತದಲ್ಲಿ ಮಧ್ಯಾಹ್ನ ೧೨-೧೫ ಕ್ಕೆ ಜರುಗಿತು.

ಸೋಮವಾರ ದಿನಾಂಕ ೧೩-೧೨-೧೯೯೩ ರಂದು ಶಿರಸಿಯ ರುದ್ರಮಠದಲ್ಲಿ ನಾನು ಬರೆದ 'ಅನಿಸಿಕೆಗಳು' ಎಂಬ ಕವನ ಸಂಗ್ರಹವನ್ನು ಚಿತ್ರದುರ್ಗದ ಬೃಹನ್ಮಠದ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಶ್ರೀ ಶಿವಮೂರ್ತಿ ಮುರುಘ ರಾಜೇಂದ್ರ ಮಹಾಸ್ವಾಮಿಗಳು ಸಂಜೆ ಸುಮಾರು ೭ ಘಂಟೆಗೆ ಬಿಡುಗಡೆ ಮಾಡಿದರು ಆ ಸಂದರ್ಭದಲ್ಲಿ ವೀಣಾ ಮತ್ತು ಮೃಣಾಲಿನಿ ಉಪಸ್ಥಿತರಿದ್ದರು.

ಶುಕ್ರವಾರ ದಿನಾಂಕ ೨೭ ೫-೧೯೯೪ ರಂದು ಘೋಷಿಸಲಾದ ದ್ವಿತೀಯ ಪಿ. ಯು. ಸಿ. ವಿಜ್ಞಾನ ಪರೀಕ್ಷೆಯಲ್ಲಿ ನೀಲೇಶ ಸರಾಸರಿ ೯೨.೫% ಮಾಡಿ ರಾಜ್ಯಕ್ಕೆ ೧೮ ನೆಯ ಸ್ಥಾನ, ಜಿಲ್ಲೆಗೆ ಪ್ರಥಮ ಸ್ಥಾನ ಮತ್ತು ಕಾಲೇಜಿಗೆ ಹೊಸದಾಖಲೆ ಸೃಷ್ಟಿಸಿದ. ಮೈಸೂರಿನ ಎಸ್ ಜೆ. ಸಿ. ಇ. ಕಾಲೇಜಿನ ಕಂಪ್ಯೂಟರ್ ವಿಭಾಗದಲ್ಲಿ ಪ್ರವೇಶವೂ ದೊರೆಯಿತು. ಒಟ್ಟಿನಲ್ಲಿ ನಮ್ಮೆಲ್ಲರಿಗೆ ನೀಲೇಶ ಸಂತಸ ತಂದಿದ್ದ.

ದಿನಾಂಕ ೫-೧೧-೧೯೯೪ ರಂದು ನನ್ನ ಆತ್ಮೀಯ ಮಿತ್ರ, ವಾಣಿಜ್ಯ ಮಹಾವಿದ್ಯಾಲಯದ ಪ್ರಾಚಾರ್ಯ ಡಿ. ಸಿ. ಭಟ್ಟ ಹೃದಯಾಘಾತದಿಂದ ಮೃತನಾದ. ಆಗ ನಾನು ಬೆಂಗಳೂರಿನಲ್ಲಿದ್ದೆ. ನನಗೆ ಅತೀವ ದುಃಖವಾಗಿ ಕಣ್ಣಲ್ಲಿ ನೀರು ಬಂದಿತು. ವಿಧಿ ನಮ್ಮನ್ನು ಅಗಲಿಸಿತ್ತು.

ಆರು ಲೇಖನಗಳನ್ನೊಳಗೊಂಡ 'ಬನವಾಸಿ ಸಮಗ್ರ ಪರಿಚಯ' ಎಂಬ ಗ್ರಂಥವನ್ನು ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ. ಎಸ್. ರಾಮೇಗೌಡರು ಬನವಾಸಿಯಲ್ಲಿ ಮಂಗಳವಾರ ದಿನಾಂಕ ೨೪-೧-೧೯೯೫ ರಂದು

ಬಿಡುಗಡೆ ಮಾಡಿದರು. ಅದರಲ್ಲಿ ಬನವಾಸಿಯ ಚರಿತ್ರೆ ಕುರಿತು ನಾನು ಬರೆದ ಲೇಖನ ಮೊದಲನೆಯದು.

೧೯೯೫ ರ ನವೆಂಬರ್ ತಿಂಗಳಿನಲ್ಲಿ ನಾನು ಮತ್ತು ವೀಣಾ ಶಿವನ ಸಮುದ್ರ, ತಲಕಾಡು, ಬೆಂಗಳೂರು ಶಿವಾಲಯ, ಚನ್ನರಾಯಪಟ್ಟಣ, ಬೇಲೂರು, ಹಳೆಬೀಡು ಶ್ರವಣ ಬೆಳಗೊಳ, ಮೈಸೂರು ತಿರುಗಾಡಿ ಬಂದೆವು.

ಶುಕ್ರವಾರ ದಿನಾಂಕ ೧೫-೧೨-೧೯೯೫ ರಂದು ವಿಧಾನಸೌಧದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿಗಳಾದ ಎ. ಆರ್. ಚಂದ್ರಹಾಸ ಗುಪ್ತ ಅವರು ನಾನು ರಚಿಸಿದ, ಪತ್ರಾಗಾರ ಇಲಾಖೆಯು ಪ್ರಕಾಶಿಸಿದ 'A Catalogue of the records in the Sringeri Mutt, Vol. II' ಬಿಡುಗಡೆ ಮಾಡಿ, "ಡಾ. ಶಾಸ್ತ್ರಿಯವರ ಈ ಗ್ರಂಥ ಸಂಶೋಧನಾ ಕ್ಷೇತ್ರಕ್ಕೆ ಒಂದು ಅಪೂರ್ವ ಕಾಣಿಕೆ" ಎಂದು ಶ್ಲಾಘಿಸಿದರು. ಇಲಾಖೆಯ ನಿರ್ದೇಶಕರಾದ ಡಾ. ಆರ್. ಮುನಿಸ್ವಾಮಿಯವರು ನಾನು ಇಲಾಖೆಗೆ ಸಲ್ಲಿಸುತ್ತಿರುವ ಸೇವೆಯನ್ನು ಸ್ಮರಿಸಿಕೊಂಡರು. ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶೃಂಗೇರಿ ಮಠದ ಆಡಳಿತಾಧಿಕಾರಿಗಳಾದ ಶ್ರೀ ಎ. ಆರ್. ಗೌರೀಶಂಕರರು, "ಡಾ. ಶಾಸ್ತ್ರಿಯವರು ಶೃಂಗೇರಿ ಮಠದ ಸಹಸ್ರಾರು ದಾಖಲೆಗಳನ್ನು ಅಧ್ಯಯನ ಮಾಡಿ, ಅವುಗಳನ್ನು ವಸ್ತುನಿಷ್ಠವಾಗಿ ಬೆಳಕಿಗೆ ತರುವಲ್ಲಿ ಯಶಸ್ವಿಯಾಗಿದ್ದಾರೆ" ಎಂದು ಹೇಳಿದರು.

ಮಾಘ ಶುದ್ಧ ಪ್ರತಿಪದೆ, ರವಿವಾರ ದಿನಾಂಕ ೨೧-೧-೧೯೯೬ ರಂದು ಶಿರಸಿ ಮತ್ತು ಬನವಾಸಿಯ ವೈಶ್ಯ ಸಮಾಜದವರು ಶ್ರೀ ಮಾರಿಕಾಂಬಾ ದೇವಾಲಯದ ಆವರಣದಲ್ಲಿ ನನಗೆ ಶಾಲು ಹೊದಿಸಿ, ೧೦೫ ರೂಪಾಯಿ ಫಲ, ಪುಷ್ಪ, ಪ್ರಸಾದ ನೀಡಿ ಗೌರವಿಸಿದರು. ಮಾಘ ಶುದ್ಧ ಪ್ರತಿಪದೆ, ವೈಶ್ಯ ಸಮಾಜದವರಿಗೆ ಶೃಂಗೇರಿ ಜಗದ್ಗುರುಗಳು ಅನುಗ್ರಹಿಸಿದ ದಿನ. ನಾನು ಧರ್ಮ, ಅದ್ವೈತ ಮತ್ತು ಗಾಯತ್ರಿ ಜಪದ ಮಹತ್ವ ಕುರಿತು ಮಾತನಾಡಿದೆ.

೧೯೯೬ ರ ಜನವರಿ ೨೯ ರ ಬೆಳಿಗ್ಗೆ ನಾನು, ವೀಣಾ, ಭಾವ ಮತ್ತು ಮೃಣಾಲಿನಿ ಬೆಂಗಳೂರಿನಿಂದ ಹೊರಟು, ತ್ರಿಚಿ, ಶ್ರೀರಂಗಮ್, ಮಧುರೆ, ರಾಮೇಶ್ವರ ಮತ್ತು ಕೊಡೆಕೆನಾಲ್‌ಗೆ ಹೋಗಿ, ಫೆಬ್ರುವರಿ ೪ ರಂದು ಬೆಂಗಳೂರಿಗೆ ಬಂದೆವು. ಕಾರಿನಲ್ಲಿ ಪ್ರವಾಸ ಆರಾಮವಾಗಿತ್ತು. ಕೊಡೆಕೆನಾಲ್‌ನಿಂದ ಬೆಂಗಳೂರಿನ ವರೆಗೆ, ಸುಮಾರು ೫೫೦ ಕಿ.ಮೀಟರಗಿಂತಲೂ ಹೆಚ್ಚಿನ ಅಂತರವನ್ನು ಗೋಪಾಲ ಭಾವನೊಬ್ಬನೇ ಕಾರು ಓಡಿಸಿ ಕಾರು ನಡೆಸುವಲ್ಲಿ ತನ್ನ ಹೊಸ ವಿಕ್ರಮ ಸಾಧಿಸಿದ್ದ.

ಶನಿವಾರ, ದಿನಾಂಕ ೩೦-೩-೧೯೯೬ ರ ಸಂಜೆ ೪-೩೦ ಕ್ಕೆ ಸ್ವರ್ಣವಲ್ಲೀ ಮಠದ ಶ್ರೀ ಗಂಗಾಧರೇಂದ್ರ ಸರಸ್ವತೀ ಸ್ವಾಮಿಗಳು ನಮ್ಮ ಮನೆಗೆ ಬಂದು ನಮ್ಮೆಲ್ಲರನ್ನು ಆಶೀರ್ವದಿಸಿದರು.

ಧಾತೃ ಸಂವತ್ಸರದ ಶುಕ್ಲಪಕ್ಷದ ಷಷ್ಠಿ, ಶುಕ್ರವಾರ. ದಿನಾಂಕ ೧೮-೧೦-೯೬ ರಂದು (ಶಾರದಾ ಪೂಜಾರಂಭದ ದಿನ), ನನ್ನ ಹಿರಿಯ ಮಗ ನವೀನನು ಹುಬ್ಬಳ್ಳಿಯ ಪ್ರಸಿದ್ಧ ನೇತ್ರ ವೈದ್ಯ ಎಂ. ಎಂ. ಜೋಶಿಯವರ ಆಸ್ಪತ್ರೆಯ ಸಮುಚ್ಚಯದಲ್ಲಿ ಕ್ಯಾಂಟೀನ್ ಪ್ರಾರಂಭಿಸಿದನು. ಡಾ ಜೋಶಿಯವರ ಅಕ್ಕ ಮತ್ತು ಭಾವ ಗಂಡ-ಮಾಲಿಯವರು ಮತ್ತು ಶಿರಸಿಯ ಡಾ. ಸಂತೋಷ ನಾಡಗೀರ ಮತ್ತು ಅವರ ಪತ್ನಿ ವಿಜಯಲಕ್ಷ್ಮಿಯವರು ಈ ವಿಷಯದಲ್ಲಿ ಉಪಕಾರ ಮಾಡಿದರು.

ನಾನು, ವೀಣಾ, ಬೆಂಗಳೂರು ಭಾವ, ಮೃಣಾಲಿನಿ, ಸಿಶಾಂತ, ವೀಣಾ, ಸುದೀಪ ಮತ್ತು ನೇಹಾ, ಬಾಡ, ಇಡಗುಂಜಿ, ಕೊಲ್ಲೂರುಗಳಿಗೆ ಹೋಗಿ ಬಂದೆವು. ೧೯೯೬ ರ ಡಿಸೆಂಬರ್ ತಿಂಗಳ ೨೮, ೨೯ ರಂದು ಬನವಾಸಿಯಲ್ಲಿ ನಡೆದ ಕದಂಬೋತ್ಸವಕ್ಕೆ ಹೋಗಿದ್ದೆವು.

೧೯೯೭ ರ ಜನವರಿ ೧೬, ೧೭ ಮತ್ತು ೧೮ ರಂದು ಮಾರಿಕಾಂಬಾ ಪದವಿ ಪೂರ್ವ ಮಹಾವಿದ್ಯಾಲಯದಲ್ಲಿ ರಾಜ್ಯದ ಇತಿಹಾಸ ಪ್ರಾಧ್ಯಾಪಕರ ಕಾರ್ಯಾಗಾರಕ್ಕೆ ನನ್ನನ್ನು 'Resource Person' ಎಂದು ಪಿ.ಯು.ಸಿ. ಮಂಡಲಿಯಿಂದ ನೇಮಿಸಲಾಯಿತು. ಕರ್ನಾಟಕ ಚರಿತ್ರೆಯ ಆಕರ ಸಾಮಗ್ರಿಗಳು, ಟಿಪ್ಪುಸುಲ್ತಾನನ ದಾಖಲೆಗಳು, ಹಿಸ್ಟೋರಿಯೊಗ್ರಾಫಿ ಮುಂತಾದ ವಿಷಯಗಳನ್ನು ಕಲಿಸಿದೆ. ಗುಡ್ನಾಪುರ ಮತ್ತು ಬನವಾಸಿಗೆ ಶಿಕ್ಷಕರನ್ನು ಅಧ್ಯಯನಕ್ಕಾಗಿ ಕರೆದೊಯ್ದೆ.

ಸಿದ್ದಾಪುರದಲ್ಲಿ ಶಂಕರ ಮಠವನ್ನು ಉದ್ಘಾಟಿಸಿದ ಶೃಂಗೇರಿಯ ಶ್ರೀ ಭಾರತೀ ತೀರ್ಥಸ್ವಾಮಿಗಳನ್ನು ನಾನು ಮತ್ತು ಕಾಗೇರಿ ಜಿ.ವಿ. ಜೋಶಿಯವರು ಸ್ವರ್ಣವಲ್ಲೀ ಮಠಕ್ಕೆ ದಿನಾಂಕ ೨೧-೨-೧೯೯೭ ರಂದು ಕರೆತಂದೆವು.

ಶೃಂಗೇರಿ ಜಗದ್ಗುರುಗಳ ಉಪಸ್ಥಿತಿಯಲ್ಲಿ, ತುಮಕೂರಿನ ಹೆಬ್ಬೂರ ಮಠದ ಸ್ವಾಮಿಗಳು ಸದ್ಯೋಜಾತರಿಗೆ ಸನ್ಯಾಸ ನೀಡಿ, ಶ್ರೀ ಸದ್ಯೋಜಾತ ಶಂಕರಾಶ್ರಮ ಎಂದು ಹೆಸರಿಸಿ ಪಟ್ಟಾಭಿಷೇಕ ನೆರವೇರಿಸಿದರು. ಶ್ರೀ ಆರ್. ಎನ್. ದೀವಗಿಯವರು ಚಿತ್ರಾಪುರ ಮಠಕ್ಕೆ ನನ್ನನ್ನು ಮತ್ತು ವೀಣಾಳನ್ನು ಕರೆದೊಯ್ದಿದ್ದರು. ಅಂದೇ (೨೭-೨ ೧೯೯೭) ಮಧ್ಯಾಹ್ನ ಚಿತ್ರಾಪುರ ಮಠದಲ್ಲಿ ನನ್ನನ್ನು ಸನ್ಮಾನಿಸಲಾಯಿತು. ಉದ್ಯಮಿ ಆರ್.ಎನ್. ದೀವಗಿಯವರು ನಮ್ಮ ಕುಟುಂಬಕ್ಕೆ ಅತ್ಯಂತ ಆತ್ಮೀಯರು. ಅವರೊಬ್ಬ ಶಿಸ್ತಿನ, ಸಜ್ಜನ ವ್ಯಕ್ತಿ.

ದಿ. ೭-೬-೧೯೯೭ ರಂದು ಸಂಜೆ ೮-೩೦ ಕ್ಕೆ ಕುಳುವೆಯ ನನ್ನ ದೊಡ್ಡಮ್ಮನ ಮಗ, ಮಹಾಬಲೇಶ್ವರ ಭಟ್ಟ (ವಯಸ್ಸು ೭೪) ಗಂಟಲನಾಳದ ಕ್ಯಾನ್ಸರನಿಂದ ಸುಮಾರು ಎರಡು ತಿಂಗಳು ನರಳಿ, ಮೃತನಾದ. ನಾನು ಕುಳುವೆಗೆ ಅಂತ್ಯಕ್ರಿಯೆ ಗಾಗಿ ಹೋಗಿದ್ದೆ.

ಬುಧವಾರ, ದಿನಾಂಕ ೨೫-೬-೧೯೯೭ ರಂದು ಮಧ್ಯಾಹ್ನ ೪ ಗಂಟೆಗೆ ವಿಧಾನ ಸೌಧದಲ್ಲಿ, ನಾನು ಬರೆದ 'ಶ್ರೀ ಸೋಂದಾಸ್ವರ್ಣವಲ್ಲೀ ಮಹಾಸಂಸ್ಥಾನದ ಐತಿಹಾಸಿಕ ದಾಖಲೆಗಳು' ಎಂಬ ಗ್ರಂಥವನ್ನು ಮೈಸೂರು ವಿಶ್ವವಿದ್ಯಾಲಯದ ಮಾಜಿ ಕುಲಪತಿ ಡಾ. ದೇ. ಜವರೇಗೌಡರು ಬಿಡುಗಡೆ ಮಾಡಿದರು. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆ, ಶ್ರೀಮತಿ ಲೀಲಾದೇವಿ ಆರ್. ಪ್ರಸಾದ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿ ಚಂದ್ರಹಾಸ ಗುಪ್ತ, ನಿರ್ದೇಶಕ ಸಿ.ಎಚ್. ದೇವರಾಜ, ಶಾಸಕಿ ಪ್ರಮಿಳಾ ನೇಸರ್ಗಿ, ಇಲಾಖೆಯ ಸಿಬ್ಬಂದಿಗಳು, ಬೆಂಗಳೂರು ಭಾವ-ಅಕ್ಕ, ಶಿರಸಿಯ ಪ್ರಾ. ಕೆ. ವಿ. ಭಟ್ಟ ಮತ್ತು ಕಾಗೇರಿ ಜಿ. ವಿ. ಜೋಶಿಯವರು ಸಮಾರಂಭದಲ್ಲಿ ಉಪಸ್ಥಿತರಿದ್ದರು.

೧೯೯೭ ರ ಅಕ್ಟೋಬರ್ ೨೫, ೨೬ ಮತ್ತು ೨೭ ರಂದು ಕರ್ನಾಟಕ ಇತಿಹಾಸ ಅಕಾಡೆಮಿಯ ಹನ್ನೊಂದನೆಯ ಸಮ್ಮೇಳನ ಶಿರಸಿಯ ಕಡವೆ (ತೋಟಿಗರ) ಕಲ್ಯಾಣ ಮಂಟಪದಲ್ಲಿ ಸ್ವರ್ಣವಲ್ಲೀ ಮಠದ ಆಶ್ರಯದಲ್ಲಿ ಜರುಗಿತು. ಜಿ. ವಿ. ಜೋಶಿ ಯವರು ಕಾರ್ಯಕಾರಿ ಸಮಿತಿಯ ಅಧ್ಯಕ್ಷರಾಗಿ ಮತ್ತು ನಾನು ಪ್ರಧಾನ ಕಾರ್ಯ ದರ್ಶಿಯಾಗಿ ಕಾರ್ಯ ನಿರ್ವಹಿಸಿದೆವು. ಸುಮಾರು ೧೫೦ ಪ್ರತಿನಿಧಿಗಳು ರಾಜ್ಯದ ನಾನಾ ಭಾಗಗಳಿಂದ ಆಗಮಿಸಿದ್ದರು. ಪುಣೆ, ಮುಂಬೈಗಳಿಂದಲೂ ಪ್ರತಿನಿಧಿಗಳು ಬಂದಿದ್ದರು. ದಿನಾಂಕ ೨೫ ರಂದು ನಡೆದ ಉದ್ಘಾಟನಾ ಸಮಾರಂಭಕ್ಕೆ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ ಬಂದಿದ್ದರು. ಉತ್ತರ ಕನ್ನಡ ಜಿಲ್ಲೆಯ ಇತಿಹಾಸ ವನ್ನು ನಾನು ಸಭೆಗೆ ಪರಿಚಯಿಸಿದೆ. ಡಾ. ಜಿ. ಎಸ್. ದೀಕ್ಷಿತರು (ಅಕಾಡೆಮಿಯ (ಆಜೀವ ಗೌರವಾಧ್ಯಕ್ಷರು) ನಾನು ರಚಿಸಿದ 'ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನ' ಎಂಬ ಗ್ರಂಥವನ್ನು ಬಿಡುಗಡೆ ಮಾಡಿದರು. ದಿನಾಂಕ ೨೬ ರಂದು ಸ್ವರ್ಣವಲ್ಲಿಯಲ್ಲಿ ಗೋಷ್ಠಿಗಳು ಜರುಗಿದವು. ಶ್ರೀ ಗಂಗಾಧರೇಂದ್ರ ಸರಸ್ವತೀ ಸ್ವಾಮಿಗಳು ಅಂದು ನನ್ನನ್ನು ಸನ್ಮಾನಿಸಿದರು. ಗೋವೆಯ ಬಾಂದೋರಾದಲ್ಲಿರುವ ಸೋದೆಯ ರಾಜ ಕುಮಾರರರೂ ಆ ಸಂದರ್ಭದಲ್ಲಿ ಉಪಸ್ಥಿತರಿದ್ದರು. ಅವರನ್ನೂ ಗೌರವಿಸಲಾಯಿತು. ಸ್ವರ್ಣವಲ್ಲಿಯಲ್ಲಿ ನಡೆದ ಗೋಷ್ಠಿಯಲ್ಲಿ 'ಸ್ವರ್ಣವಲ್ಲೀ ಮಠದೊಂದಿಗೆ ಸೋದೆಯ ಮಧುಲಿಂಗ ನಾಯಕರ ಸಂಬಂಧ' ಮತ್ತು 'ಉತ್ತರ ಕನ್ನಡ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ' ಎಂಬ ನನ್ನ ಎರಡು ಲೇಖನಗಳನ್ನು ಕ್ರಮವಾಗಿ, 'ಪತ್ರಕರ್ತ' ಮತ್ತು 'ಲೋಕಧ್ವನಿ' ಪತ್ರಿಕೆಗಳಲ್ಲಿ, ಸಮ್ಮೇಳನದ ಸಂದರ್ಭದಲ್ಲಿ ಪ್ರಕಟಿಸಲಾಯಿತು.

ಬಂದ ಪ್ರತಿನಿಧಿಗಳೆಲ್ಲ ಸಮ್ಮೇಳನವನ್ನು ಅಚ್ಚುಕಟ್ಟಾಗಿ ನಡೆಸಿದ್ದಕ್ಕೆ ತಮಗಾದ ಸಂತೋಷವನ್ನು ವ್ಯಕ್ತಪಡಿಸಿದರು. ಸಮ್ಮೇಳನ ಯಶಸ್ವಿಯಾಗಲು ಶ್ರೀ ಶ್ರೀ ಗಂಗಾ ಧರೇಂದ್ರ ಸರಸ್ವತೀ ಸ್ವಾಮಿಗಳೇ ಬಹುಮಟ್ಟಿಗೆ ಕಾರಣ.

ನಾನು, ವೀಣಾ, ಸುಬ್ಬು, ವೀಣಾ, ಭಾವ, ಮೃಣಾಲಿನಿ, ನಿಶಾಂತ, ಸುದೀಪ ಮತ್ತು ನೇಹಾ ೧೯೯೭ ರ ಡಿಸೆಂಬರ್ ೨೫ ರಂದು ಕಾಂಚಿಗೆ ಹೋಗಿ, ಸ್ವರ್ಣವಲ್ಲೀ ಶ್ರೀಗಳವರ ದರ್ಶನ ಪಡೆದು, ಮದ್ರಾಸಿಗೆ ತೆರಳಿ, ೨೮ ರಂದು ಸಂಜೆ ಬೆಂಗಳೂರು ತಲುಪಿದೆವು. ಮದ್ರಾಸಿನಲ್ಲಿ ಅಡ್ಯಾರ, ಅಣ್ಣಾ ವಿಶ್ವವಿದ್ಯಾಲಯ, ನ್ಯಾಶನಲ್ ಪಾರ್ಕ್, ಚೆಪಾಕದಲ್ಲಿಯ ವಿಶ್ವವಿದ್ಯಾಲಯದ ಗ್ರಂಥಾಲಯ, ಎಗ್‌ಮೋರ್ ರೇಲ್ವೆ ಸ್ಟೇಷನ್, ತಮಿಳುನಾಡಿನ ಪತ್ರಾಗಾರ, ಮರೀನಾ ಬೀಚ್, ಮಹಾಬಲಿಪುರಮ್, ಎಲ್ಲ ನೋಡಿ ಬಂದೆವು. ಬರುವಾಗ ದಾರಿಯಲ್ಲಿ ಪೆರಂಬದೂರಿನಲ್ಲಿಯ ರಾಜೀವ ಗಾಂಧಿ ಸ್ಮಾರಕವನ್ನು ನೋಡಿದೆವು.

ಸ್ಥಳೀಯ ಕಾಲೇಜಿನಲ್ಲಿ ೩೪ ವರ್ಷಗಳಕಾಲ ಉಪನ್ಯಾಸಕನಾಗಿ ಕೆಲಸಮಾಡಿ ನಿವೃತ್ತನಾಗುವವನಿದ್ದುದರಿಂದ ೧೯೯೮ ರ ಜನವರಿ ತಿಂಗಳ ೧೩, ಮಂಗಳವಾರ ದಂದು ಶಿಕ್ಷಕ–ಶಿಕ್ಷಕೇತರ ಸಿಬ್ಬಂದಿಯವರಿಗೆ ಅಲ್ಪೋಪಹಾರ ನೀಡಿದೆ. ಮಧ್ಯಾಹ್ನ ೪–೧೫ ಕ್ಕೆ ಸಭಾಭವನದಲ್ಲಿ ಅವರನ್ನುದ್ದೇಶಿಸಿ 'ಇತಿಹಾಸದಲ್ಲಿ ಸಂಶೋಧನೆ' ಎಂಬ ವಿಷಯ ಕುರಿತು ಸುಮಾರು ಒಂದೂವರೆ ಘಂಟೆ ಮಾತನಾಡಿದೆ. ನಾನು ಕೈಕೊಂಡ ಸಂಶೋಧನೆಯ ಮಾರ್ಗವನ್ನು ಪರಿಚಯಿಸಿದೆ. ಇಂಥ ಉಪನ್ಯಾಸಗಳ ಕಾರ್ಯ ಕ್ರಮಗಳನ್ನು ಮುಂದೂ ನಡೆಸಲಾಗುವದೆಂದು ನಾನು ಭಾವಿಸಿರುವೆ.

೧೯೯೮ ರ ಜನವರಿ ೨೬ ರಂದು ಬೆಳಿಗ್ಗೆ ೮-೧೫ ಕ್ಕೆ ಧ್ವಜಾರೋಹಣ ಮಾಡಿ, ಪ್ರಜಾಪ್ರಭುತ್ವದ ಬಗ್ಗೆ ಎಲ್ಲರನ್ನುದ್ದೇಶಿಸಿ ಮಾತನಾಡಿದೆ. "ಇಂದು ಪ್ರಜಾಪ್ರತಿ ನಿಧಿಗಳ, ಪ್ರಜಾಪ್ರತಿನಿಧಿಗಳಿಂದ ಮತ್ತು ಪ್ರಜಾಪ್ರತಿನಿಧಿಗಳಿಗಾಗಿ ಸರಕಾರ ಇದೆಯೆ ವಿನಃ, ಪ್ರಜೆಗಳ, ಪ್ರಜೆಗಳಿಂದ ಮತ್ತು ಪ್ರಜಾಹಿತಕ್ಕಾಗಿ ಇರುವ ಸರಕಾರವಿಲ್ಲ" ಎಂದು ನಾನು ಸ್ಪಷ್ಟವಾಗಿ ನುಡಿದೆ. ಕಾಲೇಜಿನಲ್ಲಿ ಹಿತಕರವಾದ ವಾತಾವರಣ ನಿರ್ಮಿಸುವಂತೆ ಕಳಕಳಿಯಿಂದ ವಿನಂತಿಸಿಕೊಂಡೆ.

ರಮಝಾನ ಹಬ್ಬದ (ಈದುಲ್ ಫಿತರ) ನಿಮಿತ್ತ ಜಮಾತೆ ಇಸ್ಲಾಮಿ ಹಿಂದ್ ಅವರು ಕೇಶವೇನ್ ಸ್ಮಾರಕ ಭವನದಲ್ಲಿ ಈದ ಮಿಲನ ಕಾರ್ಯಕ್ರಮವನ್ನು ದಿನಾಂಕ ೨-೨-೧೯೯೮ ರಂದು ಏರ್ಪಡಿಸಿದ್ದರು. ಸಮಾರಂಭಕ್ಕೆ ಜನಾಬ ಸೈಯದ ಅಬ್ದುಲ್ ಹಮೀದ ಸಾಹೇಬರು ಅಧ್ಯಕ್ಷ; ನಾನು ಮತ್ತು ಜನಾಬ ಲಾಲಹುಸೇನರು ಮುಖ್ಯ ಅತಿಥಿಗಳು. ಹಿಂದೂ ಮತ್ತು ಮುಸಲ್ಮಾನ ಮತಧರ್ಮಗಳಲ್ಲಿಯ ಸಾಮ್ಯತತ್ವ

ಗಳನ್ನು ಹೇಳಿ, ಕೂಡಿ ಬದುಕಲು ಕಲಿತರೆ ಮಾತ್ರ ದೇಶದಲ್ಲಿ ಸುಖ, ಶಾಂತಿ, ಸಮೃದ್ಧಿ ಇರುಲು ಸಾಧ್ಯವೆಂಬುದನ್ನು ಒತ್ತಿ ಹೇಳಿದೆ.

ನನ್ನ ಮಡದಿ ವೀಣಾ ಒಳ್ಳೆಯ ರುಚಿ-ಶುಚಿ ಅಡಿಗೆ ಮಾಡಿ ಬಡಿಸುತ್ತಾಳೆ. ನನಗೆ ಇಷ್ಟವಾದ ಮತ್ತು ಆರೋಗ್ಯಕ್ಕೆ ಹಿತವಾದ ಜೋಳದ ರೊಟ್ಟಿ, ಪಲ್ಯ ಮಾಡುತ್ತಾಳೆ. ಪ್ರತಿವರ್ಷ ನಾವು ನನ್ನ ಬೆಂಗಳೂರು ಅಕ್ಕ ಮತ್ತು ಭಾವನೊಂದಿಗೆ ಒಂದಿಲ್ಲೊಂದು ಸ್ಥಳಕ್ಕೆ ಅವರ ಕಾರಿನಲ್ಲಿ ಪ್ರವಾಸ ಮಾಡುತ್ತೇವೆ; ಸಂತೋಷ ಪಡುತ್ತೇವೆ. ಹಾಗೆಂದ ಮಾತ್ರಕ್ಕೆ ನಮ್ಮದು ಬಹು ಅನ್ಯೋನ್ಯ ದಾಂಪತ್ಯ ಎಂದು ತಿಳಿಯಬೇಡಿ. "ಎಲ್ಲರ ಮನೆ ದೋಸೆಗೂ ತೂತು" ಎಂಬಂತೆ, ನಮ್ಮ ಮನೆಯ ಸಂಸಾರದಲ್ಲಿಯೂ ಸಾಕಷ್ಟು ಏರುತಗ್ಗುಗಳಿವೆ. ನಮ್ಮ ರಥ ಮಾತ್ರ ಮುಂದೆ ಸಾಗಿದೆ.

ನಿವೃತ್ತಿ ಕುರಿತು, ಮನೆತನದ ಹಿನ್ನೆಲೆ ಮತ್ತು ಜನನ, ಶಿರಸಿಯಲ್ಲಿ ಬಾಲ್ಯದ ನೆನಪುಗಳು, ಧಾರವಾಡದ ಆದರ್ಶ ವಿದ್ಯಾರ್ಥಿ ನಿಲಯದಲ್ಲಿ, ಕೆ. ಇ. ಬೋರ್ಡ್‌ನ ಪ್ರಾಥಮಿಕ ಶಾಲೆಯಲ್ಲಿ, ಕೆ.ಇ. ಬೋರ್ಡ್‌ನ ಮಾಧ್ಯಮಿಕ ಶಾಲೆಯಲ್ಲಿ, ಕರ್ನಾಟಕ ಕಾಲೇಜಿನಲ್ಲಿಯ ಆ ನಾಲ್ಕು ವರ್ಷಗಳು, ಸ್ನಾತಕೋತ್ತರ ವಿಭಾಗದಲ್ಲಿ, ಬೀದರದಲ್ಲಿ ಒಂದು ಶೈಕ್ಷಣಿಕ ವರ್ಷ, ಶಿರಸಿಯಲ್ಲಿ ದೀರ್ಘಸೇವೆ, ಎಂಬ ಉಪಶೀರ್ಷಿಕೆಗಳ ಅಡಿಯಲ್ಲಿ ನಾನು ೫೮ ವರ್ಷಗಳ ಕಾಲ ನಡೆದು ಬಂದ ದಾರಿಯನ್ನು ಈ ಆತ್ಮಚರಿತ್ರೆ ಯಲ್ಲಿ ಗುರುತಿಸಲು ಪ್ರಯತ್ನಿಸಿದ್ದೇನೆ. ಮಾವ ದತ್ತಾತ್ರೇಯ ಭಟ್ಟರು, ಅತ್ತೆ ಭಾಗೀರಥಿ ಈಗ ಶಿರಸಿಯಲ್ಲಿ ವಾಸಿಸುತ್ತಿದ್ದಾರೆ. ಸ್ವಲ್ಪ ಕಾಲದ ನಂತರ ಬೆಂಗಳೂರಿನ ತಮ್ಮ ಮಗ ಸುದರ್ಶನನ ಮನೆಗೆ ಹೋಗುವವರಿದ್ದಾರೆ. ಹೊನ್ನೇಗದ್ದೆಯ ನನ್ನ ಸೀತಕ್ಕ ಈಗಿಲ್ಲ. ಆದರೆ ೮೦ ವರ್ಷದ ಭಾವ ಗೋಪಾಲಕೃಷ್ಣ ಹೆಗಡೆ ತನ್ನ ಮಗ ಪ್ರಕಾಶನೊಂದಿಗೆ ಅಡಕೆ ಕೃಷಿ ಮಾಡಿಕೊಂಡಿರುತ್ತಾನೆ. ಪ್ರಕಾಶನ ಹೆಂಡತಿ ಶಾರದಾ ಮತ್ತು ಮಗ ರವಿ. ಅಕ್ಕನ ಹಿರಿಯ ಮಗ ಸುಬ್ಬರಾಯ, ಹೆಂಡತಿ ಶ್ರಿದೇವಿ ಮತ್ತು ಮಕ್ಕಳೊಂದಿಗೆ ಕೃಷಿ ಮಾಡಿಕೊಂಡು ಹೊನ್ನೇಗದ್ದೆಯ ಸಮೀಪ ದಲ್ಲಿಯೇ ಇದ್ದಾರೆ. ನನ್ನ ಇನ್ನೊಬ್ಬ ಅಕ್ಕ ಮೃಣಾಲಿನಿ ಮತ್ತು ಭಾವ ಗೋಪಾಲ ಭಟ್ಟ, ತಮ್ಮ ಮಗ ವಿನಯ ಮತ್ತು ಅವನ ಹೆಂಡತಿ ಮಮತಾಳೊಂದಿಗೆ ಬೆಂಗಳೂರಿನಲ್ಲಿ ತಮ್ಮ ಸ್ವಂತ ಮನೆಯಲ್ಲಿ ನೆಲೆಸಿದ್ದಾರೆ. ವಿನಯನಿಗೆ ನಿಶಾಂತ ಎಂಬ ಮಗ ಮತ್ತು ನಿಖಿತಾ ಎಂಬ ಮಗಳಿದ್ದಾಳೆ. ಮೃಣಾಲಿನಿ ಶಿಸ್ತು ಮತ್ತು ಸ್ವಚ್ಛತೆಗೆ ಹೆಸರಾದವಳು. ಅವರದು ಸುಸ್ಥಿತಿಯಲ್ಲಿರುವ ಕುಟುಂಬ. ಮೃಣಾಲಿನಿಯ ಮಗಳು ವೀಣಾ ಅಜ್ಜೀಬಳ ಎಂ. ಆರ್. ಹೆಗಡೆಯ ಪುತ್ರ ಸುಬ್ಬು(ಸುಬ್ಬರಾಯ) ನನ್ನು ವಿವಾಹವಾಗಿ ಬೆಂಗಳೂರಲ್ಲೇ ನೆಲೆಸಿದ್ದಾಳೆ. ಸುದೀಪ ಮತ್ತು ನೇಹಾ ಅವರ ಮಕ್ಕಳು. ಸುಬ್ಬೂ ಕೂಡ ಸ್ವಂತ ಮನೆ ಮಾಡಿದ್ದಾನೆ. ಜರ್ಮನಿಗೆ ತಮ್ಮ ಕಂಪನಿ(ಮೈಕೊ)ಯಿಂದ ಹೋಗಿ ಬಂದಿದ್ದಾನೆ ಮತ್ತು ಅಮೆರಿಕೆಗೂ ಹೋಗುವವ

ಸಿದ್ದಾನೆ. ಅವರದು ತುಂಬ ಸುಸಂಸ್ಕೃತ ಕುಟುಂಬ. ನನ್ನ ಹೆಂಡತಿಯ ತಮ್ಮ, ಸುದರ್ಶನ ಬೆಂಗಳೂರಿನಲ್ಲಿ ಐ.ಟಿ.ಐ ಅಧಿಕಾರಿ; ಸ್ವಂತ ಮನೆ ಮಾಡಿಕೊಂಡು, ಹೆಂಡತಿ ಸರೋಜಾ ಮತ್ತು ಪಲ್ಲವಿ, ವರ್ಷಾ ಮತ್ತು ಅಕ್ಷಿತಾ ಎಂಬ ಮಕ್ಕಳೊಂದಿಗೆ ವಾಸಿಸುತ್ತಾನೆ. ನನ್ನ ಹಿರಿಯ ಅಕ್ಕ ಸೀತಾಳಿಗೆ ಇಬ್ಬರು ಹೆಣ್ಣುಮಕ್ಕಳು. ಹಿರಿಯ ಮಗಳು ಲಲಿತಾ, ಪತಿ ಯು. ಎಸ್. ಹೆಗಡೆಯವರೊಂದಿಗೆ ಧಾರವಾಡದಲ್ಲಿ ಸ್ವಂತ ಮನೆಯಲ್ಲಿದ್ದಾಳೆ. ಇವರಿಗೆ ಇಬ್ಬರು ಬುದ್ಧಿವಂತ ಗಂಡುಮಕ್ಕಳು. ಇಬ್ಬರೂ ಕಂಪ್ಯೂಟರ್ ಇಂಜನಿಯರರು. ಹಿರಿಯ ಮಗ ಶೈಲೇಶ ಅಮೇರಿಕೆಯಲ್ಲಿ ಕಲಿತು, ಅಲ್ಲೇ ಕೆಲಸ ಮಾಡಿ. ಈಗ ಬೆಂಗಳೂರಿನಲ್ಲಿಯ ಟೆಕ್ಸಾಸ್ ಕಂಪನಿಯಲ್ಲಿ ಉನ್ನತ ಹುದ್ದೆಯಲ್ಲಿದ್ದಾನೆ. ಇನ್ನೊಬ್ಬ ಮಗ, ಮಹೇಶ ಅಮೇರಿಕೆಯಲ್ಲಿ ಕಂಪ್ಯೂಟರ್ ಇಂಜನಿಯರ್ ಆಗಿದ್ದಾನೆ. ನನ್ನ ಮಡದಿ ವೀಣಾಳಿಗೆ ಇಬ್ಬರು ತಂಗಿಯಂದಿರು. ವಿದುಲಾ, ದತ್ತಾತ್ರೇಯ ಕುರುಡಿಯನ್ನು ವಿವಾಹವಾಗಿ ಧಾರವಾಡದ ಸ್ವಂತ ಮನೆಯಲ್ಲಿ ನೆಲೆಸಿದ್ದಾಳೆ. ಅವಳ ಪತಿ ಉದ್ಯಮಿ. ಒಬ್ಬಳೇ ಮಗಳಾದ ಸುಪರ್ಣಾ ಧಾರವಾಡದ ಎಸ್ ಡಿ. ಎಂ. ಕಾಲೇಜಿನಲ್ಲಿ ಕಂಪ್ಯೂಟರ್ ಇಂಜನಿಯರಿಂಗ ಕಲಿತು, ಕೆನಡಾದಲ್ಲಿ ಉನ್ನತ ವ್ಯಾಸಂಗ ಮಾಡಿ, ಕೆಲಿಫೋರ್ನಿಯಾದಲ್ಲಿ ಉನ್ನತ ವೃತ್ತಿಯಲ್ಲಿದ್ದಾಳೆ. ಅವರದು ಸುಸ್ಥಿತಿಯಲ್ಲಿರುವ ಕುಟುಂಬ. ಇನ್ನೊಬ್ಬ ತಂಗಿ, ಸಂಧ್ಯಾ ತಟ್ಟೀಕೈಯ ವಿಶ್ವನಾಥ ಹೆಗಡೆಯನ್ನು ಲಗ್ನವಾಗಿ ಏಕೈಕ ಪುತ್ರಿ ವಿಜೇತಾಳೊಂದಿಗೆ ಈಗ ಸಾಗರದಲ್ಲಿ ನೆಲೆಸಿದ್ದಾಳೆ. ವಿಶ್ವನಾಥನು ವಿಜಯ ಬ್ಯಾಂಕಿನಲ್ಲಿ ಮ್ಯಾನೇಜರ್. ತಟ್ಟೀಕೈಯಲ್ಲಿ ಅವನಿಗೆ ಸ್ವಲ್ಪ ಅಡಕೆತೋಟ ಮತ್ತು ಶಿರಸಿಯಲ್ಲಿ ಒಂದು ಸ್ವಂತ ಮನೆ ಇದೆ. ನನ್ನ ತಂದೆಯ ಬಳಗದೊಂದಿಗೆ ನನಗೆ ಹೆಚ್ಚು ಸಂಪರ್ಕವಿಲ್ಲ. ನಾನು ಮಗುವಾಗಿದ್ದಾಗಲೇ ತಂದೆ ಸತ್ತಿದ್ದು ಅದಕ್ಕೆ ಕಾರಣ ಇದ್ದರೂ ಇರಬಹುದು. ತಾಯಿಯ ಬಳಗದೊಂದಿಗೆ ಇಂದಿಗೂ ಸಂಪರ್ಕ ಇದೆ. ನನ್ನ ಅಜ್ಜನಮನೆ ಹಳದೋಟ ಮತ್ತು ದೊಡ್ಡಮ್ಮನ ಮನೆ ಕುಳವೆ ಕುರಿತು ಈ ಹಿಂದೆಯೇ ಪ್ರಸ್ತಾಪಿಸಿದ್ದರಿಂದ ಆ ವಿವರ ಅನಗತ್ಯ. ನನ್ನ ಕುಳವೆ ಅಣ್ಣನಿಗೆ ನಾಲ್ಕು ಗಂಡುಮಕ್ಕಳು ಮತ್ತು ಮೂವರು ಹೆಣ್ಣುಮಕ್ಕಳು. ಹಿರಿಯ ಮಗ ದಿವಸ್ಪತಿ ಕಾರವಾರ ಸಮೀಪದ ಉಲಗಾದ ಮಹಾಸತಿ ಕಾಲೇಜಿನಲ್ಲಿ ಸಂಸ್ಕೃತದ ಉಪನ್ಯಾಸಕ. ರಮೇಶ, ಬಾಪು, ಅಶೋಕ ಕೃಷಿ ಮಾಡಿಕೊಂಡು ಕುಳವೆಯಲ್ಲಿದ್ದಾರೆ. ನನ್ನ ಅಣ್ಣನ ಮೂವರೂ ಹೆಣ್ಣುಮಕ್ಕಳು– ಮಧುಮತಿ, ಇಂದ್ರಾಣಿ ಮತ್ತು ಭಾರತಿ ಲಗ್ನ ಮಾಡಿಕೊಂಡು ಸಂಸಾರ ಸಾಗಿಸುತ್ತಿದ್ದಾರೆ. ಬೆಳ್ಳೆಕೇರಿಯ ವಕೀಲ, ಧನಂಜಯ ವಿಶ್ವೇಶ್ವರ ಹೆಗಡೆ ನನ್ನ ತಾಯಿಯ ಅಣ್ಣನ ಮಗ. ಈಗ ಕೃಷಿ ಮಾಡಿಕೊಂಡು, ಮಗ ಮಂಜುನಾಥ ಮತ್ತು ಸೊಸೆ, ಮೊಮ್ಮಕ್ಕಳೊಂದಿಗೆ ಬೆಳ್ಳೆಕೇರಿಯಲ್ಲಿ ವಾಸಿಸುತ್ತಿದ್ದಾನೆ. ಅವನೊಬ್ಬ ಸುಸಂಸ್ಕೃತ ಸಭ್ಯಗೃಹಸ್ಥ. ಶಿಕ್ಷಣದಲ್ಲಿ ಅವನಿಗೆ ಅಪಾರವಾದ ಆಸಕ್ತಿ. ಯಡಳ್ಳಿಯ ವಿದ್ಯೋದಯ ಕಾಲೇಜಿನ

ವ್ಯವಸ್ಥಾಪಕ ಮಂಡಳಿಯ ಅಧ್ಯಕ್ಷ ಕೂಡ ಆಗಿರುತ್ತಾನೆ. ಇನ್ನು ನನ್ನ ಮಕ್ಕಳ ವಿಚಾರ, ಮೊದಲೇ ಹೇಳಿದಂತೆ ನಮಗೆ ನವೀನ ಮತ್ತು ನೀಲೇಶ ಎಂಬ ಇಬ್ಬರು ಗಂಡುಮಕ್ಕಳು. ಹಿರಿಯವನಿಗೆ ೨೭ ಮತ್ತು ಕಿರಿಯವನಿಗೆ ೨೧ ವರ್ಷಗಳಾಗಿವೆ. ನವೀನ ಬಿ. ಕಾಮ್. ಪಾಸಾಗಿ ಹುಬ್ಬಳ್ಳಿಯ ಡಾ. ಎಂ. ಎಂ. ಜೋಶಿಯವರ ಆಸ್ಪತ್ರೆಯಲ್ಲಿ ಕ್ಯಾಂಟೀನ್ ನಡೆಸುತ್ತಿದ್ದಾನೆ. ಆಸ್ಪತ್ರೆಯ ಎದುರಿನಲ್ಲಿ ಟೆಲಿಫೋನ್ ಬೂಥ್‌ನ್ನೂ ಹಾಕುವವನಿದ್ದಾನೆ. ಅವನಿಗೆ ಮೊದಲಿನಿಂದಲೂ ಸ್ವಂತ ಉದ್ಯೋಗ ದಲ್ಲಿಯೇ ಆಸಕ್ತಿ. ಅವನ ಅಭಿರುಚಿಗೆ ತಕ್ಕಂತೆ ನಾನೂ ಪ್ರೋತ್ಸಾಹಿಸಿದೆ. ವಿದ್ಯಾರ್ಥಿ ಜೀವನದಲ್ಲಿ ಅವನು ವಾಣಿಜ್ಯ ಮಹಾವಿದ್ಯಾಲಯದಲ್ಲಿ ಓದುವಾಗ ಎಲ್ಲ ಪ್ರಾಧ್ಯಾಪಕ ರಿಗೂ ಅಚ್ಚುಮೆಚ್ಚಿನವನಾಗಿದ್ದ. ವಾರ್ಷಿಕ ಸ್ನೇಹ ಸಮ್ಮೇಳನ ಬಂದಿತೆಂದರೆ ಅವನಿಗೆ ಬಹಳ ಬೇಡಿಕೆ. ಅವನು ಬರೆಯುವ ಲಿಪಿ ಬಹು ಸುಂದರ. ಅವನು ಚಿತ್ರಕಲೆಯಲ್ಲಿ ಅನೇಕ ಪಾರಿತೋಷಕಗಳನ್ನೂ ಪಡೆದಿದ್ದ 'ಸಿ' ಸರ್ಟಿಫಿಕೇಟ್ ಪಾಸಾಗಿ, ಕಾಲೇಜಿನ ಎನ್.ಸಿ.ಸಿ.ಯ 'ಹಿರಿಯ ಅಂಡರ ಆಫೀಸರ' ಎಂದೂ ಕೆಲಸ ಮಾಡಿದ್ದಾನೆ. ಅಥ್ಲೆಟಿಕ್ಸ್ ಪಂದ್ಯಗಳಲ್ಲೂ ಪಾರಿತೋಷಕಗಳನ್ನು ಪಡೆದಿದ್ದಾನೆ. ಕಾಲೇಜಿನ ಚುನಾವಣೆಯಲ್ಲಿ ಆರಿಸಿ ಬಂದು ತರಗತಿಯ ಪ್ರತಿನಿಧಿಯಾಗಿ ಕಾರ್ಯನಿರ್ವಹಿಸಿದ್ದಾನೆ. ಅವನು ಮಿತಭಾಷಿ. ಅವನಿಗೆ ಸ್ವಾಭಿಮಾನ ಅಗತ್ಯಕ್ಕಿಂತಲೂ ಜಾಸ್ತಿ ಇದೆ. ಅವನ ಜೀವನ ಹೇಗೆ ಸಾಗುತ್ತದೆಂಬುದನ್ನು ಕಾದು ನೋಡಬೇಕು. ಅವನ ಕಾರ್ಯದಲ್ಲಿ ಅವನಿಗೆ ಯಶಸ್ಸು ದೊರೆಯಲೆಂಬುದೇ ನಮ್ಮ ಸದಿಚ್ಛೆ. ಇನ್ನು, ನೀಲೇಶನ ವಿಷಯ ಹುಟ್ಟಿನಿಂದಲೇ ಶಾಂತಸ್ವಭಾವದ ನೀಲೇಶ, ಕೇವಲ ಮನೆಯವರಿಗಷ್ಟೇ ಅಲ್ಲ, ಇತರರಿಗೂ ಅಚ್ಚುಮೆಚ್ಚಿನವನು. ಶಿಕ್ಷಣದಲ್ಲಿ ಮೊದಲಿನಿಂದಲೂ ಅವನಿಗೆ ಉನ್ನತ ಪ್ರಶಸ್ತಿ. ಮೊದಲೇ ತಿಳಿಸಿದಂತೆ, ದ್ವಿತೀಯ ಪಿ.ಯು ಸಿ ಯಲ್ಲಿ ರಾಜ್ಯಕ್ಕೆ ೧೮ ನೆಯ ಸ್ಥಾನ, ಜಿಲ್ಲೆಗೆ ಪ್ರಥಮ ಮತ್ತು ೯೨.೫% ಮಾಡಿ, ಕಾಲೇಜಿನಲ್ಲಿ ಹೊಸ ದಾಖಲೆ ಸೃಷ್ಟಿಸಿದ. ಮೈಸೂರಿನ ಎಸ್.ಜೆ.ಸಿ ಇ.ಯಲ್ಲಿ ಅಂತಿಮ ವರ್ಷದಲ್ಲಿ ಕಂಪ್ಯೂಟರ್ ಅಧ್ಯಯನ ಮಾಡುತ್ತಿದ್ದಾನೆ. ಅಲ್ಲಿಯ ಎಲ್ಲ ಪರೀಕ್ಷೆಗಳಲ್ಲಿಯೂ ಅವನಿಗೆ ಉನ್ನತ ಸ್ಥಾನ ಲಭಿಸಿದೆ. ಈಗಾಗಲೇ ಅವನಿಗೆ ಬೆಂಗಳೂರಿನ ವಿಪ್ರೋ ಕಂಪನಿಯಲ್ಲಿ ಕೆಲಸವೂ ದೊರಕಿದೆ. ೧೯೯೮ ರ ಅಕ್ಟೋಬರ್‌ದಲ್ಲಿ ಅವನು ಕೆಲಸಕ್ಕೆ ಸೇರುತ್ತಾನೆ. ನೀಲೇಶ ನದು ಮೃದುಸ್ವಭಾವ. ಯಾರ ಮನಸ್ಸನ್ನೂ ನೋಯಿಸಲಾರ. ನವೀನನು ೫'-೮" ಎತ್ತರವಿದ್ದರೆ, ನೀಲೇಶ ೬' ಎತ್ತರವಿದ್ದಾನೆ. ನೀಲೇಶನಲ್ಲಿ ಅನೇಕ ಸದ್ಗುಣಗಳಿವೆ. ಇನ್ನು ನನ್ನ ಸ್ವಭಾವ ನಾನು ಮೊದಲಿನಿಂದಲೂ ಕಷ್ಟದಲ್ಲಿ ಬೆಳೆದವನು ಪರಿಶ್ರಮದ ಬೆಲೆ ನನಗೆ ಚೆನ್ನಾಗಿ ಗೊತ್ತು. ನನ್ನಲ್ಲಿ ಸ್ವಾಭಿಮಾನ ಅಗತ್ಯಕ್ಕಿಂತಲೂ ಸ್ವಲ್ಪ ಜಾಸ್ತಿ ಇದೆ. ಮೊದಮೊದಲು ಸಿಟ್ಟೂ ಸ್ವಲ್ಪ ಜಾಸ್ತಿ ಇತ್ತು. ಇತ್ತೀಚೆಗೆ, ಅನುಭವ ಆದಾಗಿನಿಂದ, ಸಿಟ್ಟೂ ಸಾಕಷ್ಟು ಕಡಮೆಯಾಗಿದೆ. ನನಗೆ ಇತಿಹಾಸ ಸಂಶೋಧನೆಯ ಕಾರ್ಯದಲ್ಲಿ ಬಹಳ ಆಸಕ್ತಿ. ಈಗಾಗಲೇ ೨೦ ಪುಸ್ತಕಗಳನ್ನು ಬರೆದಿದ್ದೇನೆ.

ಅವುಗಳಲ್ಲಿ ಬಹಳಷ್ಟು ಪ್ರಕಾಶನಗೊಂಡಿವೆ. ಐ. ಸಿ. ಎಚ್. ಆರ್. ದ ಜರ್ನಲ್, India Past and Present, Karnataka History and Culture, Karnataka Historical Society, ಇತಿಹಾಸ ದರ್ಶನ, ನಿಯತಕಾಲಿಕ ಪತ್ರಿಕೆಗಳು ಮತ್ತು ಅನೇಕ ಅಭಿನಂದನಾ ಗ್ರಂಥಗಳಲ್ಲಿ ನಾನು ಇಂಗ್ಲಿಷ್ ಮತ್ತು ಕನ್ನಡದಲ್ಲಿ ಬರೆದ ಲೇಖನಗಳು ಪ್ರಕಟಗೊಂಡಿವೆ ನಾನು ಸದಾ ಕಾರ್ಯನಿರತನಾದ ವ್ಯಕ್ತಿ. ಓದು ಬೇಸರ ಬಂದಾಗ ಮನೆಯ ಹಿತ್ತಲಲ್ಲಿ ಕೆಲಸ ಮಾಡುವದೆಂದರೆ ನನಗೆ ಇಷ್ಟ. ಇತ್ತೀಚೆಗೆ ನನ್ನ ಆರೋಗ್ಯ ಅಷ್ಟೊಂದು ಚೆನ್ನಾಗಿ ಇಲ್ಲದ್ದರಿಂದ ಅಥ್ಲೆಟಿಕ್ಸ್, ವಾಲಿಬಾಲ್ ಮತ್ತು ಕ್ರಿಕೆಟ್ ಆಡಲಾಗುತ್ತಿಲ್ಲ ಮತ್ತು ಕ್ರೀಡೆಗಳನ್ನು ಕಲಿಸಲು ಸಾಧ್ಯವಾಗುತ್ತಿಲ್ಲ ಎಂಬುದು ನನ್ನ ಮನಸ್ಸಿಗೆ ನೋವನ್ನುಂಟುಮಾಡಿದೆ. ಇಷ್ಟೆಲ್ಲ ಇದ್ದರೂ, ನಾನೊಬ್ಬ ಆದರ್ಶವ್ಯಕ್ತಿ ಎಂದು ಹೇಳಿಕೊಳ್ಳುವ ಧೈರ್ಯ ನನಗಿಲ್ಲ. ನನ್ನಲ್ಲಿ ಗುಣಗಳಿದ್ದಂತೆ, ಮನುಷ್ಯ ಸಹಜವಾದ ಕೆಲವು ದೌರ್ಬಲ್ಯಗಳೂ ಇವೆ.

ಒಟ್ಟಿನಲ್ಲಿ, ಶಿರಸಿಯ ಎಂ. ಎಂ. ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯದಲ್ಲಿ ಬಹು ದೀರ್ಘಕಾಲ ಉಪನ್ಯಾಸಕನಾಗಿ ಕೆಲಸ ಮಾಡಿ ಈಗ ನಿವೃತ್ತನಾಗಿದ್ದೇನೆ. ಬಹು ದೀರ್ಘಕಾಲ ಸಂಸ್ಥೆಯ ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿರುವ ವಿದ್ಯಾಧಿರಾಜ ಶ್ರೀ ವಿ.ಎಸ್. ಸೋಂದೆಯವರು ನನ್ನನ್ನು ಆತ್ಮೀಯವಾಗಿ ಕಂಡು ಗೌರವಿಸಿದ್ದಾರೆ. ಕಾಲೇಜಿನ ಇಂದಿನ ವ್ಯವಸ್ಥಾಪಕ ಮಂಡಳಿಯವರೆಲ್ಲ ನನ್ನನ್ನು ಒಬ್ಬ ನೌಕರನಂತೆ ಕಾಣದೆ, ಮಿತ್ರನಂತೆ ಕಂಡಿದ್ದಾರೆ. ಈ ಊರಿನಲ್ಲಿ ಸೇವೆ ಪ್ರಾರಂಭಿಸಿದಂದಿನಿಂದ ಅನೇಕ ಮಿತ್ರರನ್ನು ಹೊಂದಿದ್ದೇನೆ. ಜಿ. ವಿ. ಭಟ್ಟ ಕೊಂಕೇರಿ, ದಿ. ಡಿ. ಸಿ ಭಟ್ಟ, ಪರಮೇಶ್ವರ ಹೆಗಡೆ, ಆರ್. ವಿ. ಶಾಸ್ತ್ರಿ, ಪಿ. ಐ. ಹೆಗಡೆ, ಡಿ ಪಿ. ಹೆಗಡೆ, ಪಿ ಪಿ. ಹೆಗಡೆ, ಕೇಶವಮೂರ್ತಿ, ಎಂ ಆರ್. ವಿಷ್ಣುಮೂರ್ತಿ, ಪಿ. ಶಂಕರರಾವ್, ಎಂ. ರಮೇಶ, ಆರ್. ಆರ್. ಮುಂಡರಗಿ. ಹೀಗೆ ಒಬ್ಬರೇ, ಇಬ್ಬರೇ ! ಇನ್ನೂ ಅನೇಕರನ್ನು ಸ್ಮರಿಸಿಕೊಳ್ಳಬಹುದು. ದಿ. ಗಜಾನನ ಹೆಗಡೆ ಆಲೇಸರ, ದಿ. ಆರ್.ಪಿ. ಪ್ರಭು. ದಿ ಸೂರ್ಯನಾರಾಯಣ ಭಟ್ಟ, ದಿ. ಗಂಗಾಧರ ಸ್ವಾದಿ ಮುಂತಾದವರಿಗೆ ನನ್ನ ಬಗ್ಗೆ ವಿಶೇಷವಾದ ಪ್ರೇಮ ಮತ್ತು ಸಹಾನುಭೂತಿಯಿತ್ತು. ಸಮಾಜದ ಸಕಲ ಮತ-ಧರ್ಮಗಳ ಜನರೊಂದಿಗೆ ಹಿತಕರ ಸಂಬಂಧವಿರಿಸಿಕೊಂಡಿರುವದರಿಂದ ನನ್ನ ಮನಸ್ಸಿಗೆ ನೆಮ್ಮದಿಯಿದೆ. ನಮ್ಮ ಕಾಲೇಜಿನಲ್ಲಿ ಈಗಿರುವ ಎಲ್ಲ ಉಪನ್ಯಾಸಕರು ನನ್ನನ್ನು ಪ್ರೀತಿಯಿಂದ ಮತ್ತು ಗೌರವದಿಂದ ಕಂಡಿದ್ದಾರೆ. ಶೃಂಗೇರಿಯ ಜಗದ್ಗುರುಗಳು, ಸ್ವರ್ಣವಲ್ಲಿ, ಚಿತ್ರಾಪುರ, ನೆಲೆಮಾವು, ಹಂಪೆ, ಚಿತ್ರದುರ್ಗದ ಬೃಹನ್ಮಠ, ದಾವಣಗೆರೆಯ ಹಿರೇಮಠ, ಬೆಳಗಾವಿಯ ರುದ್ರಾಕ್ಷಿಮಠ. ಗದುಗಿನ ತೋಂಟದಾರ್ಯ ಮಠ. ಧಾರವಾಡದ ಮುರುಘಾಮಠ, ಹೀಗೆ ಎಷ್ಟೋ ಮಠಗಳ ಸ್ವಾಮಿಗಳೊಂದಿಗೆ ನನಗೆ ನೇರವಾದ ಸಂಪರ್ಕ ಬಂದು, ಅವರಿಂದ ಆಶೀರ್ವಾದ ಪಡೆಯುವ ಭಾಗ್ಯ ನನ್ನದಾಗಿದೆ. ಪ್ರತಿಭಾವಂತ ಪ್ರಾಧ್ಯಾಪಕರಿಂದ ಕಲಿತ ಭಾಗ್ಯ ನನ್ನದಾಗಿದೆ,

ಶಿಕ್ಷಕ ವೃತ್ತಿ ಪ್ರಾರಂಭ ಮಾಡಿದಾಗಿನಿಂದ ನಿವೃತ್ತನಾಗುವವರೆಗೆ ಅತ್ಯಂತ ಶ್ರದ್ಧೆಯಿಂದ ವಿದ್ಯಾರ್ಥಿಗಳಿಗೆ ಕಲಿಸಿದ್ದೇನೆಂಬ ಆತ್ಮವಿಶ್ವಾಸ ನನಗಿದೆ. ಜೀವನ ಮಾರ್ಗ ರೂಪಿಸಿಕೊಂಡು ನನ್ನ ವ್ಯಕ್ತಿತ್ವ ಬೆಳೆಸಿಕೊಳ್ಳುವಲ್ಲಿ ನನಗೆ ಇಂದಿನವರೆಗೆ ಯಾರೆಲ್ಲ ಪ್ರತ್ಯಕ್ಷವಾಗಿ ಹಾಗು ಪರೋಕ್ಷವಾಗಿ ಸಹಾಯ ಮಾಡಿದ್ದಾರೋ ಅವರಿಗೆಲ್ಲ ನಾನು ಚಿರಋಣಿ. ಇನ್ನೂ ಅನೇಕ ಇತಿಹಾಸ ಸಂಶೋಧನಾ ಕಾರ್ಯಗಳಲ್ಲಿ ತೊಡಗಿಸಿಕೊಳ್ಳಬೇಕೆಂಬ ಆಸೆ ನನ್ನದಾಗಿದೆ. ತಮ್ಮೆಲ್ಲರ ಶುಭಾಶಯಗಳು ನನ್ನೊಂದಿಗಿದ್ದರೆ, ಆ ಆಸೆಯೂ ನೆರವೇರಬಹುದೆಂಬ ವಿಶ್ವಾಸ ನನಗಿದೆ. ತಿಳಿದೋ, ತಿಳಿಯದೆಯೋ ಮಾಡಿರಬಹುದಾದ ಮತ್ತು ಮುಂದೆ ಮಾಡಬಹುದಾದ ಸಕಲ ತಪ್ಪುಗಳನ್ನು ಆ ಪರಮಾತ್ಮ ಕ್ಷಮಿಸಲೆಂದು ಪ್ರಾರ್ಥಿಸುತ್ತ ಈ ಲಘು ಆತ್ಮಚರಿತ್ರೆಗೆ ಪೂರ್ಣವಿರಾಮ ನೀಡುವೆ.





# ಡಾ. ಎ. ಕೆ. ಶಾಸ್ತ್ರಿ : ಜೀವನ ಹಾಗೂ ಸಂಶೋಧನೆ

**ಡಾ. ಜಿ. ಎಂ. ಹೆಗಡೆ**

ಶ್ಲಾಘಸ್ಯ ಏವ ಗುಣವಾನ್ ರಾಗದ್ವೇಷ ಬಹಿಷ್ಕತಾ ।
ಭೂತಾರ್ಥ ಕಥನೇಯಸ್ಯ ಸ್ಥೇಯಸ್ಯೇವ ಸರಸ್ವತೀ ॥

ನಡೆದು ಹೋದ ಸತ್ಯ ಸಂಗತಿಯನ್ನು ನಿರ್ದಾಕ್ಷಿಣ್ಯವಾಗಿ, ರಾಗದ್ವೇಷಗಳಿಲ್ಲದೆ ಖಚಿತವಾಗಿ ಹೇಳುವವನು ಗುಣ ಸಂಪನ್ನನೂ, ಸ್ತುತ್ಯನೂ ಆಗಿರುತ್ತಾನೆ ಎಂದು ಭಾರತದ ಪ್ರಾಚೀನ ಪ್ರಸಿದ್ಧ ಇತಿಹಾಸಕಾರ, ಕವಿ ಕಲ್ಹಣನು ತನ್ನ 'ರಾಜತರಂಗಿಣಿ' ಯಲ್ಲಿ ಹೇಳಿದ್ದಾನೆ. ಕರ್ನಾಟಕದ ಇತಿಹಾಸ ಪ್ರಪಂಚದಲ್ಲಿ ಬಹುಮುಖ ಸಂಶೋಧನ ಕಾರ್ಯ ಮಾಡಿದ ಇಂತಹ ಆದರ್ಶ ಇತಿಹಾಸ ವಿದ್ವಾಂಸರ ಪರಂಪರೆಯಲ್ಲಿ ಡಾ. ಅನಂತ ಕೃಷ್ಣ ಶಾಸ್ತ್ರಿಯವರ ಹೆಸರು ಪ್ರಸಿದ್ಧವಾದದ್ದು. ಇತಿಹಾಸವೆಂದರೆ ನಾಡನ್ನಾಳಿದ ರಾಜರ ಚರಿತ್ರೆಯೆಂಬ ಭಾವನೆ ಬೆಳೆದು ಬಂದಿದೆ. ಅದಕ್ಕಿಂತ ಭಿನ್ನ ವಾಗಿ ಇತಿಹಾಸವು ನಾಡಿನ ಜನರ ಧಾರ್ಮಿಕ, ಸಾಮಾಜಿಕ ಜೀವನ, ಸಂಸ್ಕೃತಿ, ಕಲೆ, ಆದರ್ಶ, ನಂಬಿಕೆಗಳನ್ನು ಅರ್ಥಪೂರ್ಣವಾಗಿ ವಿದಿತಪಡಿಸುವ ಜನಜೀವನದ ಅಧ್ಯಯನವೂ ಆಗಿರುತ್ತದೆ. ಸಾಂಸ್ಕೃತಿಕ ಇತಿಹಾಸದ ಸಂರಚನೆಯಲ್ಲಿ ತಮ್ಮ ಬಾಳನ್ನು ಶ್ರೀಗಂಧದಂತೆ ತೇದುಕೊಂಡ ಇತಿಹಾಸ ವಿದ್ವಾಂಸರ ಸಾಲಿನಲ್ಲಿ ಡಾ. ಎ.ಕೆ. ಶಾಸ್ತ್ರಿ ಪ್ರಮುಖರಾಗಿದ್ದಾರೆ. ಅವರ ಪ್ರತಿಭೆ ಪಾಂಡಿತ್ಯ ಬಹುಮುಖ ವ್ಯಕ್ತಿತ್ವ ಅವರಿಗೊಂದು ವಿಶಿಷ್ಟ ಸ್ಥಾನ ತಂದುಕೊಟ್ಟಿದೆ. ಡಾ. ಎ. ಕೆ. ಶಾಸ್ತ್ರಿ ಅವರು ಕರ್ನಾಟಕದ ಕಡತಗಳ ವಿದ್ವಾಂಸರೆಂದು ಖ್ಯಾತರಾಗಿದ್ದಾರೆ. ಅವರ ಬದುಕು ಬರಹಗಳ ಅವಲೋಕನದ ವಿಹಂಗಮ ನೋಟವೇ ಈ ಲೇಖನದ ಉದ್ದೇಶವಾಗಿದೆ.

ಸುಂದರವಾದ ನಿಸರ್ಗ ಸೌಂದರ್ಯವನ್ನೂ, ಭವ್ಯವಾದ ಸಾಂಸ್ಕೃತಿಕ ಪರಂಪರೆ ಯನ್ನೂ ಹೊಂದಿರುವ ಉತ್ತರಕನ್ನಡ ಜಿಲ್ಲೆಯ ಶಿರಸಿಯಲ್ಲಿ ೧೭ ಮಾರ್ಚ ೧೯೪೦ ರಂದು ಜನಿಸಿದ ಅನಂತ ಕೃಷ್ಣ ಶಾಸ್ತ್ರಿಗಳು ದೊಡ್ಡ ಪರಂಪರೆಗೆ ಸೇರಿದವರು. ಅವರ ತಂದೆ ಕೃಷ್ಣ ಶಾಸ್ತ್ರಿಗಳು ಶಿರಸಿ ತಾಲೂಕಿನ ಟೊಣ್ಣೆಮನೆಯಿಂದ ಮೈಸೂರಿಗೆ ತೆರಳಿ ವೇದವ್ಯಾಸಂಗ ಮಾಡಿದವರು. ಮೈಸೂರಿನಲ್ಲಿ ಸಂಸ್ಕೃತ 'ಶಿರೋಮಣಿ' ಯಲ್ಲಿ ಪ್ರಥಮ ಸ್ಥಾನ ಪಡೆದು ನಾಲ್ವಡಿ ಕೃಷ್ಣರಾಜ ಒಡೆಯರಿಂದ ಸನ್ಮಾನಿತ ರಾಗಿದ್ದರು. ವೇದವಿದ್ಯಾಪರಿಣತರಾದ ಕೃಷ್ಣ ಶಾಸ್ತ್ರಿಗಳು ಶಿರಸಿ ಹತ್ತಿರದ ಟೊಣ್ಣೆ

ಮನೆಗೆ ಮರಳಿ ಹಳದೋಟದ ಭವಾನಿಯನ್ನು ವಿವಾಹವಾದರು. ಅವರು ಆ ಕಾಲದಲ್ಲಿ ವಾಗ್ಮಿಗಳೂ, ಪಂಡಿತರೂ, ಆಗಿದ್ದರಲ್ಲದೆ ಈಗ ಬ್ರಹ್ಮೀಭೂತರಾದ ಶ್ರೀ ಶ್ರೀಧರ ಸ್ವಾಮಿಗಳಿಗೆ ಪೂರ್ವಾಶ್ರಮದಲ್ಲಿ ವೇದಪಾಠ ಹೇಳಿಕೊಟ್ಟ ಹಿರಿಮೆಗೆ ಭಾಜನರಾದವರು. ಕೃಷ್ಣ ಶಾಸ್ತ್ರಿಗಳು ಆಗ ದೇಶಾದ್ಯಂತ ನಡೆಯುತ್ತಿದ್ದ ಸ್ವಾತಂತ್ರ್ಯ ಹೋರಾಟದಲ್ಲೂ ಭಾಗವಹಿಸಿದ್ದರು. ಕೃಷ್ಣ ಶಾಸ್ತ್ರಿಗಳ ಜೀವನ ಹೋರಾಟಮಯ ವಾಗಿತ್ತೆಂದು ತಿಳಿದು ಬರುತ್ತದೆ. ಪತ್ನಿ ಭವಾನಿಯೊಂದಿಗೆ ಆದರ್ಶ ದಾಂಪತ್ಯ ಜೀವನ ನಡೆಸಿದ ಕೃಷ್ಣ ಶಾಸ್ತ್ರಿಗಳು ಸಂಸಾರಿಕವಾಗಿಯೂ ಅನೇಕ ಕಷ್ಟನಷ್ಟಗಳನ್ನೆದು ರಿಸಿದರು. ಗಂಗಾ ಎಂಬ ಮಗಳು ಹಾಗೂ ಪರಮೇಶ್ವರ ಎಂಬ ಮಗನ ಸಾವು ಹಾಗೂ ಬಡತನದ ಪ್ರತಿಕೂಲ ಪರಿಸ್ಥಿತಿಯಲ್ಲಿ ಛಲವಾದಿಯಾಗಿ ಬಾಳಿದ್ದರು. ಅವರ ಹಿರಿಯ ಮಗಳು ಸೀತಾಳನ್ನು ಹೊನ್ನೇಗದ್ದೆಯ ಗೋಪಾಲಕೃಷ್ಣ ಹೆಗಡೆಯವರಿಗೆ ಮದುವೆ ಮಾಡಿಕೊಟ್ಟಿದ್ದರು. ಮೃಣಾಲಿನಿ ಚಿಕ್ಕವಳು, ಕೊನೆಯ ಮಗ ಅನಂತ ಹುಟ್ಟಿ ಎರಡು ವರ್ಷ ತುಂಬುವಷ್ಟರಲ್ಲಿ ಕಾಮಾಲೆ ರೋಗಕ್ಕೆ ತುತ್ತಾಗಿ ಕೃಷ್ಣ ಶಾಸ್ತ್ರಿಗಳು ತಮ್ಮ ೫೦ ನೆಯ ವಯಸ್ಸಿನಲ್ಲಿ ವಿಧಿವಶರಾದದ್ದು (೧೯೪೨) ಒಂದು ದಾರುಣ ಘಟನೆಯಾಯಿತು.

ಪತಿ ಕೃಷ್ಣ ಶಾಸ್ತ್ರಿಗಳ ಸಾವಿನಿಂದ ಜರ್ಜರಿತಳಾದ 'ಭವಾನಿ' ನಡೆಸಿದ ಜೀವನ ಹೋರಾಟ ಆಶ್ಚರ್ಯಕರವಾದದ್ದು. ಆಸ್ತಿಯನ್ನೂ, ಗಂಡನನ್ನೂ ಕಳೆದುಕೊಂಡ ಭವಾನಿ ಬಾಳು ಕಣ್ಣೀರಿನ ಕಾಲುವೆಯಾಯಿತು. ವಿಧವೆಯ ಜೀವನ ದಾರುಣ ವಾಗಿರುವ ನಮ್ಮ ಸಮಾಜದಲ್ಲಿ 'ಭವಾನಿ' ಧೃತಿಗೆಡದೆ ಮಕ್ಕಳನ್ನು ಆದರ್ಶ ಪ್ರಜೆ ಗಳಾಗಿಸಲು ಆಶಿಸಿದರು. ತನ್ನ ಇಬ್ಬರು ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸಲು ಹಟ ತೊಟ್ಟರು. ಗಂಡ ಸತ್ತ ನಂತರ ತವರು ಮನೆ ಸೇರದೆ ಮಕ್ಕಳನ್ನು ಓದಿಸಿ ಬೆಳಸಲು ಸಂಕಲ್ಪಿಸಿದರು. ಭವಾನಿ ಶಾಸ್ತ್ರೀ 'ವಿದ್ಯೆಯೇ ಬಾಳಿಗೆ ಬೆಳಕು' ಎಂದು ನಂಬಿದ್ದ ಸಾಧ್ವಿ ಮಹಿಳೆಯಾಗಿದ್ದರು. ಮಗ ಅನಂತ ಶಿರಸಿಯಲ್ಲಿ ಆರಂಭದ ವಿದ್ಯಾಭ್ಯಾಸ ಮಾಡುತ್ತಿರುವಾಗ ಧಾರವಾಡದ ವನಿತಾ ಸೇವಾ ಸಮಾಜದಲ್ಲಿ ವಿಧವೆ ಯರಿಗೆ, ಅನಾಥ ಮಹಿಳೆಯರಿಗೆ ನೆರವು ನೀಡುವ ವಿಷಯ ಅವರಿಗೆ ತಿಳಿಯಿತು. ತನ್ನ ಇಬ್ಬರು ಮಕ್ಕಳಿಗೆ ಉತ್ತಮ ಶಿಕ್ಷಣ ನೀಡಿ ಅವರನ್ನು ಮುಂದೆ ತರಲು ಆಶಿಸಿದ್ದ ಭವಾನಿ ಅವರು ಮಕ್ಕಳೊಂದಿಗೆ ಧಾರವಾಡಕ್ಕೆ ಬಂದದ್ದು ಒಂದು ಶುಭಗಳಿಗೆಯೆನ್ನ ಬೇಕು. ಧಾರವಾಡದ ಆದರ್ಶ ವಿದ್ಯಾರ್ಥಿ ನಿಲಯದಲ್ಲಿದ್ದ ಮಕ್ಕಳಿಗೆ ರುಚಿಶುಚಿ ಯಾದ ಅಡಿಗೆ ಮಾಡಿ ಬಡಿಸುತ್ತ, ತನ್ನ ಇಬ್ಬರೂ ಮಕ್ಕಳ ಶಿಕ್ಷಣಕ್ಕೆ ಭವಾನಿ ಶಾಸ್ತ್ರಿ ಅವರು ಉತ್ತೇಜಿಸಿದರು. ಅನಂತ ಶಾಸ್ತ್ರಿ ಧಾರವಾಡದ ಕೆ. ಇ. ಬೋರ್ಡ ಶಾಲೆಗೆ ಸೇರಿ ಅಲ್ಲಿಯ ಆದರ್ಶ ಶಿಕ್ಷಕರ ಗರಡಿಯಲ್ಲಿ ಪ್ರತಿಭಾವಂತರಾಗಿ ಬೆಳೆಯತೊಡಗಿದರು. ವಿದ್ಯಾಭ್ಯಾಸದಲ್ಲಿ ಮಾತ್ರವಲ್ಲ ಕ್ರೀಡೆಗಳಲ್ಲಿಯೂ ಆಸಕ್ತಿಯಿಂದ ಭಾಗವಹಿಸಿ ಉತ್ತಮ ಶ್ರೇಯಾಂಕ ಗಳಿಸಿದರು.

ಧಾರವಾಡದ ಕರ್ನಾಟಕ ಕಾಲೇಜು ಉತ್ತರ ಕರ್ನಾಟಕದ ಹಿರಿಯ ಪ್ರತಿಷ್ಠಿತ ವಿದ್ಯಾಸಂಸ್ಥೆಯಾಗಿದೆ. ತಮ್ಮ ಮೆಟ್ರಿಕ್ಯುಲೇಶನ್ ಮುಗಿಸಿದ ಅನಂತ ಕೃಷ್ಣ ಶಾಸ್ತ್ರಿ ಧಾರವಾಡದ ಕರ್ನಾಟಕ ಕಾಲೇಜು ಸೇರಿದರು. ಕನ್ನಡದ ಹಿರಿಯ ಕವಿ ಲೇಖಕ ಗೋಕಾಕರು ಆಗ ಕರ್ನಾಟಕ ಕಾಲೇಜಿನ ಪ್ರಾಚಾರ್ಯರಾಗಿದ್ದರು. ವಿ. ಎಂ. ಇನಾಮದಾರ, ಸ.ಸ. ಮಾಳವಾಡ, ಎಸ್.ಆರ್. ಮಳಗಿ ಮೊದಲಾದ ಸಾಹಿತಿಗಳು ಹೆಸರಾಂತ ಪ್ರಾಧ್ಯಾಪಕರಿದ್ದ ಆ ಕಾಲೇಜಿನಲ್ಲಿ ಅನಂತ ಕೃಷ್ಣ ಶಾಸ್ತ್ರಿ ತಮ್ಮ ಕಾಲೇಜು ಶಿಕ್ಷಣವನ್ನು ಪೂರೈಸಿದರು, ಆಗಲೇ ಅವರು ಶ್ರೇಷ್ಠ ಕ್ರೀಡಾಪಟುವಾಗಿ ಕೀರ್ತಿ ಪಡೆದಿದ್ದರು. ಪೋಲ್‌ವಾಲ್ಟ, ಉದ್ದ ಜಿಗಿತ ಮತ್ತು ತ್ರಿವಿಧ ಜಿಗಿತಗಳಲ್ಲಿ ಪ್ರಥಮ ಸ್ಥಾನ ಗಳಿಸಿ ವಿಶ್ವವಿದ್ಯಾಲಯದ 'ಬ್ಲೂ' ಆದರು. ಅಥ್ಲೆಟಿಕ್ ಕ್ರೀಡೆಗಳಲ್ಲಿ ಅಪಾರ ಆಸಕ್ತಿ ವಹಿಸಿದ್ದರಿಂದ ಅವರ ಹೆಸರು, ಕೀರ್ತಿ ಹೆಚ್ಚಿತು. ಪೋಲ್‌ವಾಲ್ಟದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕ್ರೀಡಾಕೂಟದಲ್ಲಿ ದಾಖಲೆ ಸ್ಥಾಪಿಸಿದ ಹಿರಿಮೆ ಅವರದು. ಜಿಲ್ಲಾಮಟ್ಟದ, ರಾಜ್ಯಮಟ್ಟದ ಹಾಗೂ ಅಂತರ್ ವಿಶ್ವವಿದ್ಯಾಲಯುಗಳ ಕ್ರೀಡಾಕೂಟಗಳಲ್ಲಿ ಭಾಗವಹಿಸಿ ಅನೇಕ ಬಹುಮಾನಗಳನ್ನು ಪಡೆದದ್ದಲ್ಲದೆ ಕರ್ನಾಟಕ ಕಾಲೇಜಿನ ಕ್ರೀಡಾ ಚಾಂಪಿಯನ್ ಆಗಿ ಕಾಲೇಜಿಗೆ ಕೀರ್ತಿ ತಂದರು. ಕರ್ನಾಟಕ ಕಾಲೇಜಿನಲ್ಲಿ ಬಿ. ಎ. ಪದವಿ ಮುಗಿಸಿದ ಅನಂತ ಕೃಷ್ಣ ಶಾಸ್ತ್ರಿ ಅವರು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಇತಿಹಾಸ ವಿಭಾಗದಲ್ಲಿ ಎಂ.ಎ. ಅಧ್ಯಯನ ನಡೆಸಿದರು. ಪ್ರಸಿದ್ಧ ಇತಿಹಾಸ ಪ್ರಾಧ್ಯಾಪಕರಾದ ಡಾ. ಸಾಲತೊರೆ, ಡಾ. ಪಿ. ಬಿ. ದೇಸಾಯಿ, ಡಾ. ಜಿ. ಎಸ್. ದೀಕ್ಷಿತ, ಡಾ. ಎಸ್. ಶೆಟ್ಟರ ಮೊದಲಾದ ಪ್ರಾಧ್ಯಾಪಕರ ಇತಿಹಾಸ ಸಂಶೋಧನ ವಿಚಾರಗಳು ಶಾಸ್ತ್ರಿಯವರ ಮೇಲೆ ಪ್ರಭಾವ ಬೀರಿದವು. ಇತಿಹಾಸದಲ್ಲಿ ಸ್ನಾತಕೋತ್ತರ ಪದವಿ ಪಡೆದ ಅನಂತ ಕೃಷ್ಣ ಶಾಸ್ತ್ರಿ ಅವರು ಮೊದಲು ಪ್ರಾಧ್ಯಾಪಕರಾದದ್ದು ಬೀದರದಲ್ಲಿ (೧೯೬೩). ಅಲ್ಲಿ ಬಿ. ಟಿ. ಸಾಸನೂರ ಅವರು ಪ್ರಾಚಾರ್ಯರಾಗಿದ್ದರು. ಇತಿಹಾಸ ಬೋಧನೆ ಜೊತೆಗೆ ಕ್ರೀಡಾ ಚಟುವಟಿಕೆಗಳಲ್ಲಿ ವಿದ್ಯಾರ್ಥಿಗಳನ್ನು ಪ್ರೇರಿಸಿದ ಎ. ಕೆ. ಶಾಸ್ತ್ರಿ ಅವರು ಬಿಡುವಿನ ವೇಳೆಯಲ್ಲಿ ತಮಗೆ ಪ್ರಿಯವಾದ ಗ್ರಂಥಗಳನ್ನು ಓದುತ್ತಿದ್ದರು. ಟಾಲಸ್ಟಾಯ್‌ನ War and Peace ಅವರ ಮೇಲೆ ಪ್ರಭಾವ ಬೀರಿತು. ಹಾಗೆಯೇ ಇಂಗ್ಲೀಷ್ ಮತ್ತು ಕನ್ನಡ ಸಾಹಿತ್ಯದ ಮೌಲಿಕ ಗ್ರಂಥಗಳನ್ನು ಓದಿದರು. ಭಾರತದ ಪ್ರಸಿದ್ಧ ಇತಿಹಾಸ ವಿದ್ವಾಂಸರ ಗ್ರಂಥಗಳನ್ನು ಆರದ ಆಸಕ್ತಿಯಿಂದ ಅಧ್ಯಯನ ಮಾಡಿದರು. ಉತ್ತರಕನ್ನಡದ ಶಿರಸಿಯಲ್ಲಿ ಕಾಲೇಜು ಪ್ರಾರಂಭವಾದಾಗ ಧಾರವಾಡಕ್ಕೆ ಹತ್ತಿರವೆಂಬ ಕಾರಣದಿಂದಲೂ ತಾನು ಹುಟ್ಟಿ ಬೆಳೆದ ಪರಿಸರದಲ್ಲಿ ಸಾಂಸ್ಕೃತಿಕ ಕಾರ್ಯ ಮಾಡಬೇಕೆಂಬ ಹಂಬಲದಿಂದಾಗಿ ಶಿರಸಿಯ ಕಾಲೇಜಿನಲ್ಲಿ ಅವರು ಇತಿಹಾಸ ಅಧ್ಯಾಪಕರಾಗಿ ಶೈಕ್ಷಣಿಕ ಸೇವೆಯನ್ನು ಆರಂಭಿಸಿದರು. (೧೯೬೪). ಎ. ಕೆ. ಶಾಸ್ತ್ರಿಯವರನ್ನು ಓದಿಸಿ ನೌಕರಿ ಹಚ್ಚುವವರೆಗೆ ಹಗಲಿರುಳು ದುಡಿದು

ಅಪಾರ ಕನಸು ಕಂಡ ಅವರ ಆದರ್ಶ ತಾಯಿ ಭವಾನಿ ಶಿರಸಿಯಲ್ಲಿ ತೀರಿಕೊಂಡಾಗ ಎ. ಕೆ ಶಾಸ್ತ್ರಿ ತಬ್ಬಲಿಯಾದರು. ತನಗಾಗಿ ಸರ್ವಸ್ವವನ್ನೂ ತ್ಯಾಗ ಮಾಡಿದ ತಾಯಿ ಸುಖವನ್ನು ಕಾಣದೆ ಹೋದಳಲ್ಲದೆ ತನ್ನ ಬದುಕು ಶೂನ್ಯವಾಯಿತೆಂಬ ಸಂಕಟ ಎ. ಕೆ. ಶಾಸ್ತ್ರಿಯವರಲ್ಲಿ ಉಂಟಾಯಿತು. ಆಗ ಅವರ ಸಹಾಯಕ್ಕೆ ಬಂದವರು ಹೊನ್ನೇಗದ್ದೆಯ ಅವರ ಸೀತಕ್ಕ ಮತ್ತು ಗೋಪಾಲಕೃಷ್ಣ ಹೆಗಡೆ ಅವರು.

ಎ. ಕೆ. ಶಾಸ್ತ್ರಿಯವರು ತಮ್ಮ ಏಕಾಂತ ಜೀವನದಲ್ಲಿ ಪುಸ್ತಕಗಳ ಓದಿನಿಂದ, ಮಹಾತ್ಮರ ಜೀವನದಿಂದ ಇತಿಹಾಸದ ಘಟನೆಗಳಿಂದ ಸ್ಫೂರ್ತಿ ಚೈತನ್ಯವನ್ನು ಪಡೆಯುತ್ತಿದ್ದ ಸಂದರ್ಭದಲ್ಲಿ ಅವರ ವಿದ್ಯಾರ್ಥಿನಿಯಾದ ವೀಣಾ ಭಟ್ ಅವರು ಮಡದಿಯಾಗಿ ಮನೆತುಂಬಲು ಬಂದದ್ದು ಬಾಳಿನ ಹೊಸ ಅಧ್ಯಾಯಕ್ಕೆ ನಾಂದಿ ಯಾಯಿತು. ಅವರ ಮಧುರ ದಾಂಪತ್ಯಜೀವನ ಸುಖಮಯವಾಗಿ ಇಂದಿನವರೆಗೆ ನಡೆದು ಬಂದಿದೆ. ನವೀನ ಮತ್ತು ನೀಲೇಶ ಎಂಬ ಎರಡು ಗಂಡುಮಕ್ಕಳು ಅವರ ಬಾಳಿನ ಬೆಳಕಾಗಿದ್ದಾರೆ.

ಶಿರಸಿಯ ಕಾಲೇಜಿನಲ್ಲಿ ಎ. ಕೆ. ಶಾಸ್ತ್ರಿ ಅವರು ಮೂವತ್ನಾಲ್ಕು ವರ್ಷಗಳ ಕಾಲ (೧೯೬೪-೧೯೯೮) ಅಖಂಡ ಶೈಕ್ಷಣಿಕ ಸೇವೆ ಸಲ್ಲಿಸಿದ್ದಾರೆ. ಇತಿಹಾಸದ ಪ್ರಾಧ್ಯಾಪಕರಾಗಿ ವಿಭಾಗದ ಮುಖ್ಯಸ್ಥರಾಗಿ ಕಾರ್ಯ ಮಾಡಿದ್ದಾರೆ. ಸಾವಿರಾರು ವಿದ್ಯಾರ್ಥಿಗಳ ಪ್ರೀತಿ ಆದರಕ್ಕೆ ಪಾತ್ರರಾದ ಪ್ರಾಧ್ಯಾಪಕ ಅನಂತ ಕೃಷ್ಣ ಶಾಸ್ತ್ರಿಗಳು ಪಾಠಮಾಡುವ ರೀತಿ, ಅವರ ಕಂಚಿನ ಕಂಠದ ವಾಗ್ಧಾರೆ ಕೇಳುಗರನ್ನು ಸಮ್ಮೋಹನ ಗೊಳಿಸುತ್ತದೆ. ಒಂದು ವರ್ಷ ಅವರು ನಮಗೆ 'ಜಾಗತಿಕ ಇತಿಹಾಸ'ದ ಪಾಠ ಮಾಡಿದ ಸ್ಮೃತಿಚಿತ್ರಗಳು ನನ್ನ ನೆನಪಿನಲ್ಲಿ ಇಂದಿಗೂ ಅಚ್ಚಳಿಯದೆ ಉಳಿದಿವೆ. ಫ್ರಾನ್ಸ್‌ನ ರಾಜ್ಯಕ್ರಾಂತಿ, ಜಾಗತಿಕ ಮಹಾಯುದ್ಧಗಳನ್ನು ಕುರಿತು ಅವರಂತೆ ಪಾಠ ಮಾಡುವ ಇತಿಹಾಸ ಪ್ರಾಧ್ಯಾಪಕರು ಅಪೂರ್ವವೆಂದೇ ಎನ್ನಿಸುತ್ತದೆ. ಜಾಗತಿಕ ಇತಿಹಾಸದಲ್ಲಿ ಅವರ ಆಸಕ್ತಿ, ಅಭ್ಯಾಸ ವಿಶೇಷವಾದದ್ದು. ಕಾಲೇಜಿನ ಮೊದಲ ತರಗತಿಯಲ್ಲೇ ನಮಗೆ ಅವರು ವಿಚಾರ ಸಂಕಿರಣದಲ್ಲಿ ಪ್ರಬಂಧ ಮಂಡಿಸಲು ಹೇಳಿ ಹುರಿದುಂಬಿಸಿದ್ದನ್ನು ನಾನೆಂದೂ ಮರೆಯಲಾರೆ. ವಿದ್ಯಾರ್ಥಿಗಳನ್ನು ಮಂತ್ರ ಮುಗ್ಧರಾಗಿಸುವ ಇತಿಹಾಸದ ಘಟನೆಗಳನ್ನು ಎಳೆ ಎಳೆಯಾಗಿ ಬಿಡಿಸಿ, ವಿಮರ್ಶಿ ಸುತ್ತ ಬೋಧಿಸುವ ಅವರ ಕ್ರಮ ಇತಿಹಾಸ ಪ್ರಾಧ್ಯಾಪಕರಿಗೆ ಅನುಕರಣೀಯ ಆದರ್ಶವಾಗಿದೆ. ಶಿರಸಿಯ ಕಾಲೇಜಿನಲ್ಲಿ ಶಾಸ್ತ್ರಿಗಳು ನೌಕಾದಳದ ಅಧಿಕಾರಿಗಳಾಗಿ ವಿದ್ಯಾರ್ಥಿಗಳನ್ನು ತರಬೇತಿಗೊಳಿಸಿದ್ದರು. ಕ್ರೀಡಾ ವಿಭಾಗವನ್ನು ಹಲವು ವರ್ಷಗಳ ಕಾಲ ಅವರು ನೋಡಿಕೊಳ್ಳುತ್ತಿದ್ದರಲ್ಲದೆ ಅಥ್ಲೆಟಿಕ್ಸ್‌ದಲ್ಲಿ ಅನೇಕ ವಿದ್ಯಾರ್ಥಿಗಳಿಗೆ ತರಬೇತಿಕೊಡುತ್ತಿದ್ದರು. ಆ ಕಾಲದಲ್ಲಿ ಕ್ರೀಡಾವಿಭಾಗವನ್ನು ನೋಡಿಕೊಳ್ಳಲು ದೈಹಿಕ ಶಿಕ್ಷಕರಿರಲಿಲ್ಲವೆಂಬುದನ್ನು ಇಲ್ಲಿ ಎತ್ತಿ ಹೇಳಬೇಕು. ಇತಿಹಾಸ ಪ್ರಾಧ್ಯಾಪಕ

ರಾಗಿ, ನೌಕಾದಳದ ಅಧಿಕಾರಿಗಳಾಗಿ, ಕ್ರೀಡಾವಿಭಾಗದ ತರಬೇತಿ ನೀಡುವ ಮುಖ್ಯಸ್ಥರಾಗಿ, ಶಿರಸಿಯ ಸಾರ್ವಜನಿಕ ಚಟುವಟಿಕೆ ಕಾರ್ಯಕ್ರಮಗಳ ಸಂಯೋಜಕ ರಾಗಿ ಹೀಗೆ ಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡು ದುಡಿದವರು ಅನಂತ ಕೃಷ್ಣ ಶಾಸ್ತ್ರಿಗಳು. ವೃತ್ತಿಜೀವನದಲ್ಲಿ ಅವರಿಗೆ ಸಿಗಬೇಕಾದ ಸರಿಯಾದ ಸ್ಥಾನ ದೊರೆಯ ದಿರುವದರಿಂದ ಬಾಳಿನಲ್ಲಿ ಅತೃಪ್ತಿ, ಅಸಮಾಧಾನ ನೋವು ತುಂಬಿಕೊಂಡಿದ್ದರೂ ಅದನ್ನು ತೋರಿಸಿಕೊಳ್ಳದೆ ವಿದ್ಯಾರ್ಥಿಗಳ ಕಲ್ಯಾಣಕ್ಕಾಗಿ, ಅವರ ಅಭ್ಯುದಯಕ್ಕಾಗಿ ಚಿಂತಿಸುವವರು ಶಾಸ್ತ್ರಿಗಳು. ಮನುಷ್ಯಸಹಜವಾದ ಸಿಟ್ಟು, ಉದ್ವಿಗ್ನತೆ ಜೊತೆಗೆ ಸರಿಕಂಡದ್ದನ್ನು ನೇರವಾಗಿ ಹೇಳುವ ನಿಷ್ಠುರತೆ ಅವರಲ್ಲಿರುವದರಿಂದಲೇ ಅವರು ಸ್ಥಾನಮಾನ ಪಡೆಯಲಾರದೆ ಹೋಗಿರಬಹುದು. ತಮ್ಮ ನೇರ ನಡೆ ನುಡಿಗಳಿಗೆ ಹೆಸರಾದ ಶಾಸ್ತ್ರಿಗಳು ಶಿಸ್ತು, ಅಚ್ಚುಕಟ್ಟುತನ, ಪ್ರಾಮಾಣಿಕತೆ ಹಾಗೂ ಸತ್ಯದ ಆರಾಧಕರು. ಈ ವಿಷಯದಲ್ಲಿ ಯಾರೊಡನೆಯೂ ರಾಜಿಮಾಡಿಕೊಳ್ಳದ ಶಾಸ್ತ್ರಿಗಳು ತತ್ವಕ್ಕಾಗಿ ಹೋರಾಡುವವರು. ಬಡತನದ ನೋವುಂಡ ಅನಂತ ಕೃಷ್ಣ ಶಾಸ್ತ್ರಿಗಳಿಗೆ ಪ್ರತಿಭೆ, ಪರಿಶ್ರಮದಿಂದ, ಹೋರಾಟದಿಂದ, ಮಹತ್ವಾಕಾಂಕ್ಷೆಯಿಂದ ಮುಂದೆ ಬರಬೇಕೆಂಬ ಆದರ್ಶವಿದೆ. ವ್ಯಕ್ತಿ ಜೀವನದ ಉತ್ಕರ್ಷದಲ್ಲಿ ದೃಢವಾದ ನಂಬಿಕೆ ಅವರದು. ಆದ್ದರಿಂದಲೇ ತಮ್ಮ ವಿದ್ಯಾರ್ಥಿಗಳಿಗೆ ಅವರು ನೀಡುವ ಪ್ರೋತ್ಸಾಹ, ಮಾರ್ಗದರ್ಶನ, ಸಹಾಯ ಸಹಕಾರಗಳು ಬಹುಮುಖವಾದದ್ದು. ಶಿರಸಿಯ ಕಾಲೇಜಿನಲ್ಲಿ ಇತಿಹಾಸ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತ ಇತಿಹಾಸ ಸಂಶೋಧನೆ ಯಲ್ಲಿ ತಮ್ಮನ್ನು ಪೂರ್ಣವಾಗಿ ತೊಡಗಿಸಿಕೊಂಡ ಡಾ. ಎ. ಕೆ. ಶಾಸ್ತ್ರಿ ಅವರ ಗ್ರಂಥ ಲೇಖನ ಹಾಗೂ ಸಮಗ್ರ ಸಂಶೋಧನೆಯನ್ನು ಈ ಕೆಳಗಿನಂತೆ ವರ್ಗೀಕರಿಸಬಹುದು. ೧) ಜಾಗತಿಕ ಇತಿಹಾಸದ ಅಧ್ಯಯನ. ೨) ಶೃಂಗೇರಿಯ ಇತಿಹಾಸದ ಅಧ್ಯಯನ ಹಾಗೂ ಕಡತಗಳು, ೩) ಸ್ವರ್ಣವಲ್ಲೀ ಮಹಾ ಸಂಸ್ಥಾನದ ಚರಿತ್ರೆ ಹಾಗೂ ಕಡತಗಳು, ೪) ಶಿರಸಿ ತಾಲೂಕಿನ ಇತಿಹಾಸ, ೫) ಇತರ ಕಡತಗಳು, ೬) ಕವಿತಾ ಸಂಕಲನಗಳು, ೭) ಸಂಪಾದಿತ ಕೃತಿಗಳು, ೮) ಸಂಶೋಧನ ಲೇಖನಗಳು.

ಜಾಗತಿಕ ಇತಿಹಾಸ ಅಧ್ಯಯನವು ಡಾ. ಎ. ಕೆ. ಶಾಸ್ತ್ರಿ ಅವರ ಪ್ರಮುಖ ಆಸಕ್ತಿಯಾಗಿದೆ. ಇತಿಹಾಸ ಪ್ರಾಧ್ಯಾಪಕರಾದ ಡಾ. ಎ. ಕೆ. ಶಾಸ್ತ್ರಿ ಬರೆದ ಮೊದಲ ಗ್ರಂಥ **ಫ್ರಾನ್ಸ್ ದೇಶದ ಮಹಾಕ್ರಾಂತಿ.** ೧೯೭೧ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಪಠ್ಯ ಪುಸ್ತಕ ನಿರ್ದೇಶನಾಲಯದಿಂದ ಪ್ರಕಟವಾದ ಈ ಗ್ರಂಥವು ೨೮೦ ಪುಟಗಳಷ್ಟು ಸುದೀರ್ಘವಾದದ್ದು. ಆಧುನಿಕ ಯುರೋಪದ ಐತಿಹಾಸಿಕ ಹಿನ್ನೆಲೆ, ಮಹಾ ಕ್ರಾಂತಿಯ ಕಾರಣಗಳು, ಮಹಾಕ್ರಾಂತಿಯ ಗತಿ, ಮಹಾಕ್ರಾಂತಿಯ ಪರಿಣಾಮ ಗಳು ಎಂಬ ನಾಲ್ಕು ಅಧ್ಯಾಯಗಳಲ್ಲಿ ಫ್ರಾನ್ಸ್ ದೇಶದ ಮಹಾಕ್ರಾಂತಿಯ ಘಟನೆ ಗಳನ್ನು ವಿಸ್ತಾರವಾಗಿ ಶಾಸ್ತ್ರಿಗಳು ವಿವರಿಸಿದ್ದಾರೆ. ಯುರೋಪ್ ಖಂಡದ ಮಹಾಪ್ರ

ಡಿಗೆ ಕಾರಣವಾದ ಸಾಂಸ್ಕೃತಿಕ ಪುನರುಜ್ಜೀವನ, ಧಾರ್ಮಿಕ ಕ್ರಾಂತಿ, ಹೊಸಯುಗದ ಆರಂಭ, ಯುರೋಪದ ವಿವಿಧ ರಾಷ್ಟ್ರಗಳ ಆಡಳಿತ ಹಾಗೂ ಔದ್ಯೋಗಿಕ ಕ್ರಾಂತಿಯ ವಿವರಗಳು ಚರಿತ್ರಾರ್ಹ ಘಟನೆಗಳಾಗಿವೆ. ಫ್ರಾನ್ಸ್ ದೇಶದ ಮಹಾ ಕ್ರಾಂತಿಗೆ ಕಾರಣವಾದ ರಾಜಕೀಯ, ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ವಿಶ್ಲೇಷಣೆ ಈ ಗ್ರಂಥದ ಕೇಂದ್ರಭಾಗವಾಗಿದೆ. ಫ್ರಾನ್ಸ್‌ನ ಮಹಾಕ್ರಾಂತಿಯ ಗತಿ ಅತ್ಯಂತ ವ್ಯಾಪಕವಾದದ್ದು. ಲೂಯಿ, ನೆಪೋಲಿಯನ್ ಆಡಳಿತ, ಪ್ರಜಾಪ್ರತಿನಿಧಿ ಪರಿಪತ್ತು ಇತ್ಯಾದಿ ವಿಷಯಗಳು ಕುತೂಹಲಕರವಾಗಿವೆ. ಮಹಾಕ್ರಾಂತಿಯ ಪರಿಣಾಮಗಳನ್ನು ವಿವರಿಸುತ್ತ 'ಫ್ರಾನ್ಸ್‌ದ ಮಹಾಕ್ರಾಂತಿಯು ಮಾನವಕುಲದ ಇತಿಹಾಸದಲ್ಲಿಯೇ ಒಂದು ರೋಮಾಂಚಕಾರಿ ಘಟನೆಯಾಗಿದೆ. ಸ್ವಾತಂತ್ರ್ಯ, ಸಮತೆ, ಬಂಧುತ್ವ ಎಂಬ ಆದರ ತತ್ವಗಳು ಕೇವಲ ಫ್ರಾನ್ಸಕ್ಕಷ್ಟೇ ಸೀಮಿತವಾಗಿರದೆ ಇಡೀ ಯುರೋಪ್, ಅಷ್ಟೇಕೆ ಇಡೀ ಮಾನವಕುಲಕ್ಕೇ ಆದರ್ಶಪ್ರಾಯವಾಗಿವೆ'. (ಪುಟ ೨೬೩) ಎಂಬ ಲೇಖಕರ ಅಭಿಮತವು ಸತ್ಯದ ಮಾತಾಗಿದೆ. ನಿರಂಕುಶ ರಾಜ ಪ್ರಭುತ್ವವನ್ನು ನಿರ್ಮೂಲನ ಮಾಡಿ ಪ್ರಜಾರಾಜ್ಯ ಸರಕಾರದ ಬೀಜ ಹುಟ್ಟಿದ್ದೇ ಫ್ರಾನ್ಸ್‌ಕ್ರಾಂತಿಯ ಆಶಯವಾಗಿದ್ದು ರಾಷ್ಟ್ರೀಯತೆಯ ಮನೋಭಾವವನ್ನು ಜಾಗೃತಗೊಳಿಸುವಲ್ಲಿ ಅದು ಸಹಾಯಕವಾದದ್ದನ್ನು ನಾವು ಅರಿಯುತ್ತೇವೆ. ಫ್ರಾನ್ಸ್‌ದೇಶದ ಮಹಾಕ್ರಾಂತಿಯ ಬಗೆಗೆ ಕನ್ನಡದಲ್ಲಿ ಮೊದಲ ಬಾರಿಗೆ ವಿಸ್ತಾರ ವಾದ ಅಧ್ಯಯನ ಗ್ರಂಥವನ್ನು ರಚಿಸಿದ ಶ್ರೇಯಸ್ಸು ಡಾ. ಎ ಕೆ. ಶಾಸ್ತ್ರಿಯವರದು. ಯುರೋಪದ ಇತಿಹಾಸ ಅಧ್ಯಯನವನ್ನು ಕೈಕೊಳ್ಳುವವರಿಗೆ ಇದು ನೆರವು ನೀಡು ತ್ತದೆ. ಜಾಗತಿಕ ಇತಿಹಾಸದಲ್ಲಿ ಡಾ. ಶಾಸ್ತ್ರಿಯವರಿಗೆ ಅಪಾರ ಆಸಕ್ತಿ. ವ್ಯಾಸಂಗಾ ನುಭವ ಇರುವದಕ್ಕೆ ಅವರ ಪ್ರಸ್ತುತ ಗ್ರಂಥವೇ ಸಾಕ್ಷಿಯಾಗಿದೆ.

ಎ. ಕೆ. ಶಾಸ್ತ್ರಿ ಅವರು ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯ ಅಧ್ಯಯನಕ್ಕೆ ಸಲ್ಲಿಸಿದ ಕೊಡುಗೆ ಪ್ರಮುಖವಾದದ್ದು. ಶೃಂಗೇರಿಯ ಇತಿಹಾಸಕ್ಕೆ ಸಂಬಂಧಿಸಿ ದಂತೆ ಅವರ ಪಿಎಚ್. ಡಿ. ಅಧ್ಯಯನ ಹಾಗೂ ಆಕರ ಸಾಮಗ್ರಿಯ ಗ್ರಂಥಗಳು ಇತಿಹಾಸ ಕ್ಷೇತ್ರದ ಅಮೂಲ್ಯ ಸಂಶೋಧನೆಯಾಗಿವೆ. ಕರ್ನಾಟಕದ ಸಾಂಸ್ಕೃತಿಕ ಇತಿಹಾಸ ರಚನೆಗೆ ಶಿಲಾ ಮತ್ತು ತಾಮ್ರ ಶಾಸನಗಳು, ಸ್ಮಾರಕಗಳು, ಚಾರಿತ್ರಿಕ ಕಾವ್ಯಗಳು, ನಾಣ್ಯಗಳು, ಸಮಕಾಲೀನರ ಹೇಳಿಕೆಗಳು ಹಾಗೂ ಇತರ ಸಾಮಗ್ರಿ ಗಳು ಆಧಾರಭೂತವಾಗಿದ್ದು ಅವುಗಳನ್ನು ಬಳಸಿಕೊಂಡು ಕರ್ನಾಟಕದ ಇತಿಹಾಸ ವನ್ನು ಅನೇಕ ವಿದ್ವಾಂಸರು ರಚಿಸಿದ್ದಾರೆ. ಆದರೆ ನಾಡಿನ ಇತಿಹಾಸದ ಅಧ್ಯಯನಕ್ಕೆ ಕಡತಗಳು ಮುಖ್ಯದಾಖಲೆಯಾಗಿ ಆಕರ ಸಾಮಗ್ರಿಯಾಗಿವೆಯೆಂಬುದನ್ನು ಇತಿಹಾಸ ಸಂಶೋಧನ ಪ್ರಪಂಚ ಅರಿಯುವಂತೆ ಮಾಡಿದವರು ಡಾ. ಎ ಕೆ ಶಾಸ್ತ್ರಿ ಅವರು. ಕಾಗದದ ಬಳಕೆ ಇಲ್ಲದಾಗ ಬಟ್ಟೆಗೆ ಅಂಟು ಮಿಶ್ರಿತ ಹುಣಸೆಪುಡಿಯನ್ನು ಹಚ್ಚಿ, ಗಾರೆಗಲ್ಲಿನಿಂದ ತಿಕ್ಕಿ, ಕಾಡಿಗೆ ಲೇಪಿಸಿ ಒಣಗಿಸಿ ನಂತರ ಪುಸ್ತಕ ರೂಪದಲ್ಲಿ ಮಡಚಿ

ಆ ಹಾಳೆಗಳ ಮೇಲೆ ಸೀಸದಂಥ ಬಳಪದ ಕಲ್ಲಿನಿಂದ ಬರೆಯಲ್ಪಡುವ ಕಡತಗಳು ಕರ್ನಾಟಕದ ಸಾಂಸ್ಕೃತಿಕ ನಿಧಿಯೆನಿಸಿವೆ. ಆರ್. ನರಸಿಂಹಾಚಾರ್ ಮತ್ತು ಆರ್. ಶಾಮಶಾಸ್ತ್ರಿಗಳನ್ನು ಬಿಟ್ಟು ಬೇರೆ ಯಾರೂ ಕಡತಗಳನ್ನು ಇತಿಹಾಸ ಸಾಮಗ್ರಿಯಾಗಿ ಬಳಸಿಕೊಳ್ಳಲಿಲ್ಲವೆಂದೂ ಪ್ರಪ್ರಥಮವಾಗಿ ಕಡತಗಳನ್ನು ಇತಿಹಾಸಕ್ಕೆ ಆಕರವಾಗಿ ಆಯ್ಕೆ ಮಾಡಿಕೊಂಡವರು ಎ. ಕೆ. ಶಾಸ್ತ್ರಿಯವರೆಂದು ಇತಿಹಾಸ ವಿದ್ವಾಂಸರಾದ ಡಾ. ಜಿ ಎಸ್. ದೀಕ್ಷಿತರು ಶ್ಲಾಘಿಸಿದ್ದಾರೆ. ಇಂದು ಕರ್ನಾಟಕದ ಕಡತಗಳ ವಿದ್ವಾಂಸರೆಂದು ಎ. ಕೆ. ಶಾಸ್ತ್ರಿ ಪ್ರಸಿದ್ಧರಾಗಿದ್ದಾರೆ. ಕಡತಗಳ ವ್ಯಾಸಂಗ ಸುಲಭ ಗ್ರಾಹ್ಯವಾದುದಲ್ಲ. ಅದಕ್ಕೆ ಆಳವಾದ ಪರಿಶ್ರಮ ಮತ್ತು ಹಳೆಯ ಕನ್ನಡದ ಲಿಪಿಜ್ಞಾನ ಅತ್ಯವಶ್ಯಕ. ಕರ್ನಾಟಕದ ಇತಿಹಾಸ ವಿದ್ವಾಂಸರಾದ ಡಾ. ಎಸ್. ವಿ. ದೇಶಿಕಾಚಾರ್, ಡಾ. ಜಿ. ಎಸ್. ದೀಕ್ಷಿತ, ಕೆಳದಿ ಗುಂಡಾಜೋಯಿಸ್ ಅವರ ಮಾರ್ಗದರ್ಶನ, ಸಹಾಯದಿಂದ ಕಡತಗಳ ವ್ಯಾಸಂಗದತ್ತ ಅನಂತ ಕೃಷ್ಣ ಶಾಸ್ತ್ರಿಗಳಿಗೆ ಆಸಕ್ತಿ ಬೆಳೆಯಿತು. ಕರ್ನಾಟಕದಲ್ಲಿ ಕಡತಗಳ ಬೃಹತ್‌ರಾಶಿ ಇರುವದು ಶೃಂಗೇರಿ ಧರ್ಮಸಂಸ್ಥಾನದಲ್ಲಿ. ಅವುಗಳ ಅಧ್ಯಯನದ ಮೂಲಕ ಶೃಂಗೇರಿಯ ಇತಿಹಾಸಕ್ಕೆ ಬೆಳಕು ಚೆಲ್ಲುವ ಆಕರ ಸಾಮಗ್ರಿಯ ಪರಿಶೀಲನೆ ನಡೆಸಲು ಈ ಮೊದಲು ಯಾರೂ ಪ್ರಯತ್ನಿಸಿರಲಿಲ್ಲ. ಎ. ಕೆ. ಶಾಸ್ತ್ರಿ ಶೃಂಗೇರಿಯ ಕಡತಗಳ ಆಳವಾದ ಅಧ್ಯಯನ ಮಾಡಿ ಇತಿಹಾಸಪ್ರಪಂಚಕ್ಕೆ ಈ ಕೆಳಗಿನ ಗ್ರಂಥಗಳನ್ನು ನೀಡಿದ್ದಾರೆ.

೧. ಶೃಂಗೇರಿಯ ಇತಿಹಾಸ (ಕ.ವಿ ವಿ ಯ ಕಿರಿಯ ಆವೃತ್ತಿ)

೨. Contents of the Kadata's of the Shringeri Math. ಕರ್ನಾಟಕ ರಾಜ್ಯ ಪತ್ರಾಗಾರ, ೧೯೭೪.

೩. A History of Shringeri (Thesis) K.U.D., ೧೯೮೨.

೪. Selections from the Kadata's of the Shringerimath (ಅಪ್ರಕಟಿತ) ಐ.ಸಿ.ಎಚ್.ಆರ್., ೧೯೮೨.

೫. ಶೃಂಗೇರಿ ಧರ್ಮಸಂಸ್ಥಾನ, ಶೃಂಗೇರಿ ಮಠ, ೧೯೮೩.

೬. The records of the Sringerimath relating to Keladi (ಅಪ್ರಕಟಿತ) ಕೆಳದಿ ವಸ್ತುಸಂಗ್ರಹಾಲಯ, ೧೯೯೨.

೭. A catalogue of the records in the Shringerimath ಎರಡು ಸಂಪುಟಗಳು, ರಾಜ್ಯ ಪತ್ರಾಗಾರ, ೧೯೯೫, ೧೯೯೬.

೮. ಶೃಂಗೇರಿ, ರಾಜ್ಯ ಸಂಪನ್ಮೂಲ ಕೇಂದ್ರ, ಮೈಸೂರು, ೧೯೯೫.

೯. ಕನ್ನಡದಲ್ಲಿ ಕಡತಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೭,

ಶೃಂಗೇರಿಯ ಇತಿಹಾಸಕ್ಕೆ ಸಂಬಂಧಿಸಿದಂತೆ ಅಧ್ಯಯನ ಪೂರ್ಣವಾದ ಮಹಾ ಪ್ರಬಂಧವನ್ನೂ ಆಕರ ಸಾಮಗ್ರಿಯಾದ ಕಡತಗಳ ಸಂಪುಟಗಳನ್ನೂ ಸಿದ್ಧಪಡಿಸಿ ಕೊಟ್ಟಿರುವ ಡಾ. ಎ. ಕೆ. ಶಾಸ್ತ್ರಿ ಅವರು ಶೃಂಗೇರಿಯಂಥಹ ಮಹಾಧರ್ಮ ಸಂಸ್ಥಾನದ ಸಾಂಸ್ಕೃತಿಕ ಚರಿತ್ರೆಯನ್ನು ರಚಿಸಿಕೊಟ್ಟಿರುವುದು ಮಹತ್ವಪೂರ್ಣ ವಾಗಿದೆ. ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದ ಪ್ರಚಾರೋಪನ್ಯಾಸ ಮಾಲೆಯಲ್ಲಿ ೧೯೭೩ ರಲ್ಲಿ ಆರಳಿಮುಕ್ಕಿಯಲ್ಲಿ ಎ. ಕೆ. ಶಾಸ್ತ್ರಿ ಅವರು 'ಶೃಂಗೇರಿಯ ಇತಿಹಾಸ' ಕುರಿತು ಉಪನ್ಯಾಸ ಮಾಡಿದರು. ಅದು ಪುಸ್ತಕ ರೂಪದಲ್ಲಿ ಪ್ರಕಟವಾಗಿ ಇದುವರೆಗೆ ಮೂರು ಆವೃತ್ತಿಗಳನ್ನು ಪಡೆದು ಜನಪ್ರಿಯವಾಗಿದೆ. ಗ್ರಂಥದ ಪೀಠಿಕೆ ಯಲ್ಲಿ ಶೃಂಗೇರಿಯ ಐತಿಹಾಸಿಕ, ಧಾರ್ಮಿಕ ಪರಂಪರೆಯನ್ನು ವಿದಿತಪಡಿಸಿದ್ದಾರೆ. ಇತಿಹಾಸ ಸಾಮಗ್ರಿಗಳ ವಿವರವನ್ನು ಒದಗಿಸಿ ಕಡತ ಹಾಗೂ ಇತರ ಶಾಸನ, ಸಾಮಗ್ರಿಗಳತ್ತ ಗಮನ ಸೆಳೆದಿದ್ದಾರೆ. ಶ್ರೀ ಶಂಕರಾಚಾರ್ಯರ ಅದ್ವೈತ ಪೀಠ ಕೇಂದ್ರವಾದ ಶೃಂಗೇರಿಗೆ ತುಂಬ ಮಹತ್ವವಿದೆ. ಶಂಕರಾಚಾರ್ಯರ ಭೂಮ ವ್ಯಕ್ತಿತ್ವವನ್ನು ಪರಿಚಯಿಸಿದ ಲೇಖಕರು ಮುಂದಿನ ಐದು ಭಾಗಗಳಲ್ಲಿ ಶೃಂಗೇರಿ ವಿಜಯನಗರ, ಕೆಳದಿ, ಮರಾಠರು, ಮುಸಲ್ಮಾನ ಅರಸರು, ಮೈಸೂರ ಅರಸರ ಕಾಲದಲ್ಲಿ ಪಡೆದುಕೊಂಡ ಐತಿಹಾಸಿಕ, ಧಾರ್ಮಿಕ ಸಂಬಂಧಗಳನ್ನು ವಿವರವಾಗಿ ಪರಿಚಯಿಸಿದ್ದಾರೆ. ಶೃಂಗೇರಿಯ ದೇವಸ್ಥಾನಗಳು, ಜಗದ್ಗುರುಗಳ ಪರಂಪರೆ ಯನ್ನೂ ವಿವೇಚಿಸಿ ಅದರ ಇತಿಹಾಸ ಮತ್ತು ನಡೆದು ಬಂದ ದಾರಿಯ ಸ್ಥೂಲ ಪರಿಚಯವನ್ನು ಈ ಪುಟ್ಟ ಗ್ರಂಥದಲ್ಲಿ ಎ. ಕೆ ಶಾಸ್ತ್ರಿಯವರು ಮಾಡಿಕೊಟ್ಟಿದ್ದಾರೆ. ಜನಸಾಮಾನ್ಯರು ಶೃಂಗೇರಿ ಇತಿಹಾಸ ತಿಳಿಯಲು ಇದು ಸಹಾಯಕವಾಗಿದೆ.

ಎ. ಕೆ. ಶಾಸ್ತ್ರಿ ಅವರು ಶೃಂಗೇರಿಯಲ್ಲಿಯ ಕಡತಗಳನ್ನು ಪರಿಶೀಲಿಸಿ ಅವು ಗಳನ್ನು ಸಂಪುಟಗಳಲ್ಲಿ ಪ್ರಕಟಿಸಲು ಮಾಡಿದ ಮೊದಲ ಪ್ರಯತ್ನವೇ Contents of the Kadata's of the Shringerimath. ೧೯೭೪ ರಲ್ಲಿ ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಗೆ ಸಾದರ ಪಡಿಸಿದ ಈ ಕೃತಿ ೩೯೯ ಪುಟ (ಬೆರಳಚ್ಚು) ಗಳದ್ದಾಗಿದ್ದು ಅಪ್ರಕಟಿತವಾಗಿದೆ. ನಿರೂಪ ಮತ್ತು ಬಿನ್ನವತ್ತಳೆಗಳಿಗೆ ಸಂಬಂಧಿಸಿದ ೨೦೫ ಕಡತಗಳಲ್ಲಿಯ ಸುಮಾರು ೧೫,೦೦೦ ದಾಖಲೆಗಳ ವಿಷಯಾನುಕ್ರಮಣಿಕೆ ಯನ್ನೊಳಗೊಂಡಿದೆ. ಇದು ಕ್ರಿ ಶ. ೧೪ ರಿಂದ ೧೯ ನೆಯ ಶತಮಾನದವರೆಗಿನ ದಾಖಲೆಗಳ ಕೈಪಿಡಿಯಾಗಿದೆ. ವಿಜಯನಗರ, ಕೆಳದಿ, ಮರಾಠರು, ಮುಸಲ್ಮಾನರು ಮೈಸೂರಿನ ಒಡೆಯರು ಅನೇಕ ಸಂಸ್ಥಾನಿಕರು ಶೃಂಗೇರಿ ಮಠದೊಂದಿಗೆ ಇರಿಸಿ ಕೊಂಡ ಸಂಬಂಧದ ಮೇಲೆ ಬೆಳಕು ಚೆಲ್ಲುವ ಭೂದಾನಪಟ್ಟಿ ಹಾಗೂ ಮಠಕ್ಕೆ ಸಂಬಂಧಿಸಿದ ದಾಖಲೆಗಳನ್ನೊಳಗೊಂಡಿದೆ.

A History of Sringeri ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಡಾ. ಜಿ ಎಸ್. ದೀಕ್ಷಿತ ಅವರ ಮಾರ್ಗದರ್ಶನದಲ್ಲಿ ಡಾ. ಎ. ಕೆ. ಶಾಸ್ತ್ರಿ ಅವರು ಪಿಎಚ್.ಡಿ. ಪದವಿ

ಗಾಗಿ ಸಿದ್ಧಪಡಿಸಿದ ಮಹಾಪ್ರಬಂಧ. ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗವು ಇಂಗ್ಲೀಷಿನಲ್ಲಿರುವ ಈ ಮಹಾಪ್ರಬಂಧವನ್ನು ೧೯೮೨ ರಲ್ಲಿ ಪ್ರಕಟಿಸಿದೆ. ಶೃಂಗೇರಿಯ ಈ ಸಾಂಸ್ಕೃತಿಕ ಇತಿಹಾಸವನ್ನು ವಿದ್ವಜ್ಜನರು ಮುಕ್ತಕಂಠದಿಂದ ಶ್ಲಾಘಿಸಿದ್ದಲ್ಲದೆ ಇದು ಬಹುಬೇಗನೆ ದ್ವಿತೀಯ ಆವೃತ್ತಿ ಕಾಣುತ್ತಿದೆ. ಡಾ. ಎ ಕೆ. ಶಾಸ್ತ್ರಿ ಅವರು ೧೯೮೩ ರಲ್ಲಿ ತಮ್ಮ ಮಹಾಪ್ರಬಂಧವನ್ನು 'ಶೃಂಗೇರಿ ಧರ್ಮಸಂಸ್ಥಾನ' ಶೀರ್ಷಿಕೆಯಲ್ಲಿ ಕನ್ನಡ ರೂಪಾಂತರಗೊಳಿಸಿದ್ದು ಅದನ್ನು ಶೃಂಗೇರಿ ಮಠವು ಪ್ರಕಟಿಸಿದೆ. ೨೪೦ ಪುಟಗಳ ವ್ಯಾಪ್ತಿಯ ಈ ಮಹಾಪ್ರಬಂಧ ಶೃಂಗೇರಿಯ ಭವ್ಯವಾದ ಸಾಂಸ್ಕೃತಿಕ ಚರಿತ್ರೆಯನ್ನು ಅಪೂರ್ವ ಸಂಶೋಧನ ಸಾಮಗ್ರಿಗಳಿಂದ, ಅಮೂಲ್ಯವಾದ ಆಕರ ಸಂಪತ್ತಿನಿಂದ, ಪ್ರೌಢವಾದ ಚಿಂತನಶೀಲತೆಯಿಂದ ವಿದಿತಪಡಿಸುವಲ್ಲಿ ಯಶಸ್ವಿಯಾಗಿದೆ.

ಭಾರತದ ಮಹಾಗುರುಪೀಠವಾದ ಶೃಂಗೇರಿಗೆ ಹನ್ನೆರಡುನೂರು ವರ್ಷಗಳ ಭವ್ಯ ಪರಂಪರೆಯಿದೆ. ಅದ್ವೈತ ಮತದ ಆಚಾರ್ಯರಾದ ಶ್ರೀ ಶಂಕರಾಚಾರ್ಯರು ಸ್ಥಾಪಿಸಿದ ಶೃಂಗೇರಿಯ ಸಾಂಸ್ಕೃತಿಕ ಹಿನ್ನೆಲೆಯನ್ನು ಒದಗಿಸಿದ ಲೇಖಕರು ಅದರ ಇತಿಹಾಸವನ್ನು ಅರಿಯಲು ಇರುವ ಶಿಲಾ, ತಾಮ್ರಶಾಸನ, ಸಾಹಿತ್ಯ, ಸ್ಮಾರಕಗಳ ಜೊತೆಗೆ ಪ್ರಮುಖವಾಗಿ ಕಡತಗಳ ಆಕರವನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಶೃಂಗೇರಿ ಧರ್ಮಸಂಸ್ಥಾನದಲ್ಲಿ ಅಸಂಖ್ಯ ಸಾವಿರ ಕಡತಗಳಿವೆ. ಅವುಗಳ ಆಕರ ಸಾಹಿತ್ಯವನ್ನು ಸಂಗ್ರಹಿಸಿ, ವರ್ಗೀಕರಿಸಿ ತನ್ಮೂಲಕ ಇತಿಹಾಸ, ಸಂಸ್ಕೃತಿಯ ಅಧ್ಯಯನವನ್ನು ನಡೆಸುವ ಆದ್ಯಪ್ರಯತ್ನ ಇಲ್ಲಿ ನೆರವೇರಿದೆ. ಶೃಂಗೇರಿ ವಿವಿಧ ರಾಜಮನೆತನಗಳ ಜೊತೆಗೆ ಪಡೆದುಕೊಂಡ ಸಾಂಸ್ಕೃತಿಕ ಸಂಬಂಧಗಳ ವಿಶ್ಲೇಷಣೆ ಅರ್ಥಪೂರ್ಣ ಅಧ್ಯಯನವಾಗುತ್ತದೆ. ಶೃಂಗೇರಿ ಮತ್ತು ವಿಜಯನಗರ, ಶೃಂಗೇರಿ ಮತ್ತು ಕೆಳದಿ, ಶೃಂಗೇರಿ ಮತ್ತು ಮರಾಠರು, ಶೃಂಗೇರಿ ಮತ್ತು ಮುಸಲ್ಮಾನ ದೊರೆಗಳು, ಶೃಂಗೇರಿ ಮತ್ತು ಮೈಸೂರು ಒಡೆಯರು ಹೀಗೆ ಬೇರೆ ಬೇರೆ ರಾಜ ಮನೆತನಗಳು ಶೃಂಗೇರಿಯ ಜಗದ್ಗುರು ಪೀಠಕ್ಕೆ ಗೌರವಭಾವ ಸೂಚಿಸಿ ಈ ಧರ್ಮ ಸಂಸ್ಥಾನದ ಅಭ್ಯುದಯಕ್ಕೆ ಕಾರಣರಾದ ವಿವರಗಳನ್ನು ಡಾ. ಎ. ಕೆ ಶಾಸ್ತ್ರಿ ಅವರು ತುಂಬ ಸಮರ್ಥವಾಗಿ ವಿವೇಚಿಸಿದ್ದಾರೆ. ಮುಸಲ್ಮಾನ ದೊರೆಗಳು ವಿಶೇಷವಾಗಿ ಹೈದರ ಮತ್ತು ಟೀಪುಸುಲ್ತಾನರು ವಿಜಾಪುರದ ಆದಿಲ್‌ಶಾಹಿಗಳು, ಮೊಘಲರು, ಹೈದರಾಬಾದಿನ ನಿಜಾಮರು ಇವರೆಲ್ಲಾ ತೋರಿದ ಭಕ್ತಿ ಶ್ರದ್ಧೆಗಳು ಭಾರತೀಯ ಸಂಸ್ಕೃತಿಯ ಮುಖ್ಯ ಧಾರೆಯಾದ ಧಾರ್ಮಿಕ ಸಹಿಷ್ಣುತೆ, ಸಮನ್ವಯ ಸೌಹಾರ್ದಗಳ ಪ್ರತೀಕವಾಗಿದೆ. ಇಂದು ಭಾರತದ ಧರ್ಮ ಮತ್ತು ರಾಜಕೀಯ ತುಂಬ ಸೂಕ್ಷ್ಮವಾಗಿದೆ. ಆದರೆ ಡಾ. ಎ. ಕೆ. ಶಾಸ್ತ್ರಿ ಅವರು ಪ್ರಸ್ತುತಪಡಿಸಿದ ಕಡತಗಳ ಆಕರ ಸಾಮಗ್ರಿ ಇತಿಹಾಸದಿಂದ ಧಾರ್ಮಿಕ ಸಮನ್ವಯದ ಆದರ್ಶವನ್ನು ಕಲಿಯಲು ಪ್ರೇರಣೆ ನೀಡುತ್ತದೆ. ಶೃಂಗೇರಿಯ ರಾಜಕೀಯ ಇತಿಹಾಸ ಎಂಟು ಶತಮಾನಗಳ ಸುದೀರ್ಘ

ಕಾಲಮಾನದ ನೆಲೆಯನ್ನು ಒಳಗೊಂಡಿದ್ದನ್ನು ಈ ಮಹಾಪ್ರಬಂಧ ವಿವೇಚಿಸುತ್ತದೆ. ಶೃಂಗೇರಿಯ ಸಾಂಸ್ಕೃತಿಕ ಅಧ್ಯಯನದ ಭಾಗವೂ ತುಂಬ ವಿಚಕ್ಷಣೆಯಿಂದ ಅವಲೋಕಿಸಲ್ಪಟ್ಟಿದೆ. ಶೃಂಗೇರಿ ಧರ್ಮ ಸಂಸ್ಥಾನದ ಆಡಳಿತ ಪದ್ಧತಿ, ಜಗದ್ಗುರುಗಳ ಪರಂಪರೆ, ಧಾರ್ಮಿಕ ಇತಿಹಾಸ, ಆರ್ಥಿಕ ಪರಿಸ್ಥಿತಿ ಹಾಗೂ ಸಾಮಾಜಿಕ ಪರಿಸ್ಥಿತಿಗಳ ಅಧ್ಯಯನವೂ ಮಹಾಪ್ರಬಂಧದ ನವನೀತವಾಗಿದೆ. ಪರಿಶಿಷ್ಟದಲ್ಲಿ ಸಾಹಿತ್ಯಕ್ಕೆ ಶೃಂಗೇರಿ ಜಗದ್ಗುರುಗಳ ಕೊಡುಗೆ, ಶೃಂಗೇರಿ ದೇವಾಲಯಗಳು, ಶೃಂಗೇರಿ ಜಗದ್ಗುರು ಪರಂಪರೆ ಪೀಠಾಧಿಪತ್ಯ ಇವುಗಳ ಸ್ಪಷ್ಟ ವಿವೇಚನೆಯಿದೆ. ನಮ್ಮ ಧರ್ಮ ಸಂಸ್ಥಾನಗಳ ಬಗೆಗೆ ಉಪಲಬ್ಧವಾಗುವ ಆಕರ ಸಾಮಗ್ರಿಗಳನ್ನು ಅವಲೋಕಿಸಿ ಇತಿಹಾಸವನ್ನು ಪುನರ್ರಚಿಸಿಕೊಡುವ ವಿಶಿಷ್ಟ ಪ್ರಯತ್ನಕ್ಕೆ ಮಾದರಿಯಾಗುವಂತೆ ಈ ಮಹಾಪ್ರಬಂಧ ನಿದರ್ಶನವಾಗಿದೆ. ಇಂತಹ ಅಧ್ಯಯನದಲ್ಲಿ ಲೇಖಕ ಡಾ. ಶಾಸ್ತ್ರಿಗಳ ಶ್ರಮ, ಅಪಾರ ಧರ್ಮಶ್ರದ್ಧೆ, ಸಂಶೋಧನ ನಿಷ್ಠೆ, ವಿಪುಲ ಆಕರಸಾಮಗ್ರಿ ಮತ್ತು ಅದರ ಸಮರ್ಥ ಬಳಕೆಯಲ್ಲಿ ತೋರಿಬರುವ ಸೂಕ್ಷ್ಮ ಪ್ರಜ್ಞೆಯೂ ಕಾರ್ಯ ಮಾಡಿರುವುದು ಮುಖ್ಯ ಸಂಗತಿಯಾಗಿದೆ. ಹೀಗೆ ಉಳಿದ ಆಕರ ಸಾಮಗ್ರಿಗಳನ್ನು ಬಳಸಿಕೊಂಡೂ ಕಡತಗಳ ಮೂಲಕ ಶೃಂಗೇರಿ ಇತಿಹಾಸವನ್ನು ರಚಿಸಿಕೊಟ್ಟ ಡಾ. ಎ. ಕೆ. ಶಾಸ್ತ್ರಿ ಅವರು ನಾಡಿನ ಸಾಂಸ್ಕೃತಿಕ ಚರಿತ್ರೆಗೆ ಅಮೂಲ್ಯ ಕೊಡುಗೆ ನೀಡಿದ್ದಾರೆ.

೧೯೮೦-೮೨ರ ಅವಧಿಯಲ್ಲಿ ಡಾ. ಎ. ಕೆ. ಶಾಸ್ತ್ರಿ ಅವರು ಭಾರತೀಯ ಇತಿಹಾಸ ಅನುಸಂಧಾನ ಪರಿಷತ್ತಿನ ಸಂಶೋಧನಾ ಕಾರ್ಯದ ನಿರ್ದೇಶಕರಾಗಿ ಕಾರ್ಯ ನಿರ್ವಹಿಸಿ ಸಾದರ ಪಡಿಸಿದ ಆಕರ ಸಾಹಿತ್ಯ Selection from the Kadata's of the Sringerimath, ೪೮೦ (ಬೆರಳಚ್ಚು) ಪುಟಗಳ ವ್ಯಾಪ್ತಿ ಹೊಂದಿದ್ದು (ಅಪ್ರಕಟಿತ) ೧೨ ಅಧ್ಯಾಯಗಳಲ್ಲಿ ಶೃಂಗೇರಿ ಮಠದ ೨೦೬ ವಿವಿಧ ವಿಷಯಗಳ ಮೇಲೆ ಬೆಳಕು ಚೆಲ್ಲುವ ದಾಖಲೆಗಳನ್ನು ಸಂಗ್ರಹಿಸಿದ್ದಾರೆ. ೧೪ನೆಯ ಶತಮಾನದಿಂದ ೧೯ನೆಯ ಶತಮಾನದವರೆಗಿನ ಶೃಂಗೇರಿ ಧರ್ಮಸಂಸ್ಥಾನದ, ಕರ್ನಾಟಕ ಮತ್ತು ಭಾರತದ ಧಾರ್ಮಿಕ, ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆಯನ್ನು ಅರಿಯಲು ಈ ದಾಖಲೆಗಳು ಆಕರ ಸಾಹಿತ್ಯವಾಗಿ ನೆರವು ನೀಡುತ್ತದೆ.

ಡಾ. ಎ. ಕೆ. ಶಾಸ್ತ್ರಿ ಅವರು ಸಿದ್ಧಪಡಿಸಿದ ಇನ್ನೊಂದು ಅಪ್ರಕಟಿತ ಆಕರ ಸಾಹಿತ್ಯ 'The records of the Sringerimath relating to Keladi'. ೧೯೮೨ರಲ್ಲಿ ರಚಿತವಾದ ಈ ಗ್ರಂಥದಲ್ಲಿ ಕೆಳದಿಗೆ ಸಂಬಂಧಿಸಿದ ೮೪ ದಾಖಲೆಗಳನ್ನೊಳಗೊಂಡಿದೆ. ೧೬ನೆಯ ಶತಮಾನದಿಂದ ೧೮ನೆಯ ಶತಮಾನದವರೆಗಿನ ಕೆಳದಿಯನ್ನಾಳಿದ ಹನ್ನೊಂದು ದೊರೆಗಳ ಕಾಲದ ಈ ದಾಖಲೆಗಳು ಕರ್ನಾಟಕದ ಅಂದಿನ ರಾಜಕೀಯ, ಧಾರ್ಮಿಕ, ಆರ್ಥಿಕ, ಸಾಮಾಜಿಕ ಜೀವನವನ್ನು ಅರಿಯಲು ಉಪಯುಕ್ತವಾಗಿವೆ.

ಕರ್ನಾಟಕ ರಾಜ್ಯ ಪತ್ರಾಗಾರಕ್ಕಾಗಿ ಡಾ. ಎ ಕೆ. ಶಾಸ್ತ್ರಿ ಅವರು 'A Catalogue of the records in the Sringerimath' ಶೀರ್ಷಿಕೆಯ ಎರಡು ಸಂಪುಟಗಳನ್ನು ಸಿದ್ಧಪಡಿಸಿಕೊಟ್ಟಿದ್ದು ಇವು ಪ್ರಕಟಿತ ಆಕರ ಸಾಹಿತ್ಯವಾಗಿವೆ. ಇವು ಮುಖ್ಯವಾಗಿ ಕ್ರಿ ಶ. ೧೩೮೦ ರಿಂದ ೧೯೫೨ ರ ಅವಧಿಯಲ್ಲಿಯ ೧೮ ಅಧ್ಯಾಯಗಳಲ್ಲಿ ೩೨೦ ದಾಖಲೆಗಳನ್ನೊಳಗೊಂಡ ಮೊದಲ ಸಂಪುಟ ಹಾಗೂ ಹದಿನಾಲ್ಕು ಅಧ್ಯಾಯಗಳಲ್ಲಿ ಬಂದ ೩೧೯ ದಾಖಲೆಗಳ ಎರಡನೆಯ ಸಂಪುಟ ವಿವಿಧ ರಾಜಮನೆತನಗಳು ಹಾಗೂ ಶೃಂಗೇರಿಯ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಸಂಬಂಧಗಳನ್ನು ಅರಿಯಲು ನೆರವು ನೀಡುತ್ತವೆ ಡಾ. ಶಾಸ್ತ್ರಿಗಳ ಇಂಗ್ಲೀಷ್ ಪ್ರಸ್ತಾವನೆ ಪ್ರತಿಯೊಂದು ದಾಖಲೆಗಳ ನಿರೂಪಣೆ ವೈಜ್ಞಾನಿಕ ವಿಭಜನೆ ಈ ದಾಖಲೆ ಸಂಪುಟಗಳ ವೈಶಿಷ್ಟ್ಯವಾಗಿದೆ.

ಶೃಂಗೇರಿಯ ಕಡತಗಳನ್ನೇ ಆಧಾರವಾಗಿಟ್ಟುಕೊಂಡು ಕಡತಗಳ ಸ್ವರೂಪ ಮತ್ತು ಐತಿಹಾಸಿಕ ಮಹತ್ವವನ್ನು ವಿವೇಚಿಸುವ 'ಕನ್ನಡದಲ್ಲಿ ಕಡತಗಳು' (೧೯೯೭) ಎಂಬ ಪ್ರತ್ಯೇಕ ಪುಸ್ತಕವನ್ನು ಡಾ. ಶಾಸ್ತ್ರಿಯವರು ಬರೆದಿದ್ದು ಅದನ್ನು ಕನ್ನಡ ಸಾಹಿತ್ಯ ಪರಿಷತ್ತು ತನ್ನ ಉಪೇಕ್ಷಿತ ಸಾಹಿತ್ಯಪ್ರಕಾರ ಮಾಲೆಯಲ್ಲಿ ಪ್ರಕಟಿಸಿದೆ. ಕಡತಗಳ ರೂಪಸ್ವರೂಪವನ್ನು ಮೊಟ್ಟಮೊದಲ ಬಾರಿಗೆ ತಿಳಿಸುವ ಈ ಪುಸ್ತಕವು ಅದು ಬೆಳೆದುಬಂದ ದಾರಿಯನ್ನೂ ಪರಿಚಯಿಸುತ್ತದೆ.

ಶೃಂಗೇರಿ ಚರಿತ್ರೆ ಮತ್ತು ಸಾಂಸ್ಕೃತಿಕ ಮಹತ್ವವನ್ನು ಕುರಿತು ರಾಜ್ಯ ಸಂಪನ್ಮೂಲ ಕೇಂದ್ರದವರ ಜನಪುಸ್ತಕ ಮಾಲೆಯಲ್ಲೂ ಡಾ. ಎ. ಕೆ. ಶಾಸ್ತ್ರಿ ಅವರು ಜನಪ್ರಿಯ ಪುಸ್ತಕ ರಚಿಸಿಕೊಟ್ಟಿದ್ದಾರೆ. ಹೀಗೆ ಶೃಂಗೇರಿಯ ಕಡತಗಳ ದಾಖಲೆಗಳನ್ನು ಮತ್ತು ಸಾಂಸ್ಕೃತಿಕ ಇತಿಹಾಸವನ್ನು ತಲಸ್ಪರ್ಶಿಯಾಗಿ ಡಾ. ಎ. ಕೆ. ಶಾಸ್ತ್ರಿ ಅವರು ನೀಡಿರುವದು ಅವರ ಇತಿಹಾಸ ಸಂಶೋಧನೆಯ ಆಳವಾದ ಶ್ರದ್ಧೆಯ ಪ್ರತೀಕವಾಗಿದೆ.

ಕರ್ನಾಟಕದ ಮಠಪರಂಪರೆಯಲ್ಲಿ ಹನ್ನೆರಡುನೂರು ವರ್ಷಗಳ ಭವ್ಯ ಇತಿಹಾಸವನ್ನು ಪಡೆದ ಶೃಂಗೇರಿಯಂತೆ ಅಷ್ಟೇ ಪ್ರಾಚೀನವಾದ ಉತ್ತರಕನ್ನಡ ಜಿಲ್ಲೆಯ ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನವೂ ಅದ್ವೈತ ಮತದ ಮಹಾ ಗುರುಪೀಠವಾಗಿದೆ. ಶೃಂಗೇರಿಯ ನಂತರ ದೊಡ್ಡ ಕಡತಗಳ ಭಂಡಾರ ಸ್ವರ್ಣವಲ್ಲೀ ಮಠದಲ್ಲಿದ್ದು ಅಲ್ಲಿಯ ಕಡತಗಳ ಬೃಹತ್ ಸಂಪುಟವನ್ನು ಹಲವಾರು ವರ್ಷಗಳ ಶ್ರಮದಿಂದ ಸಿದ್ಧಪಡಿಸಿದವರು ಡಾ. ಎ ಕೆ. ಶಾಸ್ತ್ರಿಗಳು. ಕರ್ನಾಟಕ ರಾಜ್ಯ ಪತ್ರಾಗಾರವು ಪ್ರಕಟಿಸಿದ 'ಸ್ವರ್ಣವಲ್ಲೀ ಮಹಾಸಂಸ್ಥಾನದ ಐತಿಹಾಸಿಕ ದಾಖಲೆಗಳು' (೧೯೯೭) ೭೫೫ ಪುಟಗಳ ವಿಸ್ತಾರವನ್ನೊಳಗೊಂಡ ಮೊದಲ ಸಂಪುಟವಾಗಿದೆ. ಈ ಎಲ್ಲ ದಾಖಲೆಗಳನ್ನು ಕಾಲಾನುಸಾರವಾಗಿ ವರ್ಗೀಕರಿಸಲಾಗಿದೆ. ವಿಜಯನಗರ

ಪೂರ್ವ ಮತ್ತು ವಿಜಯನಗರ ಕಾಲ, ಸ್ವಾದಿ ಅರಸರ ಕಾಲ, (೧೫೩೦-೧೭೬೩), ಟೀಪುಸುಲ್ತಾನರ ಕಾಲ (೧೭೮೨-೧೮೫೭), ಶ್ರೀ ಗಂಗಾಧರೇಂದ್ರ ಸರಸ್ವತಿಗಳ ಕಾಲ (೧೭೭೮-೧೮೧೬), ಶ್ರೀ ಸರ್ವಜ್ಞೇಂದ್ರ ಸರಸ್ವತಿಗಳ ಕಾಲ (೧೮೧೮-೧೮೨೬), ಶ್ರೀ ಗಂಗಾಧರೇಂದ್ರ ಸರಸ್ವತಿಗಳ ಕಾಲ (೧೮೨೭-೧೮೬೪), ಶ್ರೀ ಸರ್ವಜ್ಞೇಂದ್ರ ಸರಸ್ವತಿಗಳ ಕಾಲ (೧೮೬೫-೧೮೮೦), ಶ್ರೀ ಗಂಗಾಧರೇಂದ್ರ ಸರಸ್ವತಿಗಳ ಕಾಲ (೧೮೮೦-೧೯೧೮), ಶ್ರೀ ಸರ್ವಜ್ಞೇಂದ್ರ ಸರಸ್ವತಿಗಳ ಕಾಲ (೧೯೧೯-೧೯೬೦), ಪಾರುಪತ್ಯಗಾರರು (೧೭೯೨-೧೯೦೭), ಶಾನಭೋಗರು ಸರ್ವಾಧಿಕಾರಿಗಳು ಮತ್ತು ಕಾರಭಾರಿಗಳು (೧೮೫೮-೧೯೧೮), ಗೋಕರ್ಣದ ವಿಶ್ವೇಶ್ವರ ದಾಮೋದರ ದೀಕ್ಷಿತರಲ್ಲಿಯ ಸ್ವರ್ಣವಲ್ಲೀ ಮಠಕ್ಕೆ ಸಂಬಂಧಿಸಿದ ದಾಖಲೆಗಳು (೧೯೬೩-೧೯೬೦), ಮಂಜಗುಣಿ ಅಣ್ಣಯ್ಯ ಭಟ್ಟರಲ್ಲಿಯ ಸ್ವರ್ಣವಲ್ಲೀ ಮಠಕ್ಕೆ ಸಂಬಂಧಿಸಿದ ದಾಖಲೆಗಳು (೧೮೪೩-೧೯೮೪) ಎಂಬ ಹದಿನಾಲ್ಕು ಅಧ್ಯಾಯಗಳ ಈ ಬೃಹತ್ ಸಂಪುಟ ವಿಸ್ತಾರವಾದ ಪ್ರಸ್ತಾವನೆಯನ್ನೊಳಗೊಂಡಿದೆ. ಈ ದಾಖಲೆಗಳ ಸ್ವರೂಪ ಮತ್ತು ವಸ್ತು ವ್ಯಾಪ್ತಿ ಅಧ್ಯಯನೀಯವಾಗಿದೆ.

'ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನ' (೧೯೬೨) ಚರಿತ್ರೆಯನ್ನು ಕಡತಗಳು ಹಾಗೂ ಇತರ ಆಕರ ಸಾಮಗ್ರಿಯ ಆಧಾರದಿಂದ ರಚಿಸಿಕೊಟ್ಟಿರುವ ಡಾ. ಎ. ಕೆ. ಶಾಸ್ತ್ರಿ ಅವರು ಸ್ವರ್ಣವಲ್ಲೀ ಧರ್ಮಸಂಸ್ಥಾನದ ಇತಿಹಾಸದ ಮೇಲೆ ಹೊಸ ಬೆಳಕು ಚೆಲ್ಲಿದ್ದಾರೆ. ಕಾಶಿಯಲ್ಲಿ, ಉಜ್ಜಯನಿಯಲ್ಲಿ, ಗೋಕರ್ಣ, ಕಡತೋಕೆ, ಸಹಸ್ರಲಿಂಗಗಳಲ್ಲಿದ್ದ ಶ್ರೀಮಠ ಈಗಿನ ಸ್ವರ್ಣವಲ್ಲಿಗೆ ಬರುವವರೆಗಿನದು ಒಂದು ಘಟ್ಟವಾದರೆ ವಿಜಯನಗರ, ಸ್ವಾದಿ, ಹೈದರ ಟೀಪುಸುಲ್ತಾನರ ಕಾಲ. ಕಂಪನಿ ಸರಕಾರದ ಕಾಲದ ಘಟ್ಟಗಳನ್ನು ಲೇಖಕರು ಸರಿಯಾಗಿ ವಿಭಜಿಸಿ ವಿವೇಚಿಸಿದ್ದಾರೆ. ಶ್ರೀ ಗಂಗಾಧರೇಂದ್ರ ಸರಸ್ವತಿ, ಶ್ರೀ ಸರ್ವಜ್ಞೇಂದ್ರ ಸರಸ್ವತಿ ಮತ್ತು ಈಗಿನ ಗುರುಗಳಾದ ಶ್ರೀ ಗಂಗಾಧರೇಂದ್ರ ಸರಸ್ವತಿಗಳವರೆಗೆ ತತ್ಕಾಲೀನ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಇತಿಹಾಸವನ್ನು ಡಾ. ಶಾಸ್ತ್ರಿ ಅವರು ಅರ್ಥಪೂರ್ಣವಾಗಿ ವಿವರಿಸಿದ್ದಾರೆ. ಒಟ್ಟಿನಲ್ಲಿ ಸ್ವರ್ಣವಲ್ಲೀ ಮಹಾಸಂಸ್ಥಾನದ ಚರಿತ್ರೆಯನ್ನು ಅಧ್ಯಯನದ ಶಿಸ್ತಿಗೆ ಒಳಪಡಿಸಿದ ಶ್ರೇಯಸ್ಸು ಡಾ. ಎ. ಕೆ. ಶಾಸ್ತ್ರಿ ಅವರಿಗೆ ಸಲ್ಲುತ್ತದ

'ಶಿರಸಿ ತಾಲೂಕಿನ ಇತಿಹಾಸ' (೧೯೮೮) ಗ್ರಂಥದಲ್ಲಿ ಡಾ. ಎ. ಕೆ ಶಾಸ್ತ್ರಿ ಅವರು ಇತಿಹಾಸ ಸಾಮಗ್ರಿಗಳ ಸಮೀಕ್ಷೆ, ಕದಂಬ ಪೂರ್ವಕಾಲ, ಬನವಾಸಿ ಕದಂಬರು, ಕದಂಬೋತ್ತರ ಕಾಲ, ವಿಜಯನಗರ ಹಾಗೂ ಸ್ವಾದಿ ಸಾಮ್ರಾಜ್ಯ, ಬುಕಾನನ್ ಪ್ರವಾಸಿಯ ಕಥನ, ಬ್ರಿಟಿಶರ ಆಧಿಪತ್ಯ ಮತ್ತು ಸ್ವಾತಂತ್ರ್ಯ ಸಂಗ್ರಾಮವೆಂಬ ಏಳು ಅಧ್ಯಾಯಗಳಲ್ಲಿ ರಾಜಕೀಯ ಇತಿಹಾಸವನ್ನು ವಿದಿತಪಡಿಸಿದ್ದಲ್ಲದೆ ತಾಲೂಕಿನ ಐತಿಹಾಸಿಕ ಮತ್ತು ಪ್ರೇಕ್ಷಣೀಯ ಸ್ಥಳಗಳನ್ನು ನಗರದ ದೇವಾಲಯಗಳನ್ನು ಕುರಿತು

ಅನೇಕ ಛಾಯಾಚಿತ್ರಗಳೊಂದಿಗೆ ವಿವರಿದ್ದಾರೆ. ಸಂಶೋಧನ ಸಾಮಗ್ರಿಯು ಸಮರ್ಥ ಬಳಕೆ ಕೃತಿಯುದ್ದಕ್ಕೂ ಕಾಣುತ್ತದೆ.

ಡಾ. ಶಾಸ್ತ್ರಿಯವರು ಮಂಜಗುಣಿಯಲ್ಲಿ ಉಪಲಬ್ಧವಾದ 'ಮಂಜಗುಣಿ ಕ್ಷೇತ್ರದ ಚಾರಿತ್ರಿಕ ದಾಖಲೆಗಳು' (೧೯೯೭) ಎಂಬ ಕಡತಗಳ ಸಂಪುಟ ಸಿದ್ಧಪಡಿಸಿದ್ದು ಅದನ್ನು ಕರ್ನಾಟಕ ಪತ್ರಾಗಾರವು ಪ್ರಕಟಿಸಿದೆ. ಎಂಟು ಅಧ್ಯಾಯಗಳಲ್ಲಿ ೨೧೯ ದಾಖಲೆಗಳನ್ನು ಒಳಗೊಂಡ ಈ ಸಂಪುಟದಲ್ಲಿ ಮಂಜಗುಣಿಯ ಚರಿತ್ರೆ, ಧರ್ಮ ಇತಿಹಾಸಕ್ಕೆ ಸಂಬಂಧಿಸಿದ ಸಾಮಗ್ರಿ ನಮಗೆ ಮೊಟ್ಟಮೊದಲಬಾರಿಗೆ ದೊರಕು ವಂತಾಗಿದೆ.

ಡಾ. ಎ. ಕೆ. ಶಾಸ್ತ್ರಿ ಅವರು ಇತಿಹಾಸ ಸಂಶೋಧನೆಯಲ್ಲಿ ತಮ್ಮನ್ನು ಪೂರ್ಣ ವಾಗಿ ತೊಡಗಿಸಿಕೊಂಡಂತೆಯೇ ತಮ್ಮಲ್ಲಿರುವ ಸೃಜನಾತ್ಮಕ ಸಂವೇದನೆಯನ್ನು ಕವಿತೆಗಳ ಮೂಲಕ ಪ್ರಕಟಿಸುತ್ತ ಬಂದಿದ್ದಾರೆ. 'ಉಪಾಖ್ಯಾನ' (೧೯೮೨) ಸಂಗ್ರಹ ದಲ್ಲಿ ೨೨ ಕವಿತೆಗಳಿವೆ. 'ಅನಿಸಿಕೆಗಳು' (೧೯೯೩) ೪೦ ಕವಿತೆಗಳ ಸಂಗ್ರಹವಾಗಿದೆ. ಸಮಕಾಲೀನ ಸಾಮಾಜಿಕ ಜೀವನ, ಪ್ರಕೃತಿ, ಸುತ್ತಲಿನ ವಾಸ್ತವ ಪರಿಸರಕ್ಕೆ ಸಂವೇದಿಯಾದ ಕವಿತೆಗಳನ್ನು ಬರೆದ ಡಾ. ಶಾಸ್ತ್ರಿಗಳು ಭಾವಗೀತೆಯ ಭಾವಲಹರಿಗೆ ಮನಸೋತವರು. ಸಹಜ ಸರಳ ಅಭಿವ್ಯಕ್ತಿ ಅವರ ಕವಿತೆಗಳಲ್ಲಿದೆ.

ಡಾ. ಎ. ಕೆ. ಶಾಸ್ತ್ರಿ ಅವರು ಕನ್ನಡ ಹಾಗೂ ಇಂಗ್ಲೀಷ್‌ಗಳೆರಡರಲ್ಲೂ ಬರೆದ ೬೦ ಕ್ಕೂ ಹೆಚ್ಚು ಸಂಶೋಧನ ಲೇಖನಗಳು ಅವರ ಇತಿಹಾಸ ಸಂಶೋಧನ ಶ್ರದ್ಧೆಯ ಪ್ರತೀಕಗಳಾಗಿವೆ. ಮುಖ್ಯವಾಗಿ ಇವು ಕಡತಗಳ ಅಧ್ಯಯನಕ್ಕೆ ಸಂಬಂಧಿಸಿವೆ. The Karnataka Historical Review Vol. XXVI ಹಾಗೂ 'ಕದಂಬೋತ್ಸವ' ಸ್ಮರಣ ಸಂಪುಟವನ್ನೂ ಸಂಪಾದಿಸಿದ್ದಾರೆ. ಡಾ. ಶಾಸ್ತ್ರಿ ಅವರು ಸಂಪಾದಿಸಿದ 'ಶಿರಸಿ ತಾಲೂಕು ದರ್ಪಣ' ಶಿರಸಿಯ ಇತಿಹಾಸ, ಕಲೆ, ಸಂಸ್ಕೃತಿ ಯನ್ನು ಪ್ರತಿಬಿಂಬಿಸುವ ಲೇಖನಗಳನ್ನೊಳಗೊಂಡಿದೆ.

ಡಾ. ಎ. ಕೆ. ಶಾಸ್ತ್ರಿ ಅವರ ಜೀವನ ಹೋರಾಟಮಯವಾದದ್ದು. ಅವರ ಸಂಶೋಧನೆ ಧರ್ಮಸಂಸ್ಥಾನಗಳ ಸಾಂಸ್ಕೃತಿಕ ಇತಿಹಾಸವನ್ನು ಪುನರ್ರಚಿಸಿಕೊಡುವಲ್ಲಿ ಮಹತ್ತರ ಕಾರ್ಯ ಮಾಡಿದೆ. ಕಡತಗಳ ಆಕರ ಸಾಮಗ್ರಿಯ ಸಂಪುಟಗಳು ಅವರ ಇತಿಹಾಸ ಸಂಶೋಧನ ನಿಷ್ಠೆಯ ಪ್ರತೀಕಗಳಾಗಿವೆ.



# ಇತಿಹಾಸ ಸಂಶೋಧಕ ಡಾ. ಅ. ಕೃ. ಶಾಸ್ತ್ರಿ

---

**ಡಾ. ಪಾ. ರಾ. ಪಂಚಮುಖಿ**

ಡಾ. ಅನಂತ ಕೃಷ್ಣ ಶಾಸ್ತ್ರಿ ನನ್ನ ಬಾಲ್ಯದ ಸ್ನೇಹಿತ. ಪ್ರಾಥಮಿಕ ಶಾಲೆಯಿಂದಲೂ ಕೂಡ ಒಂದೇ ವರ್ಗದಲ್ಲಿ ಒಂದೇ ಶಾಲೆಯಲ್ಲಿ ಕಲಿತು ಬಾಲ್ಯದ ಸವಿಯನ್ನುಂಡು ಈಗ ಅದನ್ನು ಒಟ್ಟಿಗೆ ಮೆಲುಕು ಹಾಕುತ್ತಿದ್ದೇವೆ. ಡಾ. ಶಾಸ್ತ್ರಿ ಇತಿಹಾಸ ವಿಷಯದಲ್ಲಿ ಸಂಶೋಧನೆಯನ್ನು ಮಾಡಿ ಸಾಧನೆ ಮಾಡಿದರು. ನಾನು ಅರ್ಥಶಾಸ್ತ್ರವನ್ನು ಬಳಸಿ ಇತಿಹಾಸ ವಿಷಯಗಳಲ್ಲಿ ಕೃಷಿ ಮಾಡುತ್ತಿರುವವ. ಹೀಗಾಗಿ ನಮ್ಮಿಬ್ಬರ ದೃಷ್ಟಿಕೋನಗಳಲ್ಲಿ ಒಂದು ಪ್ರಕಾರದ ಸಮನ್ವಯವಿದೆ, ಚಿಕ್ಕಂದಿನ ಮೈತ್ರಿ ಹೀಗೆಯೇ ಬೆಳೆದುಕೊಂಡು ಬಂದಿದೆ. ಅವರೊಬ್ಬ ಸ್ವಯಂ ಪ್ರಯತ್ನದಿಂದ ಕೀರ್ತಿಶಿಖರಕ್ಕೇರಿದ ಸಾಧಕ ವ್ಯಕ್ತಿಯೆಂಬುದು ಅವರನ್ನು ಸನಿಹದಿಂದ ನೋಡಿದ ನನಗೆ ಮನದಟ್ಟಾಗಿದೆ, ಚಿಕ್ಕಂದಿನಲ್ಲಿ ಸಾಮಾನ್ಯ ಪರಿಸ್ಥಿತಿಯ ಅನಂತ ತಮ್ಮ ತಂದೆಯ ಬಹುಮುಖ ಪಾಂಡಿತ್ಯ, ದೀಕ್ಷೆಗಳನ್ನು ನೆನಪಿಗೆ ತಂದುಕೊಡಲು ಕನ್ನಡಿಯಂತೆ ಇದ್ದಾರೆ. ಅವರು ತಾಯಿಯ ತ್ಯಾಗ ಜೀವನಕ್ಕೆ ಫಲವಾಗಿದ್ದಾರೆಂದರೆ ಅತಿಶಯೋಕ್ತಿಯಾಗಲಾರದು. Sound mind in a sound body ಎಂಬುದಕ್ಕೆ ಡಾ. ಅನಂತ ನಿದರ್ಶನ. ದೈಹಿಕ ಚಟುವಟಿಕೆಗಳಿಂದ ಮನಸ್ಸನ್ನು ಶ್ರೀಮಂತ ಮಾಡಲು ಪರಿಶ್ರಮಿಸಿದ ವ್ಯಕ್ತಿ ಡಾ. ಅನಂತ. ಮೊದಲಿನಿಂದಲೂ ಎಲ್ಲ ಆಟಗಳಲ್ಲಿಯೂ, ಶರೀರದ ಕಸರತ್ತುಗಳಲ್ಲಿಯೂ ಇವರು ಮೊದಲನೆಯವರು, ಇತಿಹಾಸದಲ್ಲಿ ಅಭಿರುಚಿ ಹೊಂದಿ ಅದನ್ನು ಬೆಳೆಸಿದರು. ಯಾವ ವಿಷಯದಲ್ಲಿ ಕೃಷಿ ಮಾಡಿದರೂ ಹುಲುಸಾದ ಬೆಳೆ ತೆಗೆಯಬಲ್ಲ ಉತ್ತಮ ಬುದ್ಧಿಮಟ್ಟ ಇವರದು. ಯಾವ ದಾರಿಯಾದರೇನು ? ಜಾತಿ ಕುದುರೆಯ ನಡಿಗೆ ಅದರದೇ ಅಲ್ಲವೇ ? ಅಂತೆಯೇ ಡಾ. ಶಾಸ್ತ್ರಿ ಉತ್ತಮ ಕವಿಗಳೂ ಹೌದು, ಪ್ರಬಂಧ ರಚನೆಯಲ್ಲಿಯೂ ತಮ್ಮ ಪ್ರತಿಭೆ ತೋರಿಸಿದರು.

ಇತಿಹಾಸ ಸಂಶೋಧಕನಿಗೆ ಉಳಿದ ಸಂಶೋಧಕರಿಗಿಂತ ಹೆಚ್ಚಿನ ತಾಳ್ಮೆ ಬೇಕೆಂಬುದನ್ನು ನಾನು ಕಣ್ಣಾರೆ ಕಂಡಿದ್ದೇನೆ, ಪ್ರಸಿದ್ಧ ಇತಿಹಾಸ ಸಂಶೋಧಕರ ಮಗನಾದ ಕಾರಣ ಇದು ನನ್ನ ಅನುಭವದಲ್ಲಿ ಹಚ್ಚ ಹಸಿರಾಗಿದೆ. ಈ ತಾಳ್ಮೆ ಶಾಂತವಾಗಿ ವಿಷಯದಲ್ಲಿ ಪ್ರವೇಶಿಸಿ ನಿರಂತರವಾಗಿ ಶ್ರಮಿಸುವದು, ಆಳದ ದೃಷ್ಟಿ,

ಇವೆಲ್ಲಾ ಡಾ. ಶಾಸ್ತ್ರಿಯವರಲ್ಲಿ ಮನೆಮಾಡಿವೆ. ಇತಿಹಾಸ ಸಂಶೋಧನೆಗೆ ಡಾ. ಶಾಸ್ತ್ರಿಯವರ ದೊಡ್ಡ ಕೊಡುಗೆಯೆಂದರೆ ಈ ವರೆಗೆ ಬಹುತೇಕವಾಗಿ ಗಮನ ಸೆಳೆಯದ ಇತಿಹಾಸ ರಚನೆಗೆ ಆಕರವಾದ ಕಡತಗಳ ಉಪಯುಕ್ತತೆಯನ್ನು ತೋರಿಸಿಕೊಟ್ಟದ್ದು, ಅದರಲ್ಲಿಯೂ ಧಾರ್ಮಿಕ ಸಂಸ್ಥೆಗಳಲ್ಲಿಯ ಅಸಂಖ್ಯ ಕಡತಗಳು, ಕಾಗದ ಪತ್ರಗಳು ಆಗಿನ ಕಾಲದ ಇತಿಹಾಸವನ್ನು ತಿಳಿಸಿಕೊಡುವಲ್ಲಿ ಎಷ್ಟು ಉಪಯುಕ್ತವಾದ ಸಾಧನಗಳಾಗಿವೆಯೆಂಬುದನ್ನು ಡಾ. ಶಾಸ್ತ್ರಿಯವರು ಇವುಗಳನ್ನು ಬಳಸಿಕೊಂಡ ರೀತಿಯಿಂದ ಸ್ಪಷ್ಟವಾಗುವದು. ಧಾರ್ಮಿಕ ಸಂಸ್ಥೆಗಳಾದ ಗುಡಿ ಗುಂಡಾರಗಳು ಮಠ ಪಾಠಶಾಲೆಗಳು ಜನತೆಯ ಚಟುವಟಿಕೆಗಳಿಗೆ ಕೇಂದ್ರ ಬಿಂದುಗಳಂತಿರುವವು ಎಂಬುದು ನಿರ್ವಿವಾದ. ಅದರಲ್ಲಿಯೂ ಧಾರ್ಮಿಕ ಮನೋಭಾವದ ಜನರ ಸಮಾಜದಲ್ಲಿ ಇದು ಬಹಳ ಸ್ಪಷ್ಟ. ಹೀಗಿದ್ದಾಗ ಈ ಸಂಸ್ಥೆಯಲ್ಲಿಯ ಪ್ರಾಚೀನ ಕಾಗದ ಪತ್ರಗಳು, ಲೆಕ್ಕ ಪತ್ರಗಳು, ಆಗಿನ ಕಾಲದ ಸಾಮಾಜಿಕ, ರಾಜಕೀಯ, ಆರ್ಥಿಕ ಜನಜೀವನದ ಮೇಲೆ ವಿಶೇಷ ಬೆಳಕು ಚೆಲ್ಲುವವು. ಮಠದ ದಿನಚರಿಗಳಿಂದ, ಮಠದ ಕಾಗದ ಪತ್ರಗಳಿಂದ ಸಮಾಜದ ರೀತಿನೀತಿಗಳ ಬಗ್ಗೆ ಅರಿವು ಮೂಡುವದು. ಈ ರೀತಿಯ ಆಕರಗಳು ನಶಿಸಿ ಹೋಗುವ ಮೊದಲು ಅವುಗಳನ್ನು ಸಂಗ್ರಹಿಸಿ ಪ್ರಕಾಶಿಸಿ ಅವುಗಳನ್ನು ಸಮರ್ಪಕವಾದ ರೀತಿಯಲ್ಲಿ ಉಪಯೋಗಿಸಿಕೊಳ್ಳುವದು ಇತಿಹಾಸದ ಅಭ್ಯಾಸಿಗಳ ಕರ್ತವ್ಯವೆಂಬುದನ್ನು ಡಾ. ಶಾಸ್ತ್ರಿ ತಮ್ಮ ಅನೇಕ ಸಂಶೋಧನೆ ಕೃತಿಗಳಿಂದ ತೋರಿಸಿಕೊಟ್ಟಿದ್ದಾರೆ. ಇತಿಹಾಸವೆಂದರೆ ಕೇವಲ ರಾಜರ, ರಾಜಮನೆತನಗಳ ಆಗುಹೋಗುಗಳ ಬಗ್ಗೆ ವಿವರಣೆ ಕೊಡುವ ಶಾಸ್ತ್ರವಾಗಬಾರದು, ಅದು ಸಾಮಾನ್ಯ ಜನತೆಯ ಜೀವನದ ಮೇಲೆ ಬೆಳಕು ಚಲ್ಲುವ ದೀಪವಾಗಬೇಕು. ಪ್ರಾಚೀನ ಕಾಲದಲ್ಲಿಯೂ ಕೂಡ ಇತಿಹಾಸದ ಈ ಪರಿಕಲ್ಪನೆ ಸ್ಪಷ್ಟವಿದ್ದರೂ ಮಧ್ಯದಲ್ಲಿ ಇದು ಮರೆಯಾಗಿ ಕೇವಲ ರಾಜಮನೆತನಗಳು, ಯುದ್ಧ ಜಗಳಗಳು ಇತ್ಯಾದಿಗಳ ಮೇಲೆಯೇ ಒತ್ತುಕೊಡುವ ಶಾಸ್ತ್ರವಾಗಿ ಇತಿಹಾಸ ಪರಿಣಮಿಸಿದ್ದು ದುರದೃಷ್ಟಕರ. ಇತ್ತೀಚೆಗೆ ಕೆಲ ಸೂಕ್ಷ್ಮ ಇತಿಹಾಸಕಾರರು ಈ ಶಾಸ್ತ್ರದ ಮೂಲಭೂತ ಸ್ವರೂಪದ ಬಗ್ಗೆ ಜಿಜ್ಞಾಸುಗಳ ಗಮನ ಸೆಳೆದಿದ್ದು ನಿಜಕ್ಕೂ ಸ್ತುತ್ಯ. ಈ ದಿಶೆಯಲ್ಲಿ ಡಾ. ಅನಂತ ಕೃಷ್ಣ ಶಾಸ್ತ್ರಿಯವರ ಕಡತಗಳ ಉಪಯುಕ್ತತೆಯನ್ನು ಎತ್ತಿ ತೋರಿಸುವ ಪರಿಶ್ರಮ ಇನ್ನೂ ವಿಶೇಷವಾಗಿ ಹೆಚ್ಚಿ ಅವರಿಗೆ ಇನ್ನೂ ಹೆಚ್ಚಿನ ಯಶಸ್ಸು ಸಿಗಲಿ ಎಂದು ಸ್ನೇಹಪರ ವಂದನೆಗಳೊಂದಿಗೆ ಹಾರೈಸುತ್ತೇನೆ. ಡಾ ಶಾಸ್ತ್ರಿಯವರ ಸಂಶೋಧನೆಯಿಂದ ಈ ಕೆಳಗಿನ ಲಾಭಾಂಶಗಳು ಸ್ಪಷ್ಟವಾಗಿ ಕಂಡುಬರುವವು.

೧. ಇತಿಹಾಸದ ಪುನಾರಚನೆಗೆ ಕಡತಗಳು ಉಪಯುಕ್ತವಾದ ಆಕರಗಳಾಗಿವೆಯೆಂಬುದನ್ನು ಇತಿಹಾಸಜ್ಞರಿಗೆ ಮನದಟ್ಟು ಮಾಡಿಕೊಡುವದು.

೨. ಕಡತಗಳನ್ನು ಇನ್ನು ಮೇಲಾದರೂ ಕೂಡ ಸರಿಯಾಗಿ ಜತನವಾಗಿ ಇಟ್ಟು

ಕೊಳ್ಳುವದು ಅವಶ್ಯವಿದೆ. ಇದರಿಂದ ಮುಂದಿನ ಪೀಳಿಗೆಗೆ ಸಹಾಯವಾಗುವದು.

೩. ಇತಿಹಾಸದ ವ್ಯಾಪ್ತಿಯನ್ನು ವಿಸ್ತರಿಸಿ ಸಾಮಾನ್ಯ ಜನರ ಜೀವನದ ಇತಿಹಾಸದ ಮೇಲೆ ಒತ್ತು ಕೊಡುವದು.

ಅವರ ಅನೇಕ ಸಂಶೋಧನಾ ಪ್ರಬಂಧಗಳು, ಅವರ ಪಿಎಚ್.ಡಿ. ವಿದ್ಯಾರ್ಥಿಗಳ ಪ್ರಬಂಧಗಳು, ಇವೆಲ್ಲವುಗಳಲ್ಲಿ ಈ ಮೇಲಿನ ಅಂಶಗಳೇ ಎದ್ದು ಕಾಣುವವು. ಶಿಸ್ತಿನ ಆದರ್ಶ ಜೀವನದ ಡಾ ಶಾಸ್ತ್ರಿ ಆದರ್ಶ ಪ್ರಾಧ್ಯಾಪಕ, ಆದರ್ಶ ಸಂಶೋಧಕ, ಎಲ್ಲಕ್ಕಿಂತ ಮಿಗಿಲಾಗಿ ಆದರ್ಶ ಮಿತ್ರ. 'ಪ್ರಯತ್ನಮೇಕಂ ಅಗ್ರತೋ ವಿಧಾಯ ಭೂತಿಮಾಪ್ನುಮಃ' ಎಂಬ ಪ್ರಾಚೀನೋಕ್ತಿಯಂತೆ ಅವರ ಪರಿಶ್ರಮಕ್ಕೆ ತಕ್ಕಂತೆ ಅವರಿಗೆ ಹೆಚ್ಚು ಹೆಚ್ಚಿನ ಕೀರ್ತಿ ಲಭಿಸಲಿ ಎಂದು ಆಶಿಸುತ್ತೇನೆ.

# ಬಹುಮುಖ ಪ್ರತಿಭೆಯ ವಿದ್ವಾಂಸ
# ಡಾ. ಎ. ಕೆ. ಶಾಸ್ತ್ರಿ

---

**ಪ್ರೊ. ಪಿ. ಆಯ್. ಹೆಗಡೆ**

ಸುಮಾರು ಮೂವತ್ತೇಳು ವರ್ಷಗಳ ಹಿಂದಿನ ಘಟನೆ– ೧೯೬೧ನೆಯ ಡಿಸೆಂಬರ್ ತಿಂಗಳಿನ ಕೊನೆಯ ವಾರ, ಕರ್ನಾಟಕ ವಿಶ್ವವಿದ್ಯಾಲಯದ ವಿಶಾಲವಾದ ಮೈದಾನದಲ್ಲಿ ಅಂತರ್ ಕಾಲೇಜು ಕ್ರೀಡಾಕೂಟ ನಡೆಯುತ್ತಿದ್ದ ಸಮಯ. ಮೈದಾನದ ಒಂದು ಭಾಗದಲ್ಲಿ ಕೋಲಿನ ಸಹಾಯದಿಂದ ಆಕಾಶದಲ್ಲಿ ಅತ್ಯಂತ ಮೇಲ್ಮಟ್ಟಕ್ಕೆ ನೆಲದಲ್ಲಿ ಊರುಗೋಲನ್ನು ಊರಿ, ಅಂತರಕ್ಕೆ ಜಿಗಿದು, ದಂಡವನ್ನು ವಿಸರ್ಜಿಸಿ, ಚಿತ್ರ ವಿಚಿತ್ರ ರೀತಿಯಲ್ಲಿ ಲಾಗ ಹಾಕುತ್ತಾ ಮರಳಿನಿಂದ ಆವೃತವಾದ ಭೂಮಿಯನ್ನು ಸ್ಪರ್ಶಿಸುತ್ತಿದ್ದರು. ಸಾಧಾರಣ ಎತ್ತರದ ಕ್ರೀಡಾಪಟುವಿಗೆ ಬೇಕಾದ ಮೈಕಟ್ಟುಳ್ಳ ಚಲನೆಯ ಚಾಕಚಕ್ಯತೆಯಿಂದ ತದೇಕಚಿತ್ತನಾಗಿ ಅಂತಿಮ ಗುರಿಯನ್ನೇ ನಿರೀಕ್ಷಿಸುತ್ತಿದ್ದ ಕ್ರೀಡಾಪಟುವೊಬ್ಬನ ಸರದಿ ಬಂದಾಗ ಕ್ರೀಡಾಂಗಣದಲ್ಲಿ ನೆರೆದ ಸಮಸ್ತ ಪ್ರೇಕ್ಷಕರ ಕೈ ಬಾಯಿಗಳಿಗೆ ಕೆಲಸವೋ ಕೆಲಸ. ಎಲ್ಲರೂ ಚಪಾಳೆ ತಟ್ಟಿ ಏಕಕಾಲಕ್ಕೆ ಒದರುವ ಶಬ್ದ ಅದೇ "ಟೋಣ್ಣೆಮನೆ". ನಾನು ಹಿಂದೆಂದೂ ನೋಡದ ವಿಚಿತ್ರ ಶೈಲಿಯ ಆಕರ್ಷಕ ಕ್ರೀಡೆ ಅದಾಗಿತ್ತು. ಪಕ್ಕದಲ್ಲಿದ್ದವರನ್ನು ಕೇಳಿ ತಿಳಿದೆ. ಅದೇ 'ಪೋಲ್‌ವಾಲ್ಟ್' ಎಂದು. ಆ ದೃಶ್ಯ ಇಂದಿಗೂ ನನ್ನ ಸ್ಮೃತಿ ಪಟಲದ ಮೇಲೆ ಅಚ್ಚಳಿಯದೇ ನಿಂತಿದೆ. ಇಂದಿನ ಡಾ. ಎ. ಕೆ. ಶಾಸ್ತ್ರಿಯವರೇ ಆ ಕ್ರೀಡಾಪಟುವಾಗಿದ್ದರು. ಆ ಸ್ಪರ್ಧೆಯಲ್ಲಿ ಮುವತ್ತೇಳು ವರ್ಷಗಳ ಹಿಂದೆ ಅವರು ಹೊಸ ವಿಕ್ರಮ ಸಾಧಿಸಿ, ವಿಶ್ವವಿದ್ಯಾಲಯ 'ಬ್ಲ್ಯೂ' ಆಗಿ ಅಂತರ್ ವಿಶ್ವವಿದ್ಯಾಲಯದ ಕ್ರೀಡಾಕೂಟಕ್ಕೆ ನಾಯಕರಾಗಿದ್ದರು.

ಸಿರಸಿಯ ಎಂ. ಎಂ. ಕಲಾ ಮತ್ತು ವಿಜ್ಞಾನ ಕಾಲೇಜಿನಲ್ಲಿ ಭೌತಶಾಸ್ತ್ರ ವಿಭಾಗದಲ್ಲಿ ಪ್ರಯೋಗಶಾಲಾ ಅಧ್ಯಾಪಕ ಹುದ್ದೆಯಲ್ಲಿ ೧೯೬೪ ಜುಲೈ ೧೦ ರಂದು ಸೇವೆಗೆ ಪ್ರಾರಂಭ ಮಾಡಿದೆ. ಮೊದಲ ದಿನವಾದ ಅಂದು ಇನ್ನುಳಿದ ಪ್ರಾಧ್ಯಾಪಕರೊಂದಿಗೆ ಹೊಸ ವೇಷ ಭೂಷಣಗಳಿಂದೊಡಗೂಡಿದ ಅದೇ ಕ್ರೀಡಾಪಟುವಿನ ಪರಿಚಯ ಮಾಡಿಸಿದರು. ಈಗ ಅವರು ಕೇವಲ ಕ್ರೀಡಾಪಟುವಾಗಿರದೇ ಪ್ರಾಧ್ಯಾಪಕರೂ ಆಗಿದ್ದರು. ಅಂದಿನಿಂದ ಇಂದಿನವರೆಗೆ ಸುಮಾರು ಮೂವತ್ನಾಲ್ಕು ವರ್ಷಗಳ ದೀರ್ಘಕಾಲ ಸಹೋದ್ಯೋಗಿ ಮಿತ್ರರಾಗಿ ನಾನು ಮತ್ತು ಡಾ. ಎ. ಕೆ. ಶಾಸ್ತ್ರಿ

ಯುವರು ಸೇವೆ ಸಲ್ಲಿಸುತ್ತಾ ಬಂದಿದ್ದೇವೆ. ವಿದ್ಯಾರ್ಥಿಗಳಿಗೆ ಅಚ್ಚುಮೆಚ್ಚಿನ ಪ್ರಾಧ್ಯಾಪಕರಾದರೆ, ಸಂಶೋಧಕರಿಗೆ ಸಿದ್ಧಪಾದ ಮಾರ್ಗದರ್ಶಕರು. ಕಾಲೇಜಿನ ಕ್ರೀಡಾಪಟುಗಳಿಗೆ ಆದರ್ಶ ಕ್ರೀಡಾಪಟುಗಳು. ಸಹೋದ್ಯೋಗಿಗಳಿಗೆ ಆತ್ಮೀಯ ಮಿತ್ರರು. ಇಷ್ಟಕ್ಕೂ ಹೆಚ್ಚಾಗಿ ತಾಲೂಕಿನ ಸುತ್ತುಮುತ್ತಲಿನ ಸಾಮಾನ್ಯ ಜನಕ್ಕೆ ಇತ್ತೀಚಿನ ದಿನಗಳಲ್ಲಿ ರಾಷ್ಟ್ರಮಟ್ಟದ ಶ್ರೇಷ್ಠ ಇತಿಹಾಸಕಾರರಾಗಿ ಪರಿಚಿತರಾಗಿದ್ದಾರೆ. ರಾಜ್ಯ ಮತ್ತು ರಾಷ್ಟ್ರಮಟ್ಟದ ಅದೆಷ್ಟೋ ಇತಿಹಾಸ ಸೆಮಿನಾರ್‌ಗಳಲ್ಲಿ ಭಾಗವಹಿಸಿದ್ದರೂ ಇವರ ಖ್ಯಾತಿ ಮತ್ತು ಪ್ರತಿಭೆಯ ಶಿಖರಕ್ಕೆ ಹೊನ್ನ ಕಳಶವೆಂದರೆ, ಮೊನ್ನೆ ತಾನೆ ಇವರ ನೇತೃತ್ವದಲ್ಲಿ ಶ್ರೀಮಂತ್ ಗಂಗಾಧರೇಂದ್ರ ಸರಸ್ವತೀ ಸ್ವಾಮೀಜಿಯವರ ಸಾನ್ನಿಧ್ಯದಲ್ಲಿ ನಡೆದ ರಾಜ್ಯಮಟ್ಟದ ಇತಿಹಾಸ ಸಮ್ಮೇಳನ. ಹೀಗೆ ವೈವಿಧ್ಯತೆಯಿಂದ ಕೂಡಿದ ಅಪರೂಪದ ವ್ಯಕ್ತಿತ್ವ ಮತ್ತು ಶಿಸ್ತುಬದ್ಧ ಜೀವನ ಇವರದಾಗಿದೆ.

ಸುಮಾರು ೨೦ ವರ್ಷಗಳಿಂದ ನಮ್ಮ ಗುರು ಪೀಠವಾದ ಸ್ವರ್ಣವಲ್ಲೀ ಮಠದೊಂದಿಗೆ ನಾನು ನಿಕಟ ಸಂಪರ್ಕ ಹೊಂದಿದ್ದೇನೆ. ೪-೫ ವರ್ಷಗಳ ಹಿಂದೆ ಸ್ವರ್ಣವಲ್ಲೀ ಮಠಕ್ಕೆ ಹೋದಾಗಿನ ಒಂದು ಘಟನೆ. ಅಲ್ಲಿಯೇ ಇದ್ದ ಯಾವುದೋ ವಿದ್ಯಾರ್ಥಿಯೊಬ್ಬ ಪ್ರೊಫೆಸರ್ ಶಾಸ್ತ್ರಿಯವರು ಬಂದ ಸುದ್ದಿಯನ್ನು ಹೇಳಿದ. ನಾನು ಅವರಿದ್ದ ರೂಮಿನ ಕಡೆಗೆ ಧಾವಿಸಿದೆ. ಪ್ರವೇಶ ಮಾಡುತ್ತಿದ್ದಂತೆಯೇ ನಾನು, 'ಶಾಸ್ತ್ರಿಗಳೆ ಇದೇನು' ! ಎಂದೆ. ಅವರು 'ಮಠದ ದಾಖಲೆಗಳ ಪೆಂಡಿಗಳು' ಎಂದರು. 'ಇಷ್ಟೊಂದು ದಾಖಲೆ ! ಇದೆಲ್ಲ ನೋಡಲಿಕ್ಕೆ ಹಲವು ತಿಂಗಳುಗಳೇ ಬೇಕಲ್ಲ !' ಎಂದೆ. ಶಾಸ್ತ್ರಿಗಳು, ಮಹತ್ವದ ದಾಖಲೆಗಳನ್ನು ಆಯ್ಕೆ ಮಾಡಲಿಕ್ಕೆ ಒಂದು ವಾರ ಸಾಕು ಎಂದರು. 'ಎಲ್ಲವನ್ನೂ ಆಮೂಲಾಗ್ರವಾಗಿ ಓದುವದಲ್ಲ. ಮಹತ್ವದ್ದನ್ನು ಆಯ್ಕೆ ಮಾಡಿದರಾಯಿತು' ಎಂದರು. 'ಮಹತ್ವದ ದಾಖಲೆ ಎಂತ ಗೊತ್ತಾಗುವದು ಓದಿದ ಮೇಲಲ್ಲವೆ ?' ನಾನೆಂದೆ. 'ಶೃಂಗೇರಿ ಜಗದ್ಗುರು ಪೀಠದ ಲಕ್ಷಗಟ್ಟಲೆ ದಾಖಲೆಗಳನ್ನು ನೋಡಿದ ನನಗೆ ಯಾವ ತೊಂದರೆಯೂ ಆಗುವದಿಲ್ಲ. ಅದಕ್ಕೆ ಓದಿನ ಅನುಭವವೇ ಮುಖ್ಯ' ಎಂದರು ಶಾಸ್ತ್ರಿಗಳು.

ಮೋಡಿ ಲಿಪಿಯಲ್ಲಿದ್ದ ಒಂದೊಂದು ದಾಖಲೆಯನ್ನು ನೋಡುವುದಕ್ಕೆ ಸಾಮಾನ್ಯ ಜನಕ್ಕೆ ಒಂದೊಂದು ವಾರವೇ ಬೇಕಾಗಬಹುದು. ಆದರೆ ಡಾ. ಎ. ಕೆ. ಶಾಸ್ತ್ರಿಯವರು ಅದನ್ನು ಓದುವದರಲ್ಲಿ ಪಳಗಿದವರಾಗಿದ್ದಾರೆ.

ಡಾ. ಶಾಸ್ತ್ರಿಯವರು ತಮ್ಮ ಪಿಎಚ್. ಡಿ. ಪ್ರಬಂಧವನ್ನು ಬರೆದದ್ದು ಶೃಂಗೇರಿಯ ದಾಖಲೆಗಳ ಆಧಾರದ ಮೇಲೆಯೇ. ಬೇಕಾದ ಮೌಲ್ಯಯುತವಾದ ಮಹತ್ವದ ದಾಖಲೆಗಳನ್ನು ಅತಿ ಶೀಘ್ರವಾಗಿ ಆಯ್ಕೆ ಮಾಡುವ ಕಲೆ ಅವರಿಗೆ ಕರಗತವಾಗಿದೆ. ಕೊಠಡಿಯ ಒಳಗೆ ಕಡತಗಳ ಸಮುದ್ರದಲ್ಲಿ ತೇಲುವವರು

ಅವರಾಗಿದ್ದರು. ಯಾಕೆಂದರೆ ಅವರ ಶರೀರದ ಉಳಿದ ಯಾವ ಭಾಗವೂ ಕಾಣದೆ ಕೇವಲ ತಲೆ ಮತ್ತು ಕೈಗಳ ಚಲನವಲನ ಮಾತ್ರ ಕಾಣುತ್ತಿತ್ತು.

ಸ್ವರ್ಣವಲ್ಲೀ ಮಠದ ದಾಖಲೆಗಳನ್ನು ಕೆದಕಿ ನೋಡಿದ ಅವರು ಹೊಸದೊಂದು ವಿಷಯವನ್ನೇ ಆವಿಷ್ಕಾರ ಮಾಡಿದ್ದಾರೆ. ಭಕ್ತಾದಿಗಳೆಲ್ಲರೂ ನಂಬಿದ್ದು ಈಗಿನ ಪೀಠಸ್ಥರಾದ ಯತಿಗಳು ೪೫ ನೆಯವರು ಎಂದು. ಆದರೆ ದಾಖಲೆಗಳ ಆಧಾರದ ಮೇಲೆ ಶಾಸ್ತ್ರಿಯವರು ಹೇಳುವದು ೫೪ ನೆಯವರೆಂದು. ಒಟ್ಟಿನಲ್ಲಿ ಸ್ವಾಮಿಯವರಿಂದ ಹಿಡಿದು, ಆಡಳಿತ ಮಂಡಳಿಯ ಸದಸ್ಯರು ಮತ್ತು ಭಕ್ತಾದಿಗಳನ್ನು ಈ ವಿಷಯ ಕುರಿತು ಮನವರಿಕೆ ಮಾಡಿಕೊಡುವದು ಬಹು ಕಷ್ಟದ ಕೆಲಸವಾಗಿತ್ತು. ಅನೇಕ ದಶಕಗಳಿಂದ ನಂಬಿದಂತಹ ನಂಬಿಕೆಯನ್ನು ಬದಲಾಯಿಸುವದು ಹೇಗೆ? ಎಂಬ ಪ್ರಶ್ನೆಯನ್ನು ನನ್ನೊಂದಿಗೆ ಅನೇಕ ಸಾರೆ ಕೇಳಿದ್ದರು. ಇತಿಹಾಸಕಾರರಾಗಿ ಸಂಶೋಧಕರಾಗಿ ಶೋಧಿಸಲ್ಪಟ್ಟ ವಿಷಯದಿಂದ ವಿಚಲಿತರಾಗದೇ ಇರುವದು ಅವರ ಸ್ವಭಾವ. ಹಾಗೆಂದು ನಂಬಿದ ಒಂದು ವಿಷಯದ ವಿರುದ್ಧ ಪ್ರತಿಪಾದನೆ ಮಾಡುವದು ಅಷ್ಟು ಸುಲಭವಲ್ಲ. ಈ ಹಂತದಲ್ಲಿ ಶ್ರೀಮಠದ ಭಕ್ತನಾಗಿ, ಅಭಿಮಾನಿಯಾಗಿ ಮತ್ತು ಯತಿಪರಂಪರೆಯನ್ನು ತಿಳಿದುಕೊಳ್ಳುವ ಕುತೂಹಲಿಯಾಗಿ ನಾನೂ ಅವರೊಂದಿಗೆ ಸಹಕರಿಸಿದೆ. ವೈಜ್ಞಾನಿಕ ವಿಧಾನವೊಂದನ್ನು ಅನುಸರಿಸಿ ಪೀಠಸ್ಥರಾದ ಯತಿಗಳು ೫೪ ನೆಯವರು ಎಂದು ಮನವರಿಕೆ ಮಾಡಿಕೊಡುವಲ್ಲಿ ಕೊನೆಗೂ ಯಶಸ್ವಿಯಾದೆವು. ಕನಿಷ್ಠ ಏಳೆಂಟು ಬಾರಿ ನಾನು ಮತ್ತು ಶಾಸ್ತ್ರಿಯವರು ಸೇರಿ ಸ್ವಾಮೀಜಿಯವರೊಂದಿಗೆ ಚರ್ಚಿಸಿದ್ದೆವು. ಅದರಲ್ಲಿಯ ಒಂದು ಮೀಟಿಂಗಿನಲ್ಲಿ ಪ್ರತಿಪಾದನೆ ಎಷ್ಟು ಪ್ರಭಾವಶಾಲಿಯಾಗಿತ್ತೆಂದರೆ, ಸ್ವಾಮೀಜಿಯವರು ನಮ್ಮೊಂದಿಗೆ ಕುಳಿತುಕೊಳ್ಳಲಿಕ್ಕೆ ಇದ್ದ ಸಮಯ ಕೇವಲ ಮೂವತ್ತು ನಿಮಿಷ ಮಾತ್ರ ಎಂದು ಹೇಳಿದವರು ಮೂರು ತಾಸು ಕುಳಿತು ಕೊನೆಯ ಹಂತದ ನಿರ್ಣಯಕ್ಕೆ ಬಂದೇ ಎದ್ದಿದ್ದರು.

ಶಾಸ್ತ್ರಿಯವರ ಜೀವನವೇ ಹೋರಾಟದ ಒಂದು ರಂಗ ಇದ್ದ ಹಾಗೆ. ಬಾಲ್ಯದ ಕಡುಬಡತನದಲ್ಲಿಯೂ ವಿದ್ಯಾಭ್ಯಾಸ ಬಿಡದ ಛಲ, ವಿದ್ಯಾಭ್ಯಾಸದ ಮಧ್ಯದಲ್ಲಿಯೂ ಶ್ರೇಷ್ಠ ಕ್ರೀಡಾಪಟುವಾಗಬೇಕೆಂಬ ಹಟ. ನೌಕರಿಯ ಜೀವನದಲ್ಲಿ ಹಲವು ಏರು-ಪೇರುಗಳನ್ನು, ನೋವು ನಲಿವುಗಳನ್ನು, ಸುಖ-ದುಃಖಗಳನ್ನು ಅನುಭವಿಸಿದ ಪರಿಪಕ್ವವಾದ ವ್ಯಕ್ತಿತ್ವ ಅವರದು. "ಹಗೆತನ, ವೈರತ್ವ ಸಾಧಿಸುವದರಿಂದ ಯಾರೂ ದೊಡ್ಡವರಾಗುವದಿಲ್ಲ", ಎನ್ನುತ್ತಾರೆ ಡಾ. ಶಾಸ್ತ್ರಿಯವರು. ಅನುಭವದ ಪರಿಪಕ್ವತೆಯ ತುತ್ತತುದಿಯಲ್ಲಿ ಭಗವದ್ಗೀತೆಯ ಅಮೃತವಾಣಿ ಹೇಳುವಂತೆ 'ಯೋಗಃ ಕರ್ಮಸು ಕೌಶಲಂ, ಸಮತ್ವಂ ಯೋಗಮುಚ್ಯತೆ' ಎಂಬ ಉದಾತ್ತ ವಿಚಾರದ ಸಾಕ್ಷಾತ್ಕಾರ ಶಾಸ್ತ್ರಿಯವರಿಗೆ ಆಗಿದೆ.

# ನನ್ನ ಮಾವ ಡಾ. ಎ. ಕೆ. ಶಾಸ್ತ್ರಿ

ಶ್ರೀಮತಿ ಲಲಿತಾ ಯು. ಹೆಗಡೆ

ಬಾಲ್ಯದಲ್ಲಿ ಸುಖವೇ ಇರಲಿ, ಕಷ್ಟವೇ ಇರಲಿ, ಎರಡು ಹೊತ್ತು ಹೊಟ್ಟೆ ತುಂಬ ಊಟವನ್ನು ಹಾಕಿ ಕುಣಿದಾಡಲು ಬಿಟ್ಟರೆ ಮಕ್ಕಳಿಗೆ ಬೇರೆ ಜಗತ್ತು ಬೇಡವೇ ಬೇಡ. ಆದರೆ ಪೋಷಿಸುತ್ತಿರುವ ತಾಯಿಗೆ ತನ್ನ ಮಗುವನ್ನು ಸರಿಯಾದ ಒಂದು ಸಂಸ್ಕೃತಿ ಕೊಟ್ಟು ದಾರಿಗೆ ಹಚ್ಚಬೇಕೆಂಬ ಹಂಬಲ ಯಾವಾಗಲೂ ಇದ್ದೇ ಇರುತ್ತದೆ. ತನ್ನ ಮಗು ಎಲ್ಲಿ ದಾರಿತಪ್ಪಿ ಹೋಗುತ್ತದೆಯೊ, ತನ್ನ ಕಂದಮ್ಮಗಳಿಗೆ ಸರಿಯಾದ ಮಾರ್ಗದರ್ಶನವಾಗುವದಿಲ್ಲವೋ ಎಂಬ ಭಯ ಅವಳನ್ನು ಕಾಡುತ್ತಲೇ ಇರುತ್ತದೆ. ಅಂಥ ಒಂದು ಮನಃಸ್ಥಿತಿಯಲ್ಲಿರುವಾಗ ಚಿಕ್ಕ ವಯಸ್ಸಿನಲ್ಲಿ ತನ್ನ ಯಜಮಾನನನ್ನು ಕಳೆದುಕೊಂಡು ತವರುಮನೆ ಬಾಗಿಲಿಗೆ ಹೋಗಲೊಪ್ಪದೇ ಮಕ್ಕಳಿಗೊಂದು ಸರಿಯಾದ ದಾರಿ ಮಾಡೇ ತೀರಬೇಕೆಂಬ ಹಂಬಲ ಅಚಲ ಶ್ರದ್ಧೆಹೊಂದಿದ ನಮ್ಮಜ್ಜಿಗೆ ಹುಟ್ಟಿದ ಕೊನೆಯ ಮಗ ನನ್ನ ಮಾವ ಅನಂತ ಕೃಷ್ಣ ಶಾಸ್ತ್ರಿ. ಅವನು ಎರಡು ವರ್ಷದವನಿರುವಾಗಲೇ ತಂದೆಯನ್ನು ಕಳೆದುಕೊಂಡ. ಆದರೆ ತಾಯಿಯ ಮಾರ್ಗದರ್ಶನದಲ್ಲಿ ಮೊಳಕೆ ಗಿಡವಾಗಿ ಶಾಖೆಗಳೊಡೆದು, ಅದರಲ್ಲಿ ಹೂ, ಕಾಯಿ-ಹಣ್ಣುಗಳಾಗಿ ಈಗ ಅದನ್ನು ಸವಿಯುತ್ತಿರುವಾಗ ಆನಂದ ಅಪರಿಮಿತವಾದುದು.

ನಮ್ಮಜ್ಜಿ ಪತಿಯ ನಿಧನದ ನಂತರ ನೆಂಟರಿಷ್ಟರ ಮಧ್ಯೆ ಎರಡು ಮಕ್ಕಳನ್ನು ಕಟ್ಟಿಕೊಂಡು ಇದ್ದ ಊರಲ್ಲಿ ಜೀವನ ಸಾಗಿಸುವದು ಕಷ್ಟವೆಂದು ಅಂದುಕೊಂಡಾಗ ನೆರವಿಗೆ ಬಂದದ್ದು ಧಾರವಾಡದ 'ವನಿತಾ ಸೇವಾಸಮಾಜ'ವಂತೆ. ಆಗಿನ ಕಾಲದಲ್ಲಿ ಅದು ವಿಧವೆಯರಿಗೆ, ಬಡವರಿಗೆ ಆಶ್ರಯಧಾಮವಾಗಿತ್ತಂತೆ. ಅದನ್ನು ಹುಡುಕಿ ನಮ್ಮಜ್ಜಿ ಎರಡು ಮಕ್ಕಳೊಂದಿಗೆ ಧಾರವಾಡಕ್ಕೆ ಆಗಮಿಸಿ ನನ್ನ ಮಾವನನ್ನು ಕೆ. ಇ. ಬೋರ್ಡ್ಸ್ ಶಾಲೆಗೆ ಸೇರಿಸಿದರಂತೆ. ಮುಂದೆ ಅವರಿಗೆ ಜೀವನದಲ್ಲಿ ಬಹಳ ಕಷ್ಟಗಳನ್ನು ಉಣ್ಣುವ ಸಂದರ್ಭ ಬಂದಾಗ 'ಹೇ ದೇವರೇ ನನಗೆ ನಾಲ್ಕು ಅಕ್ಷರ ಕೂಡ ಬರುವದಿಲ್ಲವಲ್ಲ! ಏನಾದರೂ ಸ್ವಲ್ಪ ಓದಲು ಬರೆಯಲು ಬರುತ್ತಿದ್ದರೆ ನನ್ನ ಜೀವನವನ್ನೇ ಬದಲಿಸಬಹುದಿತ್ತಲ್ಲ! ಎಂದು ಪರಿತಪಿಸುತ್ತಿದ್ದರು. ಅಂಥ ವೇಳೆಗೆ ಅವಳ ಹಿರಿಯ ಮಗಳ ಮಗಳಾದ ನಾನು ಹಳ್ಳಿಯಲ್ಲಿ ನಾಲ್ಕನೆಯ ತರಗತಿ ಶಿಕ್ಷಣ ಮುಗಿಸಿದ್ದೆ. ೧೯೩೫ ರ ವೇಳೆಗೆ ಬಹಳಷ್ಟು ಹಳ್ಳಿಗಳಲ್ಲಿ ನಾಲ್ಕನೆಯ ತರಗತಿ

ಗಿಂತ ಹೆಚ್ಚಿನ ಶಿಕ್ಷಣವಿರಲಿಲ್ಲ. ತಮ್ಮ ಸ್ವಾನುಭವವನ್ನುಂಡ ನಮ್ಮಜ್ಜಿ ಹೆಣ್ಣು ಮಕ್ಕಳಿಗೆ ಸ್ವಲ್ಪವಾದರೂ ಶಿಕ್ಷಣ ಬೇಕೆಂದು ನನ್ನನ್ನು ಒತ್ತಾಯಪೂರ್ವಕವಾಗಿ ಧಾರವಾಡಕ್ಕೆ ಎಳೆತಂದರು. 'ಮಗೂ, ಶಾಲೆ ಕಲಿ, ಕಲಿತರೆ ಮುಂದೆ ಒಳ್ಳೆಯು ದಾಗುತ್ತದೆ' ಎಂದು ನನಗೆ ಉಪದೇಶಿಸಿ ನನ್ನ ಮಾವ ಹೋಗುವ ಶಾಲೆಗೇ ನನ್ನನ್ನೂ ಕಳಿಸಿದರು. ನನ್ನ ಮಾವ ನನಗಿಂತ ಕೇವಲ ಐದು ವರ್ಷ ಮಾತ್ರ ದೊಡ್ಡವನಾಗಿದ್ದ. ನನ್ನ ಮಾವ ಆಗ ಸಣಕಲು ದೇಹದ ಹುಡುಗನಾಗಿದ್ದ. ಅವನು ನನಗೇನು ಬಹಳ ದೊಡ್ಡವನಂತೆ ಕಾಣಲಿಲ್ಲ. ಹೀಗಾಗಿ ಬಾಲ್ಯದ ನನ್ನ ಜೀವನ ಸಾಗಿದ್ದು ನಮ್ಮಜ್ಜಿ ಮನೆಯಲ್ಲಿ, ನನ್ನ ಮಾವನೊಟ್ಟಿಗೆ. ಶಾಲೆಗೆ ಹೋದ ವೇಳೆಯೊಂದನ್ನು ಬಿಟ್ಟರೆ ಉಳಿದ ವೇಳೆ ಮನೆಯಲ್ಲಿ ನಾವಿಬ್ಬರೇ. ನನ್ನ ಚಿಕ್ಕಮ್ಮ ಅದೇ ವರ್ಷ ನೌಕರಿಗಾಗಿ ಮುಂಬೈಗೆ ಹೋಗಿದ್ದರು. ಅಜ್ಜೀ ಇಡೀ ದಿನ ಕೆಲಸಕ್ಕಾಗಿ ಹೊರಗಡೆ ಹೋಗು ತ್ತಿದ್ದರು. ಅವರು ಮಾಡಿದ್ದ ಅಡಿಗೆಯನ್ನು ನಾವಿಬ್ಬರೂ ಹಂಚಿಕೊಂಡು ಊಟ ಮಾಡಿ ಪಾತ್ರೆಗಳನ್ನು ತೊಳೆದು ಸ್ವಚ್ಛವಾಗಿರಿಸುತ್ತಿದ್ದೆವು. ತಿಂಡಿಗಳನ್ನು ಮಾಡಿಟ್ಟರೆ ಅದಕ್ಕಾಗಿ ಪೈಪೋಟಿ ನಡೆದು ಜಗಳಾಟವಾಗಿ, ಹೊಡೆದಾಟವೂ ಆಗುತ್ತಿತ್ತು. ಅಜ್ಜಿ ಬಂದ ಮೇಲೆ ಅದರ ಸವಿವರ ರಿಪೋರ್ಟ ಆಗುತ್ತಿತ್ತು. ಕೊನೆಗೆ ಅಜ್ಜಿ ನನ್ನ ಪಕ್ಷ ವಹಿಸುತ್ತಿದ್ದಳು. ಪಾಪ, ಸಣ್ಣವಳು ಮನೆ ಬಿಟ್ಟು ಬಂದವಳೆಂದು ಪ್ರೀತಿ ತೋರುತ್ತಿದ್ದಳು. ತನ್ನ ಪ್ರೀತಿ ನನ್ನ ಮೇಲೆ ಹಂಚಿ ಹೋಗುತ್ತದೆಯಲ್ಲಾ ಎಂದು ನನ್ನ ಮಾವನಿಗೆ ನನ್ನ ಮೇಲೆ ಕೆಲವು ಸಾರೆ ಕೋಪ ಬರುತ್ತಿತ್ತು. ಅವೆಲ್ಲ ಅಲ್ಪ ಸಮಯ, ಮತ್ತೆ ಶಾಲೆಯ ವಿಚಾರ, ಮಾಸ್ತರ ವಿಚಾರ ಅವರ ಇವರ ಬಗೆಗೆ ಮಾತು ನಡೆಯುತ್ತಿತ್ತು. ನನಗೆ ಪಟ್ಟಣವೇ ಹೊಸದಾದ ಕಾರಣ ಹೊರಗಡೆಯ ನನ್ನ ಗೆಳತಿಯರ ಎಲ್ಲ ವಿವರವನ್ನು ತಂದು ಒಪ್ಪಿಸುತ್ತಿದ್ದೆ. ನನ್ನ ಅವನ ಬಾಲ್ಯ ಜೀವನ ಶ್ರೀಮಂತಿಕೆಯಲ್ಲದಿದ್ದರೂ ಮನಃತೃಪ್ತಿಯಾಗಿ ಸುಖವಾಗಿಯೇ ಸಾಗಿತ್ತು. ಮಾವ ಶಾಲೆಯಲ್ಲಿ ತುಂಬಾ ಜಾಣನಲ್ಲದಿದ್ದರೂ ಪ್ರಥಮ ವರ್ಗದಲ್ಲಿ ಪಾಸಾಗುವ ಹುಡುಗ ನಾಗಿದ್ದ. ಮೆಟ್ರಿಕ್ ಮುಗಿಯುವದರಲ್ಲಿ ಹಿಂದಿ ಪ್ರವೇಶಿಕಾ ಪರೀಕ್ಷೆ ಮುಗಿಸಿದ್ದ, ಡ್ರಾಯಿಂಗ್ ಎರಡು ಪರೀಕ್ಷೆ, ಸಂಸ್ಕೃತ ಪರೀಕ್ಷೆ ಪಾಸಾಗಿದ್ದ. ಅಲ್ಲದೇ ಆಟದಲ್ಲಿ ಅವನಿಗೆ ಆಸಕ್ತಿ ಇದ್ದುದರಿಂದ ಕ್ರೀಡಾಕೂಟದಲ್ಲಿ ಬಹಳಷ್ಟು ಬಹುಮಾನ ತಂದಿದ್ದ. ಆಗಿನ ಜೀವನ ವೈಖರಿ ಸರಳವಾಗಿದ್ದುದರಿಂದ ನಮಗೆ ಅದಿಲ್ಲ, ಇದಿಲ್ಲ, ಅದು ಬೇಕು, ಇದು ಬೇಕು ಎಂದು ಅನಿಸುತ್ತಿರಲಿಲ್ಲ. ಇದ್ದುದರಲ್ಲಿ ಉಂಡು-ತಿಂದು ಸುಖವಾಗಿದ್ದೆವು. ಆದರೆ ನಮ್ಮಜ್ಜಿ ಮಾತ್ರ ನಮಗಾಗಿ ಹೆಣಗಾಡುತ್ತಿದ್ದರು.

ಮೆಟ್ರಿಕ್ ಪರೀಕ್ಷೆಯಲ್ಲಿ ಉತ್ತಮ ತರಗತಿಯಲ್ಲಿ ತೇರ್ಗಡೆಯಾದ ಮಾವ ಧಾರವಾಡದ ಕರ್ನಾಟಕ ಕಾಲೇಜು ಸೇರಿದ. ಕಾಲೇಜು ಸೇರಿದ ಮೇಲೆ ಆಟದ ಗೀಳು ಜೋರಾಯಿತು. ಎತ್ತರ ಜಿಗಿತ, ಉದ್ದ ಜಿಗಿತ, ಕೋಲ್ ಜಿಗಿತ, ರಿಲೆ

ಇವುಗಳಲ್ಲೆಲ್ಲ ತರಬೇತಿ ಪಡೆದುಕೊಂಡು ವಿವಿಧ ಸ್ಪರ್ಧೆಗಳಲ್ಲಿ ಭಾಗವಹಿಸಿ ತಾಲೂಕಾ ಮಟ್ಟ, ಜಿಲ್ಲಾ ಮಟ್ಟ, ರಾಜ್ಯ ಮಟ್ಟದ ಮೆಟ್ಟಲು ಹತ್ತಿ ರಾಷ್ಟ್ರ ಮಟ್ಟಕ್ಕೂ ಮುಟ್ಟಿ ಬಂದ. ಅವನ ಕ್ರೀಡೆಗಳನ್ನು ಧಾರವಾಡದಲ್ಲಿ ನಾನು ನೋಡಲು ಹೋಗುತ್ತಿದ್ದೆ. ಆಗ ನನ್ನ ಮನಸ್ಸಿನಲ್ಲಿರುತ್ತಿದ್ದುದು ಒಂದೇ ವಿಚಾರ. ಅಯ್ಯೋ, ನನ್ನ ಮಾವನೇ ಮೊದಲ ಸ್ಥಾನ ಪಡೆಯಲಿ ಎಂದು. ಮನೆಗೆ ಬಂದ ಮೇಲೆ ಆಟ-ಓಟಗಳ ಬಗೆಗೆ ರಸವತ್ತಾದ ಸುದ್ದಿಗಳಿಂದ ಖುಷಿಯಾಗುತ್ತಿತ್ತು. ಸ್ವಲ್ಪ ಶೀಘ್ರ ಕೋಪಿಯಾದ ನನ್ನ ಮಾವನಿಗೆ ಸಿಟ್ಟು ಕೂಡಲೇ ಬರುತ್ತಿತ್ತು. ನಮ್ಮಜ್ಜ ಒಮ್ಮೊಮ್ಮೆ ಅನ್ನುತ್ತಿದ್ದರು, ಒಬ್ಬರೊಟ್ಟಿಗೆ(ನಮ್ಮಜ್ಜ ಬಹಳ ಸಿಟ್ಟಿನವರಾಗಿದ್ದರಂತೆ) ಜೀವನ ಮುಕ್ತಾಯವಾಯಿತು. ಇನ್ನು ಹೊಸ ವೇಷ ಪ್ರಾರಂಭ. ಆದರೆ ಅದಕ್ಕೆ ಹೆಚ್ಚಿಗೆ ಆಸ್ಪದ ಸಿಗಲಿಲ್ಲ. ತಮ್ಮ ಕೆಲಸ ಮುಗಿಯಿತೆಂಬಂತೆ ಮಾವನ ಶಿಕ್ಷಣ ಮುಗಿದು ಅವನು ನೌಕರಿ ಸೇರಿದಾಗ ಅಜ್ಜಿ ಕಣ್ಣು ಮುಚ್ಚಿದ್ದರು.

ನನ್ನ ಮಾವ ಕಾಲೇಜು ಶಿಕ್ಷಣ ಮುಗಿಸಿ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಎರಡು ವರ್ಷ ಇತಿಹಾಸ ಎಂ ಎ ದಲ್ಲಿ ಒಳ್ಳೆಯ ಶ್ರೇಯಾಂಕ ಪಡೆದುಕೊಂಡನು. ವಿಶ್ವವಿದ್ಯಾಲಯದ ಕ್ರೀಡೆಗಳಲ್ಲಿ ವಿಶೇಷ ಆಸ್ಥೆ ತಳೆದು ಕ. ವಿ. ವಿ ಬ್ಲೂ ಆದ. ಅವನ ಕೋಲ್ ಜಿಗಿತ ರಿಕಾರ್ಡ್ ಎಷ್ಟೋ ವರ್ಷಗಳ ವರೆಗೆ ದಾಖಲೆಯಾಗಿತ್ತು. ಈಗಲೂ ಆಟವೆಂದೊಡನೆ ಅವನಿಗೆ ಬಲು ಖುಶಿ. ಈಗಿನ ಮಕ್ಕಳು ಸಾಕಷ್ಟು ಆಡುವದಿಲ್ಲ ಇಷ್ಟೆಲ್ಲ ಅನುಕೂಲಗಳಿದ್ದರೂ ಕ್ರೀಡೆಯ ಸದುಪಯೋಗ ಮಾಡಿಕೊಳ್ಳುವದಿಲ್ಲವೆಂದು ಅವನ ವಿಷಾದದ ಅನಿಸಿಕೆಯೂ ಆಗಿದೆ. ಕಾಲೇಜು, ವಿಶ್ವವಿದ್ಯಾಲಯದಲ್ಲಿರುವಾಗಲೆಲ್ಲ ಅವನು ಇಡೀ ದೇಶವನ್ನು ಸುತ್ತಿ ಬಂದದ್ದನ್ನು ಇಲ್ಲಿ ಹೇಳಬೇಕು. ಅವನಿಗೆ ಬಂದ ಬಹುಮಾನಿತ ಮೆಡಲ್, ಕಪ್ಪುಗಳು, ಶೀಲ್ಡುಗಳು ಮನೆಯಲ್ಲಿ ತುಂಬಿದ್ದವು. ಅವುಗಳ ವರ್ಣನೆಯೇ ಒಂದು ಖುಶಿಯದಾಗಿತ್ತು. ಮನೆಯಲ್ಲಿದ್ದ ವೇಳೆಯಲ್ಲಿ ಸಾಕಷ್ಟು ಕೆಲಸವನ್ನೂ ಮಾಡುತ್ತಿದ್ದ. ನಾನು ಏಳನೆಯ ತರಗತಿಯಲ್ಲಿ ಅವನು ಪಿ. ಯು. ಸಿ ಯಲ್ಲಿದ್ದಾಗ ನಮ್ಮಜ್ಜಿ ೧ ತಿಂಗಳ ಕಾಶೀಯಾತ್ರೆಗೆ ಹೋದರು. ಆಗ ನಾವಿಬ್ಬರೇ ಮನೆಯನ್ನು ಸಾಗಿಸಿದೆವು. ಮೊದಲಿನಿಂದಲೂ ಅಚ್ಚುಕಟ್ಟಾಗಿ ಕೆಲಸ ಮಾಡುವ ಕಲೆಯನ್ನು ನಮ್ಮಜ್ಜಿ ನಮಗೆ ಕಲಿಸಿದ್ದರು. ನಮ್ಮ ಕೆಲಸ, ಮನೆಗೆಲಸವನ್ನು ನಾವೇ ಮಾಡಿಕೊಳ್ಳುವದು ನಮಗೆ ರೂಢಿಯಾಗಿತ್ತು. ನಮ್ಮ ಮನೆ ಹಂಚನ್ನು ಕೂಡ ತೆಗೆದು ಸ್ವಚ್ಛಮಾಡಿ ಹಚ್ಚಿಕೊಳ್ಳುತ್ತಿದ್ದೆವು. ಇದರಲ್ಲಿ ನಮಗೆ ಬಹಳ ಸಂತೋಷವಾಗುತ್ತಿತ್ತು. ಈಗಲೂ ನನ್ನ ಮಾವ ಮನೆಕಿಟಕಿಗಳಿಗೆ ಬಣ್ಣ ಹಚ್ಚುವದು, ಜಾಳಿಗೆಗಳನ್ನು ಒರೆಸುವದು, ತೋಟದ ಕೆಲಸ ತಪ್ಪದೇ ಮಾಡುತ್ತಾರೆ.

ಎಂ. ಎ ಪರೀಕ್ಷೆಯ ನಂತರ ನನ್ನ ಮಾವ ಬೀದರನಲ್ಲಿ ಇತಿಹಾಸ ಉಪನ್ಯಾಸಕನಾಗಿ ಕೆಲಸ ಸಿಕ್ಕಿತು. ಮುಂದೆ ಒಂದು ವರ್ಷಕ್ಕೆ ಸಿರ್ಸಿಯಲ್ಲಿ ಕಾಲೇಜು ಪ್ರಾರಂಭ

ವಾದಾಗ ನಮ್ಮೂರೆಂಬ ಅಭಿಮಾನದಿಂದ ಇಲ್ಲಿ ಬಂದು ಸೇರಿದ. ಅಲ್ಲಿ ಬಂದ ಸ್ವಲ್ಪ ದಿವಸದಲ್ಲೇ ನಮ್ಮಜ್ಜಿಯು ನಿಧನ ಅವನಿಗೆ ಆಘಾತವಾಯಿತು. ಅವನು ಒಂಟಿಯಾದ, ಇನ್ನೂ ಮದುವೆಯೂ ಆಗಿರಲಿಲ್ಲ. ಜೀವನದಲ್ಲಿ ಅನುಭವವೂ ಇರಲಿಲ್ಲ. ಆಗ ಅವನಿಗೆ ಬೆನ್ನ ಹಿಂದೆ ಬಂದವರು ನನ್ನ ತಾಯಿ-ತಂದೆ ಹಾಗೂ ಚಿಕ್ಕಮ್ಮ. ಕಾಲೇಜಿನ ಜೀವನ ಸುಗಮವಾಗಿಯೇ ಸಾಗಿತ್ತು, ಮುಂದೆರಡು ವರ್ಷಕ್ಕೆ ಮದುವೆಯಾದ ಆ ಕುಟುಂಬ ಮೊದಲಿಂದ ನಮಗೆ ಪರಿಚಯವಿದ್ದು. ನಮ್ಮಜ್ಜಿ ಹೋಗುವಾಗಲೇ ಆ ಹುಡುಗಿಯನ್ನು ಮದುವೆಯಾಗಲು ಹೇಳಿದ್ದರು. ಅವಳೂ ನನ್ನ ಮಾವನ ವಿದ್ಯಾರ್ಥಿನಿಯೇ. ಅನುರೂಪಳಾದ ಹೆಂಡತಿ ಸಿಕ್ಕಳು. ಸಂಸಾರ ಸುಗಮವಾಗಿ ಸಾಗಿತು. ಇತಿಹಾಸ ವಿಷಯವಾಗಿದ್ದರಿಂದ ಅದರಲ್ಲಿ ಮುಂದೆ ಏನಾದರೂ ಸಾಧಿಸಬೇಕೆಂಬ ಸುಪ್ತಮನಸ್ಸು ನಮ್ಮ ಮಾವನಿಗಿತ್ತು. ಪಿಎಚ್.ಡಿ ಗಾಗಿ ತಯಾರಿ ಪ್ರಾರಂಭವಾಯಿತು. ಶ್ರೀ ಶೃಂಗೇರಿ ಪೀಠದ ಇತಿಹಾಸವನ್ನು ಸಂಶೋಧನೆಗಾಗಿ ತೆಗೆದುಕೊಂಡು ಶಾಸ್ತ್ರಿಗಳ ಮನೆತನವನ್ನು ಸಾರ್ಥಕಗೊಳಿಸಿದನು. ಕಾಲೇಜಿನಲ್ಲಿಯೂ ಆದರ್ಶ ಶಿಕ್ಷಕನಾಗಿ ಆಟಪಾಠದ ಬಗ್ಗೆ ಹೆಚ್ಚಿನ ಆಸಕ್ತಿಯನ್ನು ಹುಡುಗರಲ್ಲಿ ಮೂಡಿಸಿ, ಅವರನ್ನು ಹುರಿದುಂಬಿಸಿ ಮಾರ್ಗದರ್ಶನ ಮಾಡಿದ. ಕಾಲೇಜಿನಲ್ಲಿ ನೌಕಾಪಡೆಯ ತರಬೇತಿ ಪ್ರಾರಂಭವಾದಾಗ ಅದಕ್ಕೆ ಅವನೇ ಅಧಿಕಾರಿ ಯಾಗಿದ್ದನ್ನು ಇಲ್ಲಿ ಸ್ಮರಿಸಬಹುದು. ತಮ್ಮ ಜೀವನವನ್ನು ತಾವೇ ರೂಪಿಸಿಕೊಂಡು ಪರಿಶ್ರಮದಿಂದ ಮೇಲೆ ಬಂದವರಿಗೆ ಆತ್ಮವಿಶ್ವಾಸ ಜಾಸ್ತಿಯಾಗಿರುತ್ತದೆ ಎಂದು ನನ್ನ ಅನಿಸಿಕೆ. ಮಾವ ಒಳ್ಳೆಯ ವಾಕ್‌ಪಟುವೂ ಆಗಿದ್ದಾನೆ. ಮಾತನಾಡುವ ವಿಷಯದಲ್ಲಂತೂ ಪರಿಪಕ್ವತೆ ಸಾಧಿಸುವದು ಅವನ ಆದರ್ಶ. ಇತಿಹಾಸದ ಹಳೆಯ ಕಡತಗಳನ್ನು ಚಾಕುವಿನಿಂದ ತಿಕ್ಕಿತಿಕ್ಕಿ ಅದನ್ನು ಕಣ್ಣಲ್ಲಿ ಕಣ್ಣಿಟ್ಟು ಓದುವದು, ಬರೆಯುವದು ಎಲ್ಲ ಅವನ ಕಾರ್ಯವಾಗತೊಡಗಿತು. ಸಂಶೋಧನೆ ಮಾಡುತ್ತ ಹೋದಂತೆಲ್ಲ ಮತ್ತೂ ಮಾಡಬೇಕು, ಇನ್ನೂ ಮಾಡಬೇಕು, ಒಬ್ಬ ಶಿಕ್ಷಕನಾಗಿ ತಾನು ಸಾರ್ಥಕತೆ ಪಡೆಯಬೇಕೆಂಬ ಅಕಾಂಕ್ಷೆ ಬಲವಾಗುತ್ತಹೋಯಿತು. ಅದು ಅವಿರತವಾಗಿ ಸಾಗುತ್ತಲೇ ಇದೆ. ಈ ಮಧ್ಯೆ ಆರೋಗ್ಯ ಸ್ವಲ್ಪ ಕೈಕೊಟ್ಟಿತಾದರೂ ಮನಸ್ಸು ಮುಪ್ಪಾಗಲಿಲ್ಲ. ಶಾಸನಗಳನ್ನು, ಕಡತಗಳನ್ನು ಓದುವದು ಬರೆಯು ವದು ನಿರಂತರವಾಗಿ ಸಾಗಿದೆ. ನನ್ನ ಮಾವ ಕವಿಯೂ ಆಗಿದ್ದಾನೆ. ತಾಯಿಯನ್ನು ನೆನೆದು, ಸೃಷ್ಟಿಯನ್ನು ನೋಡಿ ಹೀಗೆ ಸಹಜವಾಗಿ ಮನದಾಳದಿಂದ ಬಂದ ಅವನ ಕವನಗಳು ಎರಡು ಸಂಗ್ರಹಗಳಲ್ಲಿ ಹೊರಬಂದಿವೆ. ಕಳೆದ ಹತ್ತು ವರ್ಷಗಳ ಈಚೆಗೆ ಅವನು ಮಾಡಿದ ಕೆಲಸ ಅಷ್ಟಿಷ್ಟಲ್ಲ. ಕೆಲವು ಶಿಕ್ಷಕರು ಹೊತ್ತು ಹೋಗ ದೆಂದು ಒದ್ದಾಡುತ್ತಿದ್ದರೆ ಇವನಿಗೆ ದಿನದ ೨೪ ಗಂಟೆ ಸಾಲದು. ಮಾವನ ಶೃಂಗೇರಿಯ ಇತಿಹಾಸದ ಟಿಪ್ಪಣೆ ಹತ್ತು ಪಿಎಚ್.ಡಿ.ಗಳಿಗೆ ಸಾಕಾಗಬಹುದು. ಯಾವುದೇ ಕೆಲಸವನ್ನು ಮುಂದೆ ವಿದ್ಯಾರ್ಥಿಗಳಿಗೆ, ಅದರ ಬಗ್ಗೆ ಕೆಲಸಮಾಡುವವರಿಗೆ

ನೆರವಾಗಬೇಕು ಎಂದು ಉದ್ದೇಶ ಇಟ್ಟುಕೊಂಡು ಮಾಡುವದು ನನ್ನ ಮಾವನ ಕಾರ್ಯವೈಖರಿಯಾಗಿದೆ.

ಬಡತನವನ್ನು ನೆನೆಸುತ್ತ ಕುಳಿತರೆ ಸಿರಿವಂತಿಕೆಯನ್ನು ಸವಿಯಲು ಸಾಧ್ಯವಿಲ್ಲ ವೆಂದು ಮೊನ್ನೆ ಪತ್ರಿಕೆಯಲ್ಲಿ ಓದಿದೆ. ಆದರೆ ನಾನು, ನನ್ನ ಮಾವ ಬಾಲ್ಯದಲ್ಲಿ ಕಳೆದ ಬಡತನದ ನೆನಪುಗಳು ಸುರುಳಿಯಾಗಿ ಬಿಚ್ಚಿಕೊಳ್ಳುತ್ತವೆ. ನಾವಿಬ್ಬರೂ ಸೇರಿದಾಗ ಹಳೆಯ ನೆನಪುಗಳನ್ನು ನೆನೆಸಿಕೊಳ್ಳುತ್ತೇವೆ ಯಾವುದೇ ಮನುಷ್ಯ ನಿರಂತರ ಪ್ರಯತ್ನಶೀಲನಾಗಿದ್ದರೆ ಆತನು ಜೀವನದಲ್ಲಿ ನಿಶ್ಚಿತವಾಗಿಯೂ ಯಶಸ್ಸಿನ ಸೋಪಾನ ವನ್ನು ಏರುವದು ಸಾಧ್ಯವೆಂಬುದಕ್ಕೆ ನನ್ನ ಮಾವನೇ ಉದಾಹರಣೆಯಾಗಿದ್ದಾನೆ. ಆತನು ಬರೆದ ಪುಸ್ತಕಗಳು, ಮಾಡಿದ ಸಂಶೋಧನೆಗಳು, ಭಾಗವಹಿಸಿದ ವಿಚಾರ ಸಂಕಿರಣಗಳು, ಮಾಡಿದ ಉಪನ್ಯಾಸಗಳು ಅಸಂಖ್ಯಾತವಾದವುಗಳು. ತನ್ನ ಸಾಧನೆ ಗಳನ್ನು ಯಾವಾಗಲೂ ನನ್ನ ಮುಂದೆ ನನ್ನ ಮಾವ ಹೇಳುವಾಗ ನನಗೆ ಅಭಿಮಾನ ಉಕ್ಕುತ್ತದೆ. ಅವನ ಬಗ್ಗೆ ಹೆಮ್ಮೆ ಉಂಟಾಗುತ್ತದೆ ತನ್ನ ಅಧ್ಯಾಪಕ ವೃತ್ತಿಯಲ್ಲಿ ಆನಂದ ಪಡುವ ಆತನ ಆದರ್ಶ ನಮಗೆಲ್ಲರಿಗೂ ಸಂತೋಷ ಹೆಚ್ಚಿಸಿದೆ. ಈ ಸಂದರ್ಭದಲ್ಲಿ ನನ್ನ ಅತ್ತೆ ವೀಣಾಳ ಬಗೆಗೂ ಎರಡು ಮಾತು ಹೇಳಬೇಕು. ನನಗಿಂತ ಎರಡು ವರ್ಷ ಚಿಕ್ಕವಳಾಗಿದ್ದರೂ ನಮ್ಮಿಬ್ಬರಲ್ಲಿ ಸ್ನೇಹ, ಪ್ರೀತಿ ತುಂಬಿವೆ. ನಾನು ಮತ್ತು ನನ್ನ ಅತ್ತೆ ವೀಣಾ ನಾಲ್ಕು ವರ್ಷದ ಹಿಂದೆ ಉತ್ತರ ಭಾರತ ಯಾತ್ರೆಗೆ ಹೋಗಿದ್ದೆವು ಮಹಿಳೆಯರಾದ ನಾವು ಪುರುಷರ ನೆರವಿಲ್ಲದೆ ಧೈರ್ಯದಿಂದ ದೇಶದ ನಾನಾ ಭಾಗದ ಪ್ರೇಕ್ಷಣೀಯ ಸ್ಥಳಗಳನ್ನು ನೋಡಿದೆವು. ಎರಡು ವಾರ ಕಳೆಯು ವದರಲ್ಲಿ ನನ್ನ ಮಾವನನ್ನು ನೆನಪಿಸುತ್ತ ಅತ್ತೆ ಚಡಪಡಿಸಿದಳು. ಆಗ ನಾನೇ ಅವಳನ್ನು ಸಮಾಧಾನ ಪಡಿಸಿದೆ. ನನ್ನ ಅತ್ತೆಗೆ ಮಾವನ ಮೇಲೆ ಇರುವ ಪ್ರೀತಿ ಅಗಾಧವಾದದ್ದು. ಅವರ ಆದರ್ಶದಾಂಪತ್ಯ ಜೀವನ ನೋಡಿ ಆನಂದವಾಗುತ್ತದೆ.

ಈಗ ನನ್ನ ಮಾವನಿಗೆ ೫೮ ವರ್ಷ ತುಂಬುತ್ತಲಿದೆ. ಅವನ ಸೇವಾ ನಿವೃತ್ತಿಯ ಸಂದರ್ಭದಲ್ಲಿ ನನ್ನ ತಮ್ಮನಂತಿರುವ ಡಾ. ಜಿ. ಎಂ. ಹೆಗಡೆ ನನ್ನ ಮಾವನ ಬಗೆಗೆ ಒಂದು ಅಭಿನಂದನ ಗ್ರಂಥವನ್ನು ತರುತ್ತಿರುವದನ್ನು ತಿಳಿದು ನನಗೆ ಅಪಾರ ಸಂತೋಷವಾಗಿದೆ. ನನ್ನ ಜೀವನದ ಪಥವನ್ನೇ ಬದಲಿಸಿ ನಾನು ಸುಖಜೀವನ ನಡೆಸುತ್ತಿರುವದಕ್ಕೆ ನನ್ನ ಅಜ್ಜಿ ಮತ್ತು ನನ್ನ ಮಾವನ ಆಶೀರ್ವಾದವೇ ಕಾರಣ ವೆಂದು ನಾನು ನಂಬಿದ್ದೇನೆ. ದೇವರು ನನ್ನ ಮಾವನಿಗೆ ಒಳ್ಳೆಯ ಆರೋಗ್ಯ ಹಾಗೂ ಆಯುಷ್ಯವನ್ನು ಕರುಣಿಸಲೆಂದು ಮನಃಪೂರ್ವಕವಾಗಿ ಹಾರೈಸುತ್ತೇನೆ.



# ಡಾ. ಎ. ಕೆ. ಶಾಸ್ತ್ರಿ ಅವರ ಆಯ್ದ ಲೇಖನಗಳು

# ಉತ್ತರಕನ್ನಡ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ

ಕರಾವಳಿಯಲ್ಲಿ ಭಟಕಳ, ಹೊನ್ನಾವರ, ಕುಮಟಾ, ಅಂಕೋಲಾ, ಕಾರವಾರ ಮತ್ತು ಸಹ್ಯಾದ್ರಿಯ ಮಡಿಲಲ್ಲಿ ಶಿರಸಿ, ಸಿದ್ದಾಪುರ, ಮುಂಡಗೋಡ, ಯಲ್ಲಾಪುರ, ಹಳಿಯಾಳ, ಜೋಯಿಡಾ (ಸುಪಾ). ಹೀಗೆ, ಒಟ್ಟು ೧೧ ತಾಲೂಕುಗಳನ್ನೊಳಗೊಂಡ ಉತ್ತರಕನ್ನಡ ಜಿಲ್ಲೆ, ಕರ್ನಾಟಕದಲ್ಲಿಯೇ ಒಂದು ಅತ್ಯುತ್ತಮ ಸುಂದರ ನಿಸರ್ಗ ತಾಣ. ಜಿಲ್ಲೆಯ ಚರಿತ್ರೆಯೂ ಅತ್ಯಂತ ಪ್ರಾಚೀನವಾಗಿದ್ದು, ಸ್ವಾರಸ್ಯಕರವಾಗಿದೆ. ಶಿಲಾಯುಗದಿಂದ ಪ್ರಾರಂಭಿಸಿ ಇಂದಿನವರೆಗಿನ ಪ್ರಾಚ್ಯಾವಶೇಷಗಳು ಮತ್ತು ವಿವಿಧ ಮಾದರಿಯ ಐತಿಹಾಸಿಕ ಆಕರ ಸಾಮಗ್ರಿಗಳು ಜಿಲ್ಲೆಯಾದ್ಯಂತ ಕಂಡುಬಂದಿವೆ. ಕೋಟೆ-ಕೊತ್ತಲಗಳು, ದೇವಾಲಯಗಳು, ಜೈನ ಬಸದಿಗಳು, ಶಿಲಾಶಾಸನಗಳು, ಮಹಾಸತಿ ಕಲ್ಲುಗಳು ಮತ್ತು ವೀರಗಲ್ಲುಗಳು ಉತ್ತರಕನ್ನಡ ಜಿಲ್ಲೆಯ ಪ್ರಾಚೀನ ಚರಿತ್ರೆಗೆ ಮೂಕಸಾಕ್ಷಿಗಳಾಗಿವೆ. ಶೈವ, ವೈಷ್ಣವ, ಬೌದ್ಧ, ಜೈನ, ವೀರಶೈವ, ಮುಸಲ್ಮಾನ, ಕ್ರೈಸ್ತ ಮುಂತಾದ ಮತಧರ್ಮಿಯರು ನೆಲೆಸಿ, ಸಹಬಾಳ್ವೆ ನಡೆಸಿದ ಭೂಮಿ, ಈ ಉತ್ತರಕನ್ನಡ. ಕರಾವಳಿಯಲ್ಲಿ ತೆಂಗು, ಭತ್ತ, ಮೀನು ಸಮೃದ್ಧ; ಘಟ್ಟದ ಮೇಲಿನ ಪ್ರದೇಶಗಳಲ್ಲಿ ಅಡಿಕೆ, ಯಾಲಕ್ಕಿ, ಮೆಣಸು ಮಹತ್ವದ ಬೆಳೆಗಳು. ಅಡವಿಯ ಸಂಪತ್ತೂ ವಿಪುಲ.

ಬನವಾಸಿಯ ಸಮೀಪವಿರುವ ಕಂತರಾಜಿಯಲ್ಲಿ ಬೃಹತ್ ಶಿಲಾಯುಗಕ್ಕೆ ಸೇರಿದ ಮತ್ತು ಕಾರವಾರ ಮತ್ತು ಗೋಕರ್ಣಗಳ ನಡುವಿನ ಪ್ರದೇಶದಲ್ಲಿ ಮಧ್ಯ ಶಿಲಾಯುಗಕ್ಕೆ ಸೇರಿದ ಅವಶೇಷಗಳು ಲಭ್ಯವಾಗಿರುವದರಿಂದ ಪ್ರಾಗೈತಿಹಾಸಕಾಲದ ಮಾನವರು ಇಲ್ಲಿ ಜೀವನ ನಡೆಸಿದರೆಂಬುದು ಖಚಿತವಾಗುತ್ತದೆ. ಉತ್ತರಕನ್ನಡ ಜಿಲ್ಲೆ 'ಪರಶುರಾಮ ಕ್ಷೇತ್ರ' ಎಂಬುದಾಗಿ ಸ್ಕಂದಪುರಾಣದ ಸಹ್ಯಾದ್ರಿಕಾಂಡದಿಂದ ತಿಳಿದುಬರುತ್ತದೆ. ರಾಮಾಯಣದಲ್ಲಿ ದಂಡಕಾರಣ್ಯ ಮತ್ತು ಮಹಾಭಾರತದಲ್ಲಿ ಗೋಕರ್ಣ ಉಲ್ಲೇಖವಾಗಿವೆ. ಸಾಕ್ಷಾತ್ ವಿಷ್ಣುವೇ ಮಧು ಎಂಬ ರಾಕ್ಷಸನನ್ನು ಬನವಾಸಿ ಸ್ಥಳದಲ್ಲಿ ಸಂಹರಿಸಿದನೆನ್ನಲಾಗಿದೆ. ಯಾಣದಲ್ಲಿ ಮಹಾವಿಷ್ಣು ಮೋಹಿನಿಯ ರೂಪ ಧರಿಸಿ ಭಸ್ಮಾಸುರನನ್ನು ವಧಿಸಿದನಂತೆ. ಒಟ್ಟಿನಲ್ಲಿ ಇವೆಲ್ಲ ಸ್ಥಳದ ಐತಿಹ್ಯಗಳು.

ರಖಿತ (ರಕ್ಷಿತ)ನೆಂಬ ಬೌದ್ಧ ಸನ್ಯಾಸಿಯನ್ನು ಅಶೋಕ ಚಕ್ರವರ್ತಿಯು ಬೌದ್ಧ ಧರ್ಮ ಪ್ರಚಾರ ಮಾಡಲೆಂದು ಬನವಾಸಿಗೆ ಕಳಿಸಿದನು. ಮೌರ್ಯರದೆಂದು ನಂಬಲಾದ ರಂಧ್ರವುಳ್ಳ ಕೆಲವು ನಾಣ್ಯಗಳು ಉತ್ತರಕನ್ನಡ ಜಿಲ್ಲೆಯಲ್ಲಿ ಮೌರ್ಯರ

ಪ್ರಭಾವ ಇತ್ತೆಂಬುದು ಸ್ಪಷ್ಟವಾಗುತ್ತದೆ. ಬನವಾಸಿ ಪ್ರದೇಶದಲ್ಲಿಯ ದೋಣಿ ಗುಡ್ಡ, ಹೂವಿನಕೊಪ್ಪಲು, ಮಾರಿಹಿತ್ತಲು, ಆಸ್ಪತ್ರೆಯ ಆವರಣ, ಕೋಟೆ ಮೊದಲಾದ ಸ್ಥಳಗಳಲ್ಲಿ ನಡೆದ ಉತ್ಖನನಗಳು, ಶಾತವಾಹನರಿಗೆ ಬನವಾಸಿಯ ಮೇಲೆ ನಿಯಂತ್ರಣವಿತ್ತೆಂದು ಖಚಿತ ಪಡಿಸುತ್ತವೆ. ಬನವಾಸಿಯ ಕೋಟೆಯ ಗೋಡೆಗೆ ಹೊಂದಿ ಒಳಭಾಗದಲ್ಲಿ, ತನ್ನ ರಾಣಿಯ ನೆನಪಿಗಾಗಿ ಸ್ಥಾಪಿಸಿದ ಶಿವಶ್ರೀ ಪುಲುಮಾವಿಯ ಶಾಸನದ ಮೇಲ್ಗಡೆ, ಬೌದ್ಧ ಚೈತ್ಯಾಲಯದ ರೇಖಾಚಿತ್ರಣವು ಬೆಳಕಿಗೆ ಬಂದಿದೆ. ಕ್ರಿ .ಶ. ಎರಡನೆಯ ಶತಮಾನದಲ್ಲಿದ್ದ ಗೌತಮೀಪುತ್ರ ಶಾತಕರ್ಣಿಯ ನಾಣ್ಯಗಳೂ ಬನವಾಸಿಯಲ್ಲಿ ಲಭಿಸಿವೆ. ಅದೇ ರೀತಿ, ಶಾತವಾಹನರ ಶಾಖೆಯಾದ ಚುಟು ವಂಶಜರ ನಾಲ್ಕು ಪ್ರಾಕೃತ ಶಾಸನಗಳು ಮತ್ತು ಕೆಲವು ನಾಣ್ಯಗಳು ಚುಟುಗಳು ಆಳಿದರೆಂಬುದನ್ನು ತಿಳಿಸುತ್ತವೆ.

ಕ್ರಿ.ಶ. ೪ ರಿಂದ ೬ ನೆಯ ಶತಮಾನದ ಅವಧಿಯಲ್ಲಿ ಬನವಾಸಿಯನ್ನು ರಾಜಧಾನಿಯನ್ನಾಗಿರಿಸಿಕೊಂಡು ಕದಂಬರು ಕರ್ನಾಟಕದ ಬಹುಭಾಗವನ್ನು ಆಳಿದರು. ಮಯೂರಶರ್ಮನ ಚಂದ್ರವಳ್ಳಿ ಶಾಸನ, ಕಾಕುಸ್ಥ–ಶಾಂತಿವರ್ಮರ ತಾಳಗುಂದ ಶಾಸನ, ರವಿವರ್ಮನ ಗುಡ್ನಾಪುರ ಶಾಸನ, ಮೃಗೇಶವರ್ಮನ ಶಾಸನ, ಮತ್ತಿನ್ನಿತರ ಶಾಸನಗಳು ಮತ್ತು ಪ್ರಾಚ್ಯಾವಶೇಷಗಳು ಕದಂಬ ಸಾಮ್ರಾಜ್ಯದ ವಿಸ್ತಾರ ಮತ್ತು ಕದಂಬರ ಕೊಡುಗೆಗಳನ್ನು ಸ್ಪಷ್ಟಪಡಿಸುತ್ತವೆ. ಕ್ರಿ. ಶ. ೭ ನೆಯ ಶತಮಾನದ ಪೂರ್ವಾರ್ಧದಲ್ಲಿದ್ದ ಬಾದಾಮಿ ಚಾಲುಕ್ಯರ ಇಮ್ಮಡಿ ಪುಲಕೇಶಿಯು ಬನವಾಸಿಯ ಕೋಟೆಯನ್ನು ಮುರಿದು ಕದಂಬರನ್ನು ಸೋಲಿಸಿದನೆಂದು ಐಹೊಳೆ ಶಾಸನದಿಂದ ತಿಳಿದುಬರುತ್ತದೆ. "ತನ್ನ ಸಂಪತ್ತಿನಿಂದಾಗಿ ಬನವಾಸಿಯು ದೇವತೆಗಳ ಪುರವನ್ನೇ ಪ್ರತಿಸ್ಪರ್ಧಿಸುವಂತಿತ್ತು" ಎಂಬುದಾಗಿ ಐಹೊಳೆ ಶಾಸನವು ಬನವಾಸಿಯ ಹೆಗ್ಗಳಿಕೆಯನ್ನು ಸಾರುತ್ತದೆ. ಬನವಾಸಿ ಮಂಡಳವನ್ನು ಆಳಲು, ಇಮ್ಮಡಿ ಪುಲಕೇಶಿಯು ಮಂಗಳೂರಿನ ಆಳುಪರನ್ನು ನೇಮಿಸಿದ್ದನೆಂದು ಕಂಡುಬರುತ್ತದೆ. ಕ್ರಿ.ಶ. ೮ ನೆಯ ಶತಮಾನದಲ್ಲಿ ಬಾದಾಮಿ ಚಾಲುಕ್ಯರನ್ನು ಸೋಲಿಸಿದ ರಾಷ್ಟ್ರಕೂಟರು ಉತ್ತರ ಕನ್ನಡ ಜಿಲ್ಲೆಯ ಮೇಲೆ ತಮ್ಮ ಸಾರ್ವಭೌಮತ್ವವನ್ನು ಸ್ಥಾಪಿಸಿದರು. ರಾಷ್ಟ್ರಕೂಟರ ನಂತರ ಉತ್ತರಕನ್ನಡ ಜಿಲ್ಲೆ ಕಲ್ಯಾಣ ಚಾಲುಕ್ಯರ ಆಧಿಪತ್ಯವನ್ನು ಅಂಗೀಕರಿಸಿತು. ಆಡಳಿತ ನಡೆಸಲು, ಕಲ್ಯಾಣ ಚಾಲುಕ್ಯರು ಜಿಲ್ಲೆಯ ಕೆಲವು ಭಾಗಗಳನ್ನು ಗೋವೆಯ ಕದಂಬರಿಗೆ ಮತ್ತು ಇನ್ನು ಕೆಲವು ಭಾಗಗಳನ್ನು ಹಾನಗಲ್ಲಿನ ಕದಂಬರಿಗೆ ಒಪ್ಪಿಸಿದ್ದರು. ಚಾಲುಕ್ಯವಂಶ ಪುನಃ ಪ್ರತಿಷ್ಠಾಪಕನಾದ ಇಮ್ಮಡಿ ತೈಲಪನ ೧೦ ನೆಯ ಶತಮಾನದ ಮೂರು ಶಾಸನಗಳು ಶಿರಸಿಯ ಸಮೀಪದ ಯಸಳೆಯಲ್ಲಿ ದೊರಕಿವೆ. ಬನವಾಸಿ ಮತ್ತು ಸಿದ್ದಾಪುರ, ಮುಂಡಗೋಡ ಮತ್ತು ಶಿರಸಿ ತಾಲೂಕುಗಳಲ್ಲಿ ದೊರೆತ ಸೇವುಣರ ಅಥವಾ ದೇವಗಿರಿ ಯಾದವರ ಶಾಸನ

ಗಳು ಜಿಲ್ಲೆಯ ಮೇಲೆ ಅವರ ನಿಯಂತ್ರಣವನ್ನೂ ಸೂಚಿಸುತ್ತವೆ. ಆದರೆ ಜಿಲ್ಲೆಯ ಎಷ್ಟು ಪ್ರದೇಶಗಳನ್ನು ಆಳಿದರು ಮತ್ತು ಎಷ್ಟುಕಾಲ ಆಳಿದರೆಂದು ನಿರ್ದಿಷ್ಟವಾಗಿ ಹೇಳಲು ಬರುವಂತಿಲ್ಲ. ಹೊಯ್ಸಳ ವಿಷ್ಣುವರ್ಧನನು ಕ್ರಿ. ಶ. ೧೧೪೦ ರಲ್ಲಿ ಬನವಾಸಿ ೧೨,೦೦೦ ಮತ್ತು ಹಾನಗಲ್ಲ ಪ್ರದೇಶಗಳನ್ನು ಆಕ್ರಮಿಸಿದನು. ಕರಾವಳಿ ಪ್ರದೇಶದಲ್ಲಿ ರಾಜಕುಮಾರ ಮುಮ್ಮಡಿ ಬಲ್ಲಾಳನು ಮಹಾಮಂಡಲೇಶ್ವರನಾಗಿ ಕಾರ್ಯನಿರ್ವಹಿಸುತ್ತಿದ್ದನೆಂದು ಶಿರಾಲಿಯ ಕ್ರಿ.ಶ. ೧೨೭೮ ರ ಶಾಸನ ತಿಳಿಸುತ್ತದೆ. ಒಟ್ಟಿನಲ್ಲಿ, ಸೇವುಣರಿಗಿಂತ ಹೊಯ್ಸಳರು ಉತ್ತರಕನ್ನಡ ಜಿಲ್ಲೆಯ ಬಹುಭಾಗವನ್ನು ಆಳುತ್ತಿದ್ದರೆಂಬುದು ಸತ್ಯ. ಬನವಾಸಿ ಕದಂಬರ ಶಾಖೆಯವರೆಂದು ಹೇಳಿಕೊಳ್ಳುವ ಗೋವೆಯ ಕದಂಬರೂ ೧೧ ಮತ್ತು ೧೨ ನೆಯ ಶತಮಾನಗಳಲ್ಲಿ ಕಾರವಾರ, ಅಂಕೋಲಾ, ಹಳಿಯಾಳ ಮತ್ತು ಯಲ್ಲಾಪುರ ತಾಲೂಕುಗಳಲ್ಲಿ ರಾಜ್ಯಭಾರ ನಡೆಸಿದರು. ಹಳಿಯಾಳ ಕೋಟೆಯ ದೇಗುಲಗಳು ಗೋವೆಯ ಕದಂಬರ ಕಾಲಕ್ಕೆ ಸೇರಿದವುಗಳು. ಬನವಾಸಿ ಕದಂಬರ ಉತ್ತರಾಧಿಕಾರಿಗಳೆಂದು ತಮ್ಮನ್ನು ಕರೆದುಕೊಂಡ ಹಾನಗಲ್ಲಿನ ಕದಂಬರೂ ಕೆಲಕಾಲ ಬನವಾಸಿ ೧೨,೦೦೦ ಪ್ರದೇಶವನ್ನು ಆಳಿದರು. ಅದರಂತೆ ೧೧ ರಿಂದ ೧೪ ನೆಯ ಶತಮಾನದ ಅವಧಿಯಲ್ಲಿ ಚಂದಾವರದ ಕದಂಬರು ಅಂಕೋಲಾ, ಕುಮಟಾ ಮತ್ತು ಹೊನ್ನಾವರ ತಾಲೂಕುಗಳಲ್ಲಿಯ ಪ್ರದೇಶಗಳನ್ನು ಆಳಿದರು. ಕ್ರಿ.ಶ. ೧೩೪೩ ರಲ್ಲಿ ಇಬ್ನಬತೂತಾ ಕಂಡ ಹೊನ್ನಾವರದ ಸುಲ್ತಾನನಾದ ಜಲಾಲುದ್ದೀನ ಪ್ರಾರಂಭದಲ್ಲಿ ದಿಲ್ಲಿಯ ಸುಲ್ತಾನನ ಆಡಳಿತ ನೋಡಿಕೊಳ್ಳಲು ಹೊನ್ನಾವರದಲ್ಲಿದ್ದರೂ, ನಂತರದಲ್ಲಿ ಅವನು ವಿಜಯನಗರದ ಸಾಮ್ರಾಟರಿಗೆ ಸಾಮಂತನಾಗಿದ್ದನೆಂದು ಕಂಡುಬರುತ್ತದೆ. ಕ್ರಿ. ಶ. ೧೩೩೬ ರಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾದ ನಂತರ, ಉತ್ತರಕನ್ನಡದ ಬಹುಭಾಗ ಆ ಸಾಮ್ರಾಜ್ಯದಲ್ಲಿ ವಿಲೀನಗೊಂಡಿತು. ಆದರೆ ಕಾರವಾರ, ಸುಪಾ, ಯಲ್ಲಾಪುರ ಮತ್ತು ಮುಂಡಗೋಡ ತಾಲೂಕುಗಳಲ್ಲಿ ವಿಜಯನಗರದ ಶಾಸನಗಳು ದೊರಕಿಲ್ಲ ಎಂಬುದನ್ನು ಗಮನದಲ್ಲಿಡಬೇಕು. ಹೊನ್ನಾವರವನ್ನು ಜಿಲ್ಲಾಕೇಂದ್ರವನ್ನಾಗಿ ಮಾಡಿ, ವಿಜಯನಗರದ ಸಾಮ್ರಾಟರು ಅಲ್ಲಿ ರಾಜ್ಯಪಾಲರನ್ನು ನಿಯಮಿಸುತ್ತಿದ್ದರು. ಹಾಡುವಳ್ಳಿ ಅಥವಾ ಸಂಗೀತಪುರದ ಸಾಳ್ವರು ೧೫ ಮತ್ತು ೧೬ ನೆಯ ಶತಮಾನಗಳಲ್ಲಿ ಭಟಕಳ ಪ್ರದೇಶವನ್ನು ಆಳಿದರು Queen of Pepper (ಕಾಳುಮೆಣಸಿನ ರಾಣಿ) ಎಂದು ಪೋರ್ತುಗೀಜರಿಂದ ಕರೆಯಲ್ಪಟ್ಟ ಗೇರಸೊಪ್ಪೆಯ ಚೆನ್ನಭೈರಾದೇವಿಯು ಬೈಂದೂರಿನಿಂದ ಹೊನ್ನಾವರದವರೆಗಿನ ಪ್ರದೇಶವನ್ನು ೧೬ ನೆಯ ಶತಮಾನದ ಉತ್ತರಾರ್ಧದಲ್ಲಿ ಆಳಿದಳು. ಪೋರ್ತುಗೀಜರು ಅವಳ ರಾಜ್ಯದ ಮೇಲೆ ಮೊದಲು ದಾಳಿ ನಡೆಸಿದರೂ, ಅವರಿಗೆ ಕಾಳುಮೆಣಸಿನ ಅವಶ್ಯಕತೆ ಇದ್ದುದರಿಂದ, ನಂತರದಲ್ಲಿ ಅವರು ಚೆನ್ನಭೈರಾದೇವಿಯೊಂದಿಗೆ ಸಖ್ಯ ಬೆಳೆಸಿದರು. ೧೬, ೧೭ ಮತ್ತು ೧೮ ನೆಯ ಶತಮಾನಗಳಲ್ಲಿ ಸಿದ್ದಾಪುರ ಮತ್ತು ಸಾಗರ ಪ್ರದೇಶಗಳಲ್ಲಿ ವಿಜಯನಗರದ ಸಾಮಂತ

ರಾದ ಬಿಳಗಿಯ ಒಡೆಯರು ಮತ್ತು ೧೪೦೦ ರಿಂದ ೧೭೬೩ ರ ವರೆಗೆ ಶಿರಸಿ ತಾಲೂಕಿನ ಸೋಂದಾದಲ್ಲಿ ಸೋದೆಯ ನಾಯಕರು ಆಳಿದರು. ಸೋದೆ ಮತ್ತು ಬಿಳಗಿಯ ನಾಯಕರು ಕೆಳದಿಯ ನಾಯಕರಿಂದ ಸೋಲಿಸಲ್ಪಟ್ಟರು. ೧೭ ನೆಯ ಶತಮಾನದ ಕೆಳದಿಯ ವೆಂಕಟಪ್ಪ ಮತ್ತು ಶಿವಪ್ಪನಾಯಕರು ಸಾಕಷ್ಟು ಬಲಿಷ್ಠ ರಾಗಿದ್ದರು. ಸುಮಾರು ಕ್ರಿ.ಶ. ೧೬೦೦ ರಿಂದ ಮುಂದಿನ ೭೨ ವರ್ಷಗಳ ಕಾಲ ಮಿರ್ಜಾನ, ಅಂಕೋಲಾ, ಕಡವಾಡ, ಶಿವೇಶ್ವರ ಪ್ರದೇಶಗಳು ವಿಜಾಪುರದ ಸುಲ್ತಾನರ ವಶದಲ್ಲಿದ್ದವು. ೧೭ ನೆಯ ಶತಮಾನದಲ್ಲಿ ಶಿವಾಜಿ ಮತ್ತು ಸಂಭಾಜಿ ಕಾರವಾರವನ್ನು ಆಕ್ರಮಿಸಿಕೊಂಡರು. ೧೭೨೬ ರಲ್ಲಿ ಮೊದಲನೆಯ ಬಾಜಿರಾಯ ಕಪ್ಪ ವಸೂಲು ಮಾಡಲು ಸೋಂದಾಕ್ಕೆ ಬಂದನು. ೧೭೨೦ ರಲ್ಲಿ ಕಾರವಾರಕ್ಕೆ ಭೆಟ್ಟಿ ನೀಡಿದ ಅಲೆಕ್ಝಾಂಡರ್ ಹ್ಯಾಮಿಲ್ಟನ್, ಮೊಘಲರಿಗೆ ಸೋಂದಾ ಅರಸು ಕಪ್ಪ ಸಲ್ಲಿಸುತ್ತಾರೆಂದು ಉಲ್ಲೇಖಿಸಿದ್ದಾನೆ.

ಭಾರತದಲ್ಲಿ ಐರೋಪ್ಯರ ಪ್ರವೇಶವಾದ ನಂತರ, ಪೋರ್ತುಗೀಜ, ಡಚ್, ಫ್ರೆಂಚ್, ಜರ್ಮನ್ಸ್ ಮತ್ತು ಇಂಗ್ಲಿಷ್‌ರು ಒಂದಿಲ್ಲೊಂದು ರೀತಿಯಲ್ಲಿ ಉತ್ತರ ಕನ್ನಡ ಜಿಲ್ಲೆಯನ್ನು ಪ್ರವೇಶಿಸಿದರು. ೧೬೩೭ ರಲ್ಲಿ ಆಂಗ್ಲರು ಭಟಕಳದಲ್ಲಿ ಫ್ಯಾಕ್ಟರಿ ಸ್ಥಾಪಿಸಿದರು. ಕಾರವಾರ ಮತ್ತು ಹೊನ್ನಾವರಗಳಲ್ಲಿಯೂ ಫ್ಯಾಕ್ಟರಿಗಳು ಸ್ಥಾಪಿತವಾದವು ೧೭೬೩ ರಲ್ಲಿ ಹೈದರಲ್ಲಿಯು ಉತ್ತರಕನ್ನಡವನ್ನು ಕೊಳ್ಳೆಹೊಡೆದ ನಂತರ, ಮುಂದೆ ೧೭೯೯ ರಲ್ಲಿ ಟಿಪ್ಪುವಿನ ಪತನದ ವರೆಗೆ ಉತ್ತರಕನ್ನಡದಲ್ಲಿ ಹೈದರ ಮತ್ತು ಟಿಪ್ಪುರ ನಿಯಂತ್ರಣ ಮುಂದುವರಿಯಿತು. ದಕ್ಷಿಣೋತ್ತರ ಕನ್ನಡಗಳನ್ನು ಒಳಗೊಂಡು ಕೆನರಾ ಜಿಲ್ಲೆಯನ್ನು ಬ್ರಿಟಿಷ್‌ರು ೧೮೦೦ ರಲ್ಲಿ ಮದ್ರಾಸ ಪ್ರಾಂತ್ಯಕ್ಕೆ ಸೇರಿಸಿ ಮನ್ರೊನನ್ನು ಕಲೆಕ್ಟರ ಆಗಿ ನಿಯಮಿಸಿದರು. ಆದರೆ ಅದೇ ವರ್ಷ ಜಿಲ್ಲೆಯನ್ನು ಇಬ್ಭಾಗ ಮಾಡಿ, ಉತ್ತರದ ಭಾಗಕ್ಕೆ ಹೊನ್ನಾವರವನ್ನು ಕೇಂದ್ರವನ್ನಾಗಿ ಮಾಡಲಾಯಿತು. ನವೆಂಬರ್ ೧೮೦೦ ರಲ್ಲಿ ಮನ್ರೊನನ್ನು ಬಳ್ಳಾರಿಯ ಕಲೆಕ್ಟರನಾಗಿ ನೇಮಿಸಲಾಯಿತು. ಹೊಸದಾಗಿ ನಿರ್ಮಿಸಲಾದ ನಾರ್ಥ್‌ಕೆನರಾ ಜಿಲ್ಲೆಗೆ ರಾವೆನ್‌ಶಾ ಕಲೆಕ್ಟರನಾದ. ೧೮೧೭ ರಲ್ಲಿ ಇವೆರಡೂ ಜಿಲ್ಲೆಗಳನ್ನು ಪುನಃ ಒಗ್ಗೂಡಿಸಲಾಯಿತು ಮತ್ತು ಈ ಏಕೀಕೃತ ಜಿಲ್ಲೆ ೧೮೬೨ ರ ವರೆಗೂ ಮುಂದುವರಿದು, ಅದೇ ವರ್ಷ ಉತ್ತರಕನ್ನಡ ಜಿಲ್ಲೆಯನ್ನು ಮುಂಬೈ ಪ್ರಾಂತ್ಯಕ್ಕೆ ಸೇರಿಸಲಾಯಿತು. ಕ್ರಿ.ಶ. ೧೮೦೦-೧೮೦೧ ರಲ್ಲಿ ನಡೆದ 'ದಕ್ಷಿಣ ಹಿಂದುಸ್ಥಾನದ ದಂಗೆಯ ಬಿಸಿಯು ಉತ್ತರಕನ್ನಡ ಜಿಲ್ಲೆಗೂ ತಗುಲಿತು. ಬನವಾಸಿ, ಸೋಂದಾ ಮತ್ತು ಅಂಕೋಲಾಗಳಲ್ಲಿ ದಂಗೆಗಳಾದವು. ೧೮೫೭ ರಲ್ಲಿ ನಡೆದ ಸಿಪಾಯಿ ದಂಗೆಯ ಸಮಯದಲ್ಲೂ ಉತ್ತರಕನ್ನಡ ಜಿಲ್ಲೆ ದಂಗೆಗೆ ಸ್ಪಂದಿಸಿತು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಉತ್ತರಕನ್ನಡ ಜಿಲ್ಲೆಯ ಜನರು ನಿರ್ವಹಿಸಿದ ಪಾತ್ರ ಚಿರಸ್ಮರಣೀಯವಾದುದು.

ಸ್ವದೇಶಿ ಚಳುವಳಿ, ಹೋಮ್‌ರೂಲ್ ಲೀಗ್, ಅಸಹಕಾರ ಚಳುವಳಿ, ಜಂಗಲ್ ಸತ್ಯಾಗ್ರಹ, ಉಪ್ಪಿನ ಸತ್ಯಾಗ್ರಹ, ಕರನಿರಾಕರಣ ಚಳುವಳಿ, ಚಲೇಜಾವ್ ಚಳುವಳಿ ಮುಂತಾದ ಸ್ವಾತಂತ್ರ್ಯ ಸಂಗ್ರಾಮದ ಅನೇಕ ಘಟ್ಟಗಳಲ್ಲಿ ಜಿಲ್ಲೆಯ ಜನರ ತ್ಯಾಗ ಮತ್ತು ಬಲಿದಾನಗಳು ಸ್ವಾತಂತ್ರ್ಯ ಸಂಗ್ರಾಮಕ್ಕೆ ಹೊಸ ತಿರುವು ನೀಡಿದವು. ೧೯೪೭ ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ದೊರೆತ ನಂತರವೂ, ಅಂದರೆ ೧೯೫೬ ರಲ್ಲಿ ಮೈಸೂರು ರಾಜ್ಯ ಅಸ್ತಿತ್ವದಲ್ಲಿ ಬರುವವರೆಗೂ ಉತ್ತರಕನ್ನಡ ಮುಂಬೈ ಪ್ರಾಂತ್ಯದಲ್ಲೇ ಮುಂದುವರಿಯಿತು. ೧೯೫೬ ರ ನವೆಂಬರ್ ೧ ರಂದು ಮುಂಬೈ ಪ್ರಾಂತ್ಯದ ಧಾರವಾಡ, ವಿಜಾಪುರ, ಬೆಳಗಾವಿ ಮತ್ತು ಉತ್ತರಕನ್ನಡ ಜಿಲ್ಲೆಗಳನ್ನು ಮೈಸೂರು ರಾಜ್ಯದಲ್ಲಿ ವಿಲೀನಗೊಳಿಸಲಾಯಿತು. ಇದು ಉತ್ತರಕನ್ನಡ ಜಿಲ್ಲೆಯ ರಾಜಕೀಯದ ಪೂರ್ವ ಚರಿತ್ರೆ.

ಬನವಾಸಿ, ರಾಯಪಟ್ಟಣ, ಹಳಿಯಾಳ, ಸಾಂಬ್ರಾಣಿ, ಮುರ್ಡೇಶ್ವರ, ಮಿರ್ಜಾನ, ಹೊನ್ನಾವರ, ಚಂದಾವರ, ಅಂಕೋಲಾ ಮತ್ತು ಬಸವರಾಜದುರ್ಗ ಗಳಲ್ಲಿಯ ಕೋಟೆಯ ಅವಶೇಷಗಳು, ಬನವಾಸಿಯ ಸುತ್ತಮುತ್ತಲಿರುವ ಶಾತವಾಹನ ಮತ್ತು ಕದಂಬ ದೇವಾಲಯಗಳು, ಕಲ್ಯಾಣ ಚಾಲುಕ್ಯ ಶೈಲಿಯ ಗೋಕರ್ಣ, ಮುರ್ಡೇಶ್ವರ, ಧಾರೇಶ್ವರ, ಗುಣವಂತೆ ಮತ್ತು ಸಜ್ಜೇಶ್ವರದ ದೇಗುಲಗಳು, ಸೋಂದಾ, ಹುಲೇಕಲ್, ಅಣಲಗಾರ, ಭಟಕಳ, ಸೋಮಸಾಗರ, ಮಂಜುಗುಣಿ, ಬಕ್ಕಳ, ವೆಂಕಟಾಪುರ ಮುಂತಾದ ಸ್ಥಳಗಳಲ್ಲಿಯ ವಿಜಯನಗರ ಕಾಲದ ಬಸದಿ ಮತ್ತು ದೇಗುಲಗಳು, ಭಟಕಳದಲ್ಲಿಯ ಚಿನ್ನದಪಲ್ಲಿ ಮಸೀದಿ, ಸುಂಕೇರಿಯ ಇಗರ್ಜಿ, ಶಿರಾಲಿಯ ಚಿತ್ರಾಪುರ ಮಠದ ವಸ್ತು ಸಂಗ್ರಹಾಲಯ, ಶಾಸನಗಳು ಮುಂತಾದವು ಜಿಲ್ಲೆಯ ಐತಿಹಾಸಿಕ ಕುರುಹುಗಳು.

ಇಷ್ಟೊಂದು ದೀರ್ಘ ಚರಿತ್ರೆ, ಐತಿಹಾಸಿಕ ಕುರುಹುಗಳು, ಪ್ರೇಕ್ಷಣೀಯ ಸ್ಥಳಗಳು, ಧಾರ್ಮಿಕ ಕೇಂದ್ರಗಳು ಮತ್ತು ಸಾಂಸ್ಕೃತಿಕ ನೆಲೆಗಳುಳ್ಳ ಉತ್ತರಕನ್ನಡ, ಕರ್ನಾಟಕದಲ್ಲಿಯೇ ಒಂದು ವಿಶಿಷ್ಟವಾದ ಜಿಲ್ಲೆಯೆಂದು ಹೇಳಬಹುದು. ಈ ಜಿಲ್ಲೆಯ ವಿವಿಧ ಸ್ಥಳಗಳ ಚರಿತ್ರೆಯನ್ನು ಅನೇಕ ವಿದ್ವಾಂಸರು ಈಗಾಗಲೇ ಬೆಳಕಿಗೆ ತಂದಿದ್ದಾರೆ; ಮತ್ತು ಆ ಕಾರ್ಯ ಇಂದಿಗೂ ಸಾಗಿದೆ. ೧೮೮೩ ರಲ್ಲಿ ಪ್ರಕಟವಾದ ಗೆಜೆಟಿಯರ್, ಮೆಕೆಂಜಿ ಸಂಗ್ರಹ, ಬುಕಾನನ್‌ನ ಕೆನರಾ ಜಿಲ್ಲೆಯ ಪ್ರವಾಸದ ಕಥನ, ಜೆ ಎಫ್. ಫ್ಲೀಟ್‌ರ 'ಡೈನಾಸ್ಟೀಸ್ ಆಫ್ ದಿ ಕೆನರೀಸ್ ಡಿಸ್ಟ್ರಿಕ್ಟ್' ಡಾ. ಜಿ. ಎಂ. ಮೊರೇಸ್ ಅವರ 'ದ ಕದಂಬ ಕುಲ', ಡಾ. ಡಿ. ಸಿ. ಸರ್ಕಾರ ಅವರ 'ದ ಸಕ್ಸೆಸ್ಸರ್ಸ್ ಆಫ್ ಶಾತವಾಹನಾಸ್', 'ಸೌಥ್ ಇಂಡಿಯನ್ ಇನ್‌ಸ್ಕ್ರಿಪ್ಶನ್ಸ್' (೩೦ ನೆಯ ಸಂಪುಟ). ಡಾ. ಆರ್.ಎನ್. ಗುರವ ಅವರ 'ಕಾರವಾರ ಜಿಲ್ಲೆಯ ಶಾಸನಗಳು', ಡಾ. ಪಿ. ಬಿ. ದೇಸಾಯಿ ಅವರ 'ಕನ್ನಡನಾಡಿನ ಶಾಸನಗಳು', ವಿದ್ಯಾರತ್ನ

ಆರ್. ಎಸ್. ಪಂಚಮುಖಿಯವರ 'ಕರ್ನಾಟಕದ ಅರಸು ಮನೆತನಗಳು', ಭಂಡಾರಕರ ಎಂ ಎನ್. ಮತ್ತು ಎಸ್ ಸಿಲ್ವಾ ಅವರ 'ಕಾರವಾರ ಜಿಲ್ಲಾ ದರ್ಶನ', ಸ. ಸ. ಮಾಳವಾಡ ಅವರ 'ಸ್ವಾದಿ ಅರಸು ಮನೆತನ', ಡಾ. ಬಿ. ಆರ್. ಗೋಪಾಲ ಅವರ 'ಬನವಾಸಿ ಕದಂಬರು', 'ಕೋರ್ಪಸ್ ಆಫ್ ಕದಂಬ ಇನ್‌ಸ್ಕ್ರಿಪ್ಶನ್ಸ್', ಡಾ. ಕೆ. ಜಿ. ವಸಂತಮಾಧವ ಅವರ 'ಹಿಸ್ಟೊರಿ ಆಫ್ ಕೆನರಾ', ಟಿ. ಕೆ. ಮಹಮ್ಮೂದರು ಸಂಪಾದಿಸಿದ 'ಉತ್ತರ ಕನ್ನಡ ದರ್ಶನ', ಎಂ.ಆರ್ ಶಾನಭಾಗ ಅವರ 'ಉತ್ತರ ಕನ್ನಡ ಜಿಲ್ಲೆಯ ದೇವಾಲಯಗಳು', ಡಾ. ಸೂರ್ಯನಾಥ ಕಾಮತರು ೧೯೮೫ ರಲ್ಲಿ ಸಂಪಾದಿಸಿದ 'ಉತ್ತರ ಕನ್ನಡ ಜಿಲ್ಲೆಯ ಗೆಜೆಟಿಯರ್' ಮತ್ತು 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು' (ಸಂ. ೧ ಉ ಕ.), ಡಾ. ಎ. ಕೆ. ಶಾಸ್ತ್ರಿಯವರ 'ಶ್ರೀ ಸೋಂದಾಸ್ವರ್ಣವಲ್ಲೀ ಮಹಾಸಂಸ್ಥಾನದ ಐತಿಹಾಸಿಕ ದಾಖಲೆಗಳು', 'ಸ್ವರ್ಣವಲ್ಲೀ ಮಹಾಸಂಸ್ಥಾನ', 'ಶ್ರೀ ಮಂಜುಗುಣಿಕ್ಷೇತ್ರದ ಚಾರಿತ್ರಿಕ ದಾಖಲೆಗಳು' ಮತ್ತು ಸಂಪಾದಿಸಿದ 'ಶಿರಸಿ ತಾಲೂಕಾದರ್ಪಣ', ಇವೇ ಆ ಕೆಲವು ಉದಾಹರಣೆಗಳು. ಡಾ. ಬಿ ಎ. ಸಾಲೆತೊರೆ, ಡಾ ಜಿ ಎಸ್ ದೀಕ್ಷಿತ, ಡಾ. ಬಿ ಎಸ್. ಶಾಸ್ತ್ರಿ, ಡಾ. ಸೌಂದರರಾಜನ್, ಶ್ರೀ ಕೆ. ಅಭಿಶಂಕರ, ಡಾ. ಎಚ್.ಆರ್. ರಘುನಾಥ ಭಟ್ಟ, ಡಾ. ಎ. ಸುಂದರ, ಡಾ. ಎಂ ಶೇಷಾದ್ರಿ, ಡಾ. ನರಸಿಂಹಮೂರ್ತಿ, ವಿಘ್ನೇಶ್ವರ ಶರ್ಮಾ ತದ್ದಲಸೆ, ಗೋಪಾಲಕೃಷ್ಣ ಹೆಗಡೆ ಕೇರಿಮನೆ, ಟಿ ಎಂ. ಸುಬ್ಬರಾಯ ಮೊದಲಾದ ಅನೇಕ ಹಿರಿ ಕಿರಿಯ ವಿದ್ವಾಂಸರು ಜಿಲ್ಲೆಯ ಚರಿತ್ರೆಯ ಹಲವು ಮುಖಗಳನ್ನು ಪರಿಚಯಿಸಿದ್ದಾರೆ. ಈ ದಿಶೆಯಲ್ಲಿ, ಅನೇಕ ಪತ್ರಿಕೆಗಳ ಮತ್ತು ಸ್ಮರಣ ಸಂಚಿಕೆಗಳ ಕಾರ್ಯ ಸ್ತುತ್ಯಾರ್ಹ. ಗದಗಿನ ತೋಂಟದಾರ್ಯ ಮಠದ ವೀರಶೈವ ಅಧ್ಯಯನ ಸಂಸ್ಥೆಯು ಪ್ರಕಟಿಸಿದ 'ಸ್ವಾದಿ ಅರಸು ಮನೆತನ' ಮತ್ತು ಬೆಳಗಾವಿಯ ನಾಗನೂರು ರುದ್ರಾಕ್ಷಿಮಠದ ವೀರಶೈವ ಅಧ್ಯಯನ ಅಕಾಡೆಮಿಯವರು ಪ್ರಕಟಿಸಿದ 'ಬಿಳಗಿ ಅರಸು ಮನೆತನ', ಇವೂ ಉಪಯುಕ್ತ ಗ್ರಂಥಗಳು.

ಕಳೆದ ಶತಮಾನದಿಂದ ಅನೇಕ ವಿದ್ವಾಂಸರು ಜಿಲ್ಲೆಯ ಚರಿತ್ರೆಯನ್ನು ಬೆಳಕಿಗೆ ತರುತ್ತಲೇ ಬಂದಿದ್ದರೂ, ಚರಿತ್ರೆಗೆ ಸಂಬಂಧಿಸಿದ ಇನ್ನೂ ಅನೇಕ ವಿಷಯಗಳು ಬೆಳಕಿಗೆ ಬಂದಿಲ್ಲ. ಬನವಾಸಿಯೊಂದಿಗೆ ಮೌರ್ಯ ಸಮ್ರಾಟರ ಸಂಪರ್ಕ ಕುರಿತು ಹೆಚ್ಚಿನ ಸಂಶೋಧನೆ ಅಗತ್ಯ. ಅದೇ ರೀತಿ, ಉತ್ತರಕನ್ನಡದಲ್ಲಿ ಶಾತವಾಹನ ಮತ್ತು ಚುಟು ದೊರೆಗಳ ಆಡಳಿತ, ಕದಂಬ ಸಾಮ್ರಾಜ್ಯದ ವಿಸ್ತಾರ ಮತ್ತು ಅವರ ಕಾಲದ ಪ್ರಾಚ್ಯಾವಶೇಷಗಳು, ನಂತರದಲ್ಲಿ ಬಂದ ಬೇರೆ ಬೇರೆ ಕದಂಬ ಮನೆತನದವರ ಮೂಲ, ಉತ್ತರಕನ್ನಡದಲ್ಲಿ ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ ಮತ್ತು ವಿಜಯನಗರ ಕಾಲದ ಶಾಸನಗಳು, ಮೊಘಲ, ಮರಾಠಾ ಮತ್ತು

ವಿಜಾಪುರದ ಸುಲ್ತಾನರೊಂದಿಗೆ ಉತ್ತರಕನ್ನಡದ ಸಂಬಂಧ, ಅದೇ ರೀತಿ, ನೆರೆ ಜಿಲ್ಲೆಗಳೊಂದಿಗೆ ಈ ಅವಧಿಯಲ್ಲಿ ಉತ್ತರಕನ್ನಡ ಇರಿಸಿಕೊಂಡ ರಾಜಕೀಯ ಮತ್ತು ಆರ್ಥಿಕ ಸಂಪರ್ಕ, ಬ್ರಿಟಿಷ್‌ರ ಕಾಲಕ್ಕೆ ಸಂಬಂಧಿಸಿದ ಚಾರಿತ್ರಿಕ ದಾಖಲೆಗಳ ವಿಶೇಷ ಅಧ್ಯಯನ, ಧಾರ್ಮಿಕ ಕೇಂದ್ರಗಳು ರೂಪುಗೊಂಡ ಬಗೆ, ಇತ್ಯಾದಿ ಅನೇಕ ವಿಷಯಗಳನ್ನು ಕುರಿತು ವಿದ್ವಾಂಸರು ಇನ್ನೂ ಹೆಚ್ಚಿನ ಸಂಶೋಧನೆ ನಡೆಸಬೇಕಾಗಿದೆ. ಜಿಲ್ಲೆಯ ಐತಿಹಾಸಿಕ ಸ್ಥಳಗಳನ್ನೆಲ್ಲ ಸರಿಯಾಗಿ ಗುರುತಿಸಿ ಉತ್ಖನನ ಕಾರ್ಯವನ್ನು ಪುರಾತತ್ವ ಇಲಾಖೆಯವರು ನಡೆಸಬೇಕು. ಶಿಲಾಶಾಸನಗಳು ಹವಾಮಾನದ ವೈಪರೀತ್ಯದಿಂದಾಗಿ ನಾಶವಾಗುವ ಮುನ್ನ ರಕ್ಷಣೆ ಪಡೆದು ಬೆಳಕಿಗೆ ಬರಬೇಕು. ಮರಾಠರಿಗೆ ಸಂಬಂಧಿಸಿದ ದಾಖಲೆಗಳನ್ನು ಪುಣೆಯ ಪೇಶ್ವಾದಫ್ತರ, ಮುಂಬಯಿಯ ಏಶಿಯಾಟಿಕ್ ಲೈಬ್ರರಿ ಮತ್ತು ಐರೋಪ್ಯರಿಗೆ ಸಂಬಂಧಿಸಿದ ದಾಖಲೆಗಳನ್ನು ಚೆನ್ನೈನ ಪೌರ್ವಾತ್ಯ ಹಸ್ತಪ್ರತಿಗಳ ಸಂಗ್ರಹಾಲಯ, ರಾಜ್ಯ ಮತ್ತು ರಾಷ್ಟ್ರ ಪತ್ರಾಗಾರ, ಲಿಸ್ಬನ್, ಗೋವಾ ಮತ್ತು ಲಂಡನ್ ಸ್ಥಳಗಳಲ್ಲಿಯ ಪತ್ರಾಗಾರಗಳಲ್ಲಿ ಹುಡುಕಿ ತೆಗೆದು ಚರಿತ್ರೆಗೆ ಬಳಸಿಕೊಳ್ಳಬೇಕಾಗಿದೆ. ಈ ಮಹಾಕಾರ್ಯದಲ್ಲಿ ಇತಿಹಾಸ ಸಂಶೋಧಕರಿಗೆ ಬಹುಭಾಷಾ ಪಂಡಿತರ ಸಹಾಯ ಅಗತ್ಯವಾದುದು.



# ಬನವಾಸಿಯ ಐತಿಹಾಸಿಕ ಪರಂಪರೆ

ಇಂದು ಶಿರಸಿ ತಾಲೂಕಿನ ಒಂದು ಭಾಗವಾದ ಬನವಾಸಿ, ಮೊದಲೊಮ್ಮೆ ಪ್ರಾಚೀನ ಕದಂಬರ ವೈಭವಯುತವಾದ ರಾಜಧಾನಿಯಾಗಿತ್ತೆಂಬುದು ಐತಿಹಾಸಿಕ ಸತ್ಯ. ಕರ್ನಾಟಕದ ಸರಿಯಾದ ಇತಿಹಾಸ ಪ್ರಾರಂಭವಾಗುವುದೇ ಬನವಾಸಿಯ ಕದಂಬರಿಂದ ಬನವಾಸಿಯು ಮತ್ತು ಅದರ ಸುತ್ತುಮುತ್ತಲಿನ ಐತಿಹಾಸಿಕ ಅವಶೇಷಗಳು ಕರ್ನಾಟಕದ ಪ್ರಾಚೀನ ಇತಿಹಾಸದ ಮೇಲೆ ಬೆಳಕು ಚೆಲ್ಲಲು ಮೂಕ ಸಾಕ್ಷಿಯಾಗಿ ಇಂದಿಗೂ ಉಳಿದುಕೊಂಡು ಬಂದಿವೆ. ಬನವಾಸಿ ರಾಜ್ಯವನ್ನು ಕ್ರಮವಾಗಿ ಮೌರ್ಯರು, ಸಾತವಾಹನರು (ಶಾತವಾಹನರು), ಚುಟುಗಳು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಕಲಚುರಿಯರು, ಸೇವುಣರು (ಯಾದವರು), ಹೊಯ್ಸಳರು, ವಿಜಯನಗರ ಸಮ್ರಾಟರು, ಸ್ವಾದಿ ರಾಜರು, ಹೈದರ ಮತ್ತು ಟೀಪು ಸುಲ್ತಾನರು ಮತ್ತು ೧೭೯೯ ರಲ್ಲಿ ಟೀಪೂನ ಪತನದ ನಂತರ ಬ್ರಿಟಿಷರು ಆಳಿದರು. ಸ್ವಾತಂತ್ರ್ಯ ಸಮರದಲ್ಲಿ ಬನವಾಸಿ ಪ್ರಜೆಗಳ ಪಾತ್ರವೂ ಗಮನಾರ್ಹವಾದುದು. ಸ್ವಾತಂತ್ರ್ಯೋತ್ತರ ಕಾಲದಲ್ಲಿ ಬನವಾಸಿ ಶಿರಸಿ ತಾಲೂಕಿನ ಒಂದು ಭಾಗವಾಗಿ ಮಾತ್ರ ಉಳಿದುಕೊಂಡು ಬಂದಿದೆ. ಪ್ರಾಚೀನ ಕದಂಬ ಸಾಮ್ರಾಜ್ಯದಲ್ಲಿ ವೈಭವದ ಶಿಖರಕ್ಕೇರಿದ್ದ ಬನವಾಸಿ, ಆ ಸಾಮ್ರಾಜ್ಯದ ಪತನದ ನಂತರ ಮುಂದೆಂದೂ ಉತ್ತುಂಗಕ್ಕೇರಲಿಲ್ಲ. ಇಂದೆಲ್ಲವೂ ಗತಕಾಲದ ವೈಭವದ ಚರಿತ್ರೆಯಾಗಿ ಮಾತ್ರ ಉಳಿದಿದೆ.

## ಬನವಾಸಿ ಸ್ಥಳನಾಮ

ಮಹಾಭಾರತದಲ್ಲಿ ಬನವಾಸಿಯನ್ನು 'ವನವಾಸಕ' ಎಂದು ಉಲ್ಲೇಖಿಸಿದ್ದು ಅತ್ಯಂತ ಪ್ರಾಚೀನದ್ದಾಗಿದೆ.[೧] ಮೆಕೆನ್‌ಜಿ ಸಂಗ್ರಹದ[೨] ಕ್ರಿ.ಶ. ೧೮೧೩ ರ

---

೧. Uttara Kannada District Gazetteer (U.K.D.G.), ೧೯೮೫, P. ೮೮೭.

೨. ಕರ್ನಲ್ ಮೆಕೆನ್‌ಜಿ ಮೊದಲೊಮ್ಮೆ ಬ್ರಿಟನ್ನಿನಲ್ಲಿ ಸಾಮಾನ್ಯ ಸೈನಿಕನಾಗಿದ್ದ; ಮುಂದೆ ಕಲಕತ್ತ್ಯದಲ್ಲಿ ಭಾರತದ ಪ್ರಥಮ ಸರ್ವೇಯರ್ ಜನರಲ್ ಆದನು. ತನ್ನ ಜೀವನದ ಅರ್ಧಭಾಗವನ್ನು ಭಾರತದಲ್ಲೇ ಕಳೆದ. ಭಾರತದ ಚರಿತ್ರೆಯ ಪುನರ್ರಚನೆಗೆ ಸಹಾಯಕವಾಗಬಲ್ಲ ಅನೇಕ ದಾಖಲೆಗಳನ್ನು ಸಂಗ್ರಹಿಸಿದ; ಹೂಗ್ಲಿ ನದಿಯ ದಂಡೆಯ ಮೇಲೆ

→

ಶ್ರೀಮುಖ ಸಂವತ್ಸರದ 'ಬನವಶಿ ಸ್ಥಳದ ಕೈಫಿಯತ್'[೨] ನಲ್ಲಿ, ಸಾಕ್ಷಾತ್ ಬ್ರಹ್ಮದೇವನೇ ಬನವಶಿ ಸ್ಥಳವನ್ನು ಪ್ರಥಮ ಸೃಷ್ಟಿಯಲ್ಲೇ ಸೃಷ್ಟಿಸಿದ ಎಂಬ ಅಂಶ ಅಡಕವಾಗಿದೆ. ಶಿವೇತರ ದೇವತಾರ್ಚಕರನ್ನು ಮಧು ಎಂಬ ರಕ್ಕಸನು ಶಿಕ್ಷಿಸುತ್ತಿರಲಾಗಿ, ಸಾಕ್ಷಾತ್ ಪರಮೇಶ್ವರನೇ ವಿಷ್ಣುವಿನ ಮುಖಾಂತರ ಮಧುವಿನ ವಧೆ ಮಾಡಿಸಿ, ಅನಂತರ ಮಧುಕೇಶ್ವರ ತೀರ್ಥಲಿಂಗದಲ್ಲಿ, ಪವಿತ್ರ ಬನವಾಸಿ ಕ್ಷೇತ್ರದಲ್ಲಿ ವಾಸ ಮಾಡಿಕೊಂಡಿರುವುದಾಗಿ ಸಮಸ್ತ ದೇವತೆಗಳಿಗೆ ಅರುಹಿದನು. ಇದೇ ರೀತಿ ಮಧುವಿನ ತಮ್ಮನಾದ ಕೈಟಭನ ಸಂಹಾರವೂ ಈಗಿನ ಶಿವಮೊಗ್ಗ ಜಿಲ್ಲೆಯ ಕುಬಟೂರಿನಲ್ಲಾಯಿತು. ಬನವಾಸಿಯ ಮಧುಕೇಶ್ವರ ಹಾಗೂ ಕುಬಟೂರಿನ ಕೈಟಭೇಶ್ವರ ದೇವಾಲಯಗಳನ್ನು ಈ ಸಹೋದರರೇ ಮೊದಲು ನಿರ್ಮಿಸಿದರೆಂಬುದು 'ಬನವಶಿ ಕೈಫಿಯತ್'ನಿಂದ ತಿಳಿದುಬರುತ್ತದೆ. ಸ್ಥಳದ ಪ್ರಾಚೀನತೆಯನ್ನು ಅರಿಯಲು ಇನ್ನುಳಿದ ಖಚಿತವಾದ ಯಾವ ಐತಿಹಾಸಿಕ ಆಧಾರಗಳೂ ಇಲ್ಲದಿರುವಾಗ, ಪುರಾಣ, ಸಂಪ್ರದಾಯ ಹಾಗೂ ಐತಿಹ್ಯಗಳಿಗೆ, ಕುತೂಹಲದ ದೃಷ್ಟಿಯಿಂದಲಾದರೂ ಸ್ವಲ್ಪ ಮಹತ್ವ ನೀಡಿದರೆ ತಪ್ಪಾಗಲಿಕ್ಕಿಲ್ಲ ಎಂಬುದು ನನ್ನ ಅನಿಸಿಕೆ.

ಪರಶುರಾಮ ಸೃಷ್ಟಿಯೆನಿಸಿದ ಪಶ್ಚಿಮ ಘಟ್ಟದಲ್ಲಿಯ ಬನವಾಸಿ, ಗೋಕರ್ಣ, ಯಾಣ, ದಾಂಡೇಲಿ, ಸುಪಾ ಮೊದಲಾದ ಸ್ಥಳಗಳನ್ನು ರಾಮಾಯಣ ಮತ್ತು ಮಹಾಭಾರತಗಳಲ್ಲಿ ಉಲ್ಲೇಖಿಸಲಾಗಿದೆ.

"ಕುಂತಲ ಎಂಬುದು ಒಮ್ಮೊಮ್ಮೆ ಸಮಗ್ರ ಕರ್ನಾಟಕಕ್ಕೂ ಅನ್ವಯಿಸುವ ಪದವಾದರೂ, ವಿಶೇಷವಾಗಿ ಇದು ಉತ್ತರ ಕರ್ನಾಟಕದ ಈಗಿನ ಶಿವಮೊಗ್ಗ, ಕಾರವಾರ, ಧಾರವಾಡ ಜಿಲ್ಲೆಗಳಿಗೆ ಸೀಮಿತವಾದ ಪ್ರದೇಶ. ಇದರಲ್ಲಿ ಪ್ರಮುಖ

---

→

೧೮೨೧ ರಲ್ಲಿ ಮೃತನಾದ. ಮೆಕೆನ್‌ಜಿ ಸಂಗ್ರಹ ಬಹು ದೊಡ್ಡದು ಮತ್ತು ಅಮೂಲ್ಯವಾದದು. ಮೆಕೆನ್‌ಜಿ ಸಂಗ್ರಹದ ಬಹುಭಾಗ ಲಂಡನ್ನಿನ 'ಆಫೀಸ್ ಗ್ರಂಥಾಲಯ' ಸೇರಿತು. ಇನ್ನು ಕೆಲವು ಭಾಗ ಕಲಕತ್ತಾದ ಇಂಪೀರಿಯಲ್ ಗ್ರಂಥ ಭಂಡಾರಕ್ಕೆ ಹೋಯಿತು. ಉಳಿದ ಅಷ್ಟಿಷ್ಟು ಮದ್ರಾಸದ ಪ್ರಾಂತ್ಯ ಗ್ರಂಥಾಲಯದಲ್ಲಿದ್ದ ಕೆಲವು ಕನ್ನಡ ತಾಳೆ ಗ್ರಂಥಗಳ ಪ್ರತಿಯನ್ನು ಕರ್ನಾಟಕದ ವಿಶ್ವವಿದ್ಯಾಲಯಗಳಿಗೆ ಕಳಿಸಲಾಗಿದೆಯಂತೆ.

೨. 'ಕೈಫಿಯತ್' ಎಂಬ ಪದ ಪರ್ಶಿಯನ್ ಭಾಷೆಯಿಂದ ಬಂದುದು. "ಸಮಾಚಾರ" ಅಥವಾ "ವೃತ್ತಾಂತ" ಎಂಬುದು ಈ ಪದದ ಸಾಮಾನ್ಯ ಅರ್ಥ. ಕೈಫಿಯತ್‌ದಲ್ಲಿ ಬರುವ ವಿಷಯಗಳನ್ನು ನೂರಕ್ಕೆ ನೂರರಷ್ಟು ಸತ್ಯವೆಂದು ಹೇಳಲು ಬಾರದಿದ್ದರೂ, ಇನ್ನುಳಿದ ಇತಿಹಾಸ ಸಾಮಗ್ರಿಗಳು ಲಭ್ಯವಿರದಾಗ, ಕೈಫಿಯತ್‌ನ ಅಂಶಗಳನ್ನು ಪರಾಮರ್ಶಿಸಿ, ಚರಿತ್ರೆ ಬರೆಯುವಲ್ಲಿ ಜಾಗರೂಕತೆಯಿಂದ ಬಳಸಿಕೊಳ್ಳಬಹುದು. ಪೌರಾಣಿಕ ಮತ್ತು ಚಾರಿತ್ರಿಕ ಸಂಗತಿಗಳನ್ನು ಇವು ಅರುಹುತ್ತವೆ.

ವಾದ ನಗರ ಬನವಾಸಿ".[೪] "ಭಾರತ ಭೂಮಿಯೊಳಗಣ ಕುಂತಲ ದೇಶಕ್ಕೆ ಬನವಾಸಿ ಒಂದು ಆಭರಣವಿದ್ದಂತಿದೆ" ಎಂಬುದಾಗಿ ಕ್ರಿ.ಶ. ೧೦೭೭ ರ ಶಾಸನವೊಂದರಿಂದ ಅರಿಯಬಹುದಾಗಿದೆ.[೫] ಸುಮಾರು ಕ್ರಿ. ಶ. ಪೂರ್ವ ೨೪೦ ರಲ್ಲಿ ಬೌದ್ಧ ಧರ್ಮ ಪ್ರಚಾರ ಮಾಡಲು, ಅಶೋಕ ಚಕ್ರವರ್ತಿಯಿಂದ ರಕ್ಕಿತ(ರಕ್ಷಿತ)ನೆಂಬ ಬೌದ್ಧ ಸನ್ಯಾಸಿಯು ವನವಾಸಿ ಅಥವಾ ಬನವಾಸಿಗೆ ಕಳುಹಿಸಲ್ಪಟ್ಟನೆಂಬ ಐತಿಹಾಸಿಕ ಸಂಗತಿ, ಉತ್ತರಕನ್ನಡ ಜಿಲ್ಲೆಯ ಅತ್ಯಂತ ಪ್ರಾಚೀನ ಐತಿಹಾಸಿಕ ಘಟನೆಯಾಗಿದೆ.[೬]

ಪುಣೆಯಿಂದ ವಾಯುವ್ಯ ದಿಕ್ಕಿಗೆ ೩೦ ಮೈಲು ದೂರದಲ್ಲಿರುವ ಬೃಹತ್ ಕಾರ್ಲೆ ಗವಿಯನ್ನು ಕ್ರಿ ಶ.ಪೂ. ೧೦೦ರಲ್ಲಿ ವೈಜಂತಿ ಅಥವಾ ಬನವಾಸಿಯ ವ್ಯಾಪಾರಿಯೊಬ್ಬನು ಕಟ್ಟಿಸಿದನು. ನಾಸಿಕದ ಮೂರನೆಯ ಗವಿಯಲ್ಲಿಯ ಸು.ಕ್ರಿ.ಶ. ೧೦ ರ ನಾಲ್ಕನೆಯ ನಂಬರಿನ ಶಾಸನದಲ್ಲಿ ವೈಜಯಂತಿಯ ಸೈನ್ಯವನ್ನು ಕುರಿತು ಸಂಶಯಾಸ್ಪದವಾಗಿ ಉಲ್ಲೇಖಿಸಿದ ವಿಷಯವನ್ನು 'ಕೆನರಾ' ಹಾಗೂ 'ಬಾಂಬೆ ಗ್ಯಾಜೆಟಿಯರ್' ಗಳಿಂದ ತಿಳಿಯಬಹುದು.[೭]

ಕ್ರಿ. ಶ. ಎರಡನೆಯ ಶತಮಾನದಲ್ಲಿ ಇಜಿಪ್ತದ ಭೂಗೋಲ ಶಾಸ್ತ್ರಜ್ಞನಾದ ಟೊಲೆಮಿ, ತಾನಂ ಕಾಣಿಸಿದ ಸ್ಥಳಗಳ ಪಟ್ಟಿಯಲ್ಲಿ, 'ಬನೌಸಿ' ಎಂದು ನಮೂದಿಸಿದ್ದಾನೆ.[೮]

ಕ್ರಿ. ಶ. ನಾಲ್ಕನೆಯ ಶತಮಾನದ ಆದಿಯಲ್ಲಿ, ಕದಂಬ ರಾಜಧಾನಿಯಾದ ಬನವಾಸಿಯನ್ನು 'ಜಯಂತಿ ಪುರ' ಅಥವಾ 'ವೈಜಯಂತಿ' ಎಂದು ಕರೆಯಲಾಗುತ್ತಿತ್ತು. ಗುಪ್ತ ಸಾಮ್ರಾಟರ ರಾಯಭಾರಿಯಾಗಿ ಬಂದ ಮಹಾಕವಿ ಕಾಳಿದಾಸನು ಬನವಾಸಿಯನ್ನು ಸಂದರ್ಶಿಸಿ, ಅದರ ಸೌಂದರ್ಯವನ್ನು 'ಮೇಘದೂತ'ದಲ್ಲಿ

---

೪. ಬಾ. ರಾ. ಗೋಪಾಲ, 'ಬನವಾಸಿ ಕದಂಬರು'. ಪ್ರಕಾಶನ : ಕದಂಬ ಸಾಂಸ್ಕೃತಿಕ ಅಧ್ಯಯನ ಸಂಸ್ಥೆ. ಶಿರಸಿ (ಉ ಕ.), ೧೯೮೩. ಪುಟ VIII.

೫. 'Epigraphia Carnatica', VIII, sb. ೨೬೨, Ed. Rice.

೬. 'ಮಹಾವಂಶ' XII, ೪೧, 'ದೀಪವಂಶ' VIII, ೧೦, Kanara Gazetteer' (K. G.), ೧೮೮೩, P. ೭೩, foot notes 'Turnours' Mahavamso', ೭೧; 'Indian Antiquary', III, ೨೭೩, Cunningham's 'Ancient Geography of India', ೪೮೯, Rice's Mysore, ೧, ೧೯೧.

೭. 'K.G.', Foot notes : Separate Pamphlet, X of Archaeological Survey of Western India, ೨೮; Bombay Gazetteer, XVI, ೫೫೯, ೬೩೮.

೮. 'K.G.' P. ೭೭, Foot notes; Bertius' Ptolemy, ೨೦೫.

ವರ್ಣಿಸಿದ್ದಾನೆ. 'ಪ್ರಭುಲಿಂಗಲೀಲೆ'ಯಲ್ಲಿ ಚಾಮರಸನು ಬನವಾಸಿಯ ಸೌಂದರ್ಯವನ್ನು ವರ್ಣಿಸಿದ್ದಾನೆ. ಇಮ್ಮಡಿ ಪುಲಕೇಶಿಯ 'ಐಹೊಳೆ ಪ್ರಶಸ್ತಿ'ಯಲ್ಲಿ ಇಂದ್ರನ ರಾಜಧಾನಿಯೊಂದಿಗೆ ಸ್ಪರ್ಧಿಸುತ್ತಿತ್ತು ಎಂದು ಉಲ್ಲೇಖಿಸಲಾಗಿದೆ. ರಾಷ್ಟ್ರಕೂಟರ ಆಳ್ವಿಕೆಯಲ್ಲಿ, ಬನವಾಸಿಯು ಒಂದು ಪ್ರಾಂತದ ಪ್ರಧಾನ ಸ್ಥಳವಾಗಿ 'ಬನವಾಸಿ-೧೨,೦೦೦' ಎಂದು ಕರೆಯಲ್ಪಟ್ಟಿತು. ಕಲ್ಯಾಣದ ಚಾಲುಕ್ಯರ ಕಾಲದಲ್ಲಿಯೂ ಬನವಾಸಿ ಒಂದು ಪ್ರಾಂತವಾಗಿ ಮುಂದುವರಿಯಿತು. ಹತ್ತನೆಯ ಶತಮಾನದಲ್ಲಿ ಪಂಪನು 'ಬನವಾಸಿ ದೇಶ'ದ ಪ್ರಶಂಸೆಯನ್ನು ಅತ್ಯಂತ ಸುಂದರವಾಗಿ ಮಾಡಿದ್ದಾನೆ.[೯] ದಾವಣಗೆರೆಯಲ್ಲಿ ದೊರೆತ ಕ್ರಿ. ಶ ೧೧೦೦ ರ ಶಾಸನದಲ್ಲಿ ಬನವಾಸಿಯನ್ನು 'ನಂದನವನ' ಎಂದು ಸಂಬೋಧಿಸಲಾಗಿದೆ. ವೀರಭದ್ರ ದೇವಸ್ಥಾನದ ಸಮೀಪದಲ್ಲಿ ದೊರೆತ ಕ್ರಿ.ಶ. ೧೩೬೯ ರ ಶಿಲಾಶಾಸನವು ಬನವಾಸಿಯ ಪಂಚಮಠಗಳ ಬಗ್ಗೆ ಹೇಳುತ್ತದೆ. ಲಕುಲ ಶೈವ, ವೀರಶೈವ, ವೈಷ್ಣವ, ಜೈನ ಮತ್ತು ಬೌದ್ಧರಿಗೆ ಬನವಾಸಿ ಕೇಂದ್ರವಾಗಿತ್ತು. ಕ್ರಿ. ಶ ೧೫೫೨ ರ ವಿಜಯನಗರದ ಶಾಸನಗಳು ಬನವಾಸಿಯನ್ನು 'ಕನಕಾವತಿ' ಎಂದು ಕರೆದಿವೆ. ಬನವಾಸಿಯು ತಹಶೀಲ್ದಾರನಿರುವ ಸ್ಥಳ ಎಂದು ೧೮೦೧ ರಲ್ಲಿ ಬುಕಾನನ್ ಹೇಳಿದ್ದಾನೆ.[೧೦] ಕಿಟೆಲರು, 'ಬನವಾಸಿ' ಪದವು 'ಬನ' (ವನ) ಮತ್ತು 'ವಸಿ' (ಬಸೆ), ಅಂದರೆ ಬುಗ್ಗೆ ಅಥವಾ ಅರಣ್ಯ-ಬುಗ್ಗೆ ಎಂಬ ಎರಡು ಪದಗಳು ಕೂಡಿ ಆಗಿದ್ದು ಎಂದು ಅಭಿಪ್ರಾಯಪಟ್ಟಿದ್ದಾರೆ. ಕನ್ನಡದಲ್ಲಿ 'ವನವಾಸ' ಪದದ ಭಾಷಾಂತರವು 'ಬನವಾಸಿ' ಆಗಲು ಸಾಧ್ಯ ಎಂಬುದು ಡಾ. ಫ್ಲೀಟ್ ಅವರ ಅಭಿಪ್ರಾಯ. ಬ್ರಿಟಿಷರ ಅಧಿಪತ್ಯದ ಪೂರ್ವದಲ್ಲಿ, ಬನವಾಸಿ ಪ್ರಾಂತವು, ಕ್ರಮವಾಗಿ, ವಿಜಯನಗರ ಮತ್ತು ಸೋಂದಾದ ಅರಸುಗಳ ಹಾಗೂ ಹೈದರ ಮತ್ತು ಟೀಪೂಸುಲ್ತಾನರ ಆಡಳಿತಕ್ಕೊಳಪಟ್ಟಿತ್ತು. ೧೮೧೭ ರ ಸುಮಾರಿಗೆ ಬನವಾಸಿಯನ್ನು ಸೋಂದಾದಲ್ಲಿ ಸೇರಿಸಲಾಯಿತು. ಇವೆಲ್ಲ, ಬನವಾಸಿಯ ಪ್ರಾಚೀನತೆಯನ್ನು ಕುರಿತು ಉಲ್ಲೇಖಿಸುವ ಆಧಾರಗಳು.

---

೯ ಸಂ. ಡಾ. ಕೆ ವಿ. ಪುಟ್ಟಪ್ಪ, 'ವಿಕ್ರಮಾರ್ಜುನ ವಿಜಯಂ', ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ೧೯೭೩, ಪು. ೯೮.

೧೦. ಕ್ರಿ.ಶ. ೧೭೬೨ ರಲ್ಲಿ ಫ್ರಾನ್ಸಿಸ್ ಬುಕಾನನ್‌ನು ಸ್ಟರ್ಲಿಂಗ್‌ಶೈರ್‌ನಲ್ಲಿ ಜನಿಸಿ, ೧೭೮೩ ರಲ್ಲಿ ಎಡಿನ್‌ಬರೊದಲ್ಲಿ ಪದವೀಧರನಾದನು. ೧೭೯೪ ರಲ್ಲಿ ಸರ್ಜನ್ ಆಗಿ ಈಸ್ಟ್ ಇಂಡಿಯಾ ಕಂಪನಿಯಲ್ಲಿ ನೇಮಕಗೊಂಡನು. ಟೀಪೂಸುಲ್ತಾನನ ಮರಣದ ನಂತರ, ಕಂಪನಿಯು ಹೊಸದಾಗಿ ಪಡೆದ ಮೈಸೂರು ಹಾಗೂ ಮಲಬಾರ ಪ್ರದೇಶಗಳಲ್ಲಿ ಪ್ರವಾಸ ಕೈಗೊಂಡು ಅಲ್ಲಿಯ ವೃತ್ತಾಂತವನ್ನು ಅರುಹಲು ೧೮೦೦ ರಲ್ಲಿ ಗವರ್ನರ ಜನರಲ್ ವೆಲ್ಲೆಸ್ಲಿಯು ಡಾ. ಫ್ರಾನ್ಸಿಸ್ ಬುಕಾನನ್‌ನನ್ನು ನೇಮಿಸಿದನು. 'Journey through the northern parts of Kanara', ಎಂಬುದರಲ್ಲಿ ಡಾ. ಬುಕಾನನ್ ವೃತ್ತಾಂತವನ್ನೆಲ್ಲ ನೀಡಿದ್ದಾನೆ. ಬುಕಾನನ್‌ನು ೧೮೨೯ ರಲ್ಲಿ ಮೃತನಾದನು.

**ಪೂರ್ವಕಾಲ**

ಕರ್ನಾಟಕದಲ್ಲಿ ಅಶೋಕ ಚಕ್ರವರ್ತಿಯ ಶಾಸನಗಳು ಲಭಿಸಿವೆ. ಅವನಿಗಿಂತಲೂ ಪೂರ್ವದಲ್ಲಿ, ಮೌರ್ಯವಂಶದ ಮೂಲ ಪುರುಷನಾದ ಚಂದ್ರಗುಪ್ತನು ಶ್ರವಣಬೆಳಗೊಳಕ್ಕೆ ಬಂದು ಸಲ್ಲೇಖನ ಹೊಂದಿದನೆಂಬ ಪ್ರತೀತಿಯೂ ಇದೆ, ಆದರೆ ಈ ಸಮ್ರಾಟರಾರೂ ಕರ್ನಾಟಕದ ಪ್ರದೇಶಗಳನ್ನು ಗೆದ್ದುಕೊಂಡ ಬಗ್ಗೆ ಯಾವ ಆಧಾರಗಳೂ ದೊರೆತಿಲ್ಲ. ಹೀಗಿರುವಾಗ, ಮೌರ್ಯಚಕ್ರವರ್ತಿಗಳು ತಮ್ಮ ಹಿಂದಿನವರಾದ ನಂದ ಸಾರ್ವಭೌಮರಿಂದಲೇ ಕರ್ನಾಟಕದಲ್ಲಿಯ ಕೆಲವು ಪ್ರದೇಶಗಳನ್ನು ಪಡೆದಿರಲು ಸಾಕು. ರಕ್ಷಿತನೆಂಬ ಬೌದ್ಧ ಸನ್ಯಾಸಿಯನ್ನು ಅಶೋಕ ಚಕ್ರವರ್ತಿಯು ಬೌದ್ಧಧರ್ಮಪ್ರಚಾರ ಮಾಡಲೆಂದು ಬನವಾಸಿಗೆ ಕಳುಹಿಸಿದ್ದನೆಂಬ ಸಂಗತಿಯು ಶ್ರೀಲಂಕಾದ ಗ್ರಂಥಗಳಿಂದ ತಿಳಿದುಬರುತ್ತದೆ. ಮೌರ್ಯರದ್ದೆಂದು ನಂಬಲಾದ ರಂಧ್ರವುಳ್ಳ ಕೆಲವು ನಾಣ್ಯಗಳು ಉತ್ತರಕನ್ನಡದಲ್ಲಿ ದೊರಕಿವೆ. ಕೇವಲ ಇಷ್ಟೇ ಆಧಾರಗಳ ಮೇಲೆ, ಸಂಪೂರ್ಣ ಉತ್ತರಕನ್ನಡ ಜಿಲ್ಲೆಯು ಮೌರ್ಯರ ಆಡಳಿತಕ್ಕೊಳಪಟ್ಟಿತ್ತು ಎಂದು ನಿಖರವಾಗಿ ಹೇಳಲು ಸಾಧ್ಯವಿಲ್ಲ.

ಕದಂಬರ ಪೂರ್ವದಲ್ಲಿ ಬನವಾಸಿಯು ನೇರವಾಗಿ ಸಾತವಾಹನ(ಶಾತವಾನ)ರ ಆಡಳಿತಕ್ಕೊಳಪಟ್ಟಿತ್ತೆಂದು ಹೇಳಲು ಸಾಧ್ಯವಾಗದಿದ್ದರೂ, ಸಾತವಾಹನರಿಗೆ ಬನವಾಸಿಯ ಮೇಲೆ ನಿಯಂತ್ರಣವಿತ್ತೆಂದು ಊಹಿಸಲು ಅವರದೇ ಶಾಸನಗಳು ಸುಳಿವು ನೀಡುತ್ತವೆ. ಬನವಾಸಿ ಪ್ರದೇಶದಲ್ಲಿಯ ದೋಣಿಗುಡ್ಡ, ಹೂವಿನ ಕೊಪ್ಪಲು, ಮಾರಿಹಿತ್ತಲು, ಆಸ್ಪತ್ರೆಯ ಆವರಣ ಮೊದಲಾದ ಸ್ಥಳಗಳಲ್ಲಿ ನಡೆದ ಉತ್ಖನನದಿಂದಾಗಿ ಅನೇಕ ವಿಷಯಗಳು ಬೆಳಕಿಗೆ ಬಂದಿವೆ. ಗೌತಮೀಪುತ್ರ ಶಾತಕರ್ಣಿ(ಸು. ಕ್ರಿ.ಶ. ೧೦೬-೧೩೦)ಯ ನಾಣ್ಯಗಳು ಬನವಾಸಿಯಲ್ಲಿ ದೊರಕಿವೆ.[೧೧] ಗೌತಮೀಪುತ್ರಶಾತಕರ್ಣಿಯು ವೈಜಯಂತೀ ನೆಲೆವೀಡಿನಲ್ಲಿದ್ದಾಗ ನೀಡಿದ ಆಜ್ಞೆಯೊಂದರ ಉಲ್ಲೇಖ ನಾಸಿಕದ ಶಾಸನದಲ್ಲಿದೆ.[೧೨]

ಕ್ರಿ.ಶ. ಮೂರನೆಯ ಶತಮಾನದ ಬ್ರಾಹ್ಮಿಲಿಪಿ ಹಾಗೂ ಪ್ರಾಕೃತ ಭಾಷೆಯಲ್ಲಿರುವ ಸಾತವಾಹನರ ಶಾಖೆಯಾದ ಚುಟುವಂಶಕ್ಕೆ ಸಂಬಂಧಿಸಿದ ಶಾಸನವು[೧೩] ಬನವಾಸಿಯ ಮಧುಕೇಶ್ವರ ದೇವಾಲಯದಲ್ಲಿಯ ಬಲಪ್ರಾಕಾರದಲ್ಲಿಯ ಗೋಡೆಯ ಮೇಲಿನ ನಾಗಮೂರ್ತಿಯ ಬಲ ಹಾಗೂ ಎಡ ಪಾರ್ಶ್ವಗಳಲ್ಲಿ ಕಂಡುಬರುತ್ತದೆ.

---

೧೧. 'U.K.D.G.', ೧೯೮೫, P. ೮೯೩.

೧೨. ಅದೇ. ಪು. ೧೦೨.

೧೩. 'South Indian Inscriptions', Vol. XX, N. K. District, Sirsi Taluk, ೧೯೮೯, No. ೧.

ಶಿವಸ್ಕಂದ ನಾಗಶ್ರೀಯು ವಿಹಾರ, ಕೆರೆ ಮತ್ತು ನಾಗವಿಗ್ರಹವೊಂದನ್ನು ಧರ್ಮಾರ್ಥ ವಾಗಿ ಕೊಟ್ಟಳೆಂದು ತಿಳಿದುಬರುತ್ತದೆ.

ಈ ರೀತಿಯಾಗಿ, ಕದಂಬರ ಪೂರ್ವದಲ್ಲಿ ಮೌರ್ಯರು, ಸಾತವಾಹನರು ಹಾಗೂ ಸಾತವಾಹನರ ಶಾಖೆಯಾದ ಚುಟು ಮನೆತನವದರು ಬನವಾಸಿ ನಾಡನ್ನು ಕ್ರಮವಾಗಿ ಆಳುತ್ತಿದ್ದು, ಅವರು ವಿಶೇಷವಾಗಿ ಬೌದ್ಧಧರ್ಮಕ್ಕೆ ಆಶ್ರಯ ನೀಡಿದ್ದ ರೆಂಬುದು ಸ್ಪಷ್ಟವಾಗುತ್ತದೆ.

## ಬನವಾಸಿಯ ಕದಂಬರು

ಚುಟು ಮನೆತನದವರನ್ನು ಕಂಚಿಯ ಪಲ್ಲವರು ಸರಿಸಿ ಕೆಲಕಾಲ ಬನವಾಸಿ ನಾಡನ್ನು ಆಳಿದ ನಂತರ ಕದಂಬರು ಈ ಪ್ರದೇಶದ ಮೇಲೆ ತಮ್ಮ ಸ್ವಾಮ್ಯವನ್ನು ಸ್ಥಾಪಿಸಿದರು, ಬನವಾಸಿ ಮಂಡಲದ ಹೊರತಾಗಿ, ಭಾರತದ ಅನೇಕ ಸ್ಥಳಗಳಲ್ಲಿ ಕದಂಬ ಮನೆತನದವರು ಆಳಿದ್ದರಿಂದ. ಭಾರತದ ಇತಿಹಾಸದಲ್ಲಿ ಕೂಡ ಕದಂಬರಿಗೆ ವಿಶೇಷ ಸ್ಥಾನವಿದೆ.

ಜೆ. ಎಫ್. ಫ್ಲೀಟ್‌ರವರು ಕದಂಬರ ಇತಿಹಾಸವನ್ನು ಪ್ರಥಮಬಾರಿಗೆ ಬೆಳಕಿಗೆ ತಂದರು. ೧೮೯೬ ರಲ್ಲಿ ಪ್ರಕಟವಾದ ಮುಂಬಯಿ ಗೆಜೆಟಿಯರ್‌ನಲ್ಲಿ "ಕನ್ನಡ ಜಿಲ್ಲೆಗಳ ಅರಸು ಮನೆತನಗಳು" ಎಂಬ ಭಾಗದಲ್ಲಿ ಬನವಾಸಿಯ ಕದಂಬರ ಇತಿಹಾಸ ಮೊದಲು ಪ್ರಕಟಗೊಂಡಿತು. ೧೯೩೧ ರಲ್ಲಿ ಪ್ರಾ. ಟಿ. ಎಂ. ಮೊರೇಸ್ ಅವರು 'ದಿ ಕದಂಬಕುಲ' (ಮುಂಬಯಿ ವಿಶ್ವವಿದ್ಯಾಲಯ, ೧೯೩೧) ಎಂಬ ಸಂಶೋಧನಾತ್ಮಕ ಬೃಹತ್ ಗ್ರಂಥವನ್ನು ಇಂಗ್ಲೀಷ್‌ನಲ್ಲಿ ರಚಿಸಿ, ಸಾರಸ್ವತ ಲೋಕಕ್ಕೆ ಒಂದು ಅಪೂರ್ವ ಕೊಡುಗೆ ನೀಡಿದರು. 'ಸಾತವಾಹನರ ಉತ್ತರಾಧಿ ಕಾರಿಗಳು' ಎಂಬ ಕೃತಿಯಲ್ಲಿ ಡಿ. ಸಿ. ಸರ್ಕಾರ ಅವರು ಕದಂಬರನ್ನು ಕುರಿತು ವಿವೇಚಿಸಿದ್ದಾರೆ.[೧೪]

ಈ ದಿಶೆಯಲ್ಲಿ ಲೂಯಿ ರೈಸ್ ಅವರು 'ಎಪಿಗ್ರಾಫಿಯ ಕರ್ನಾಟಕ'ದಲ್ಲಿ ಕದಂಬರ ಶಾಸನಗಳನ್ನು ಕುರಿತು ವಿವೇಚಿಸಿದ್ದನ್ನು ಸ್ಮರಿಸಿಕೊಳ್ಳಬಹುದು. ೧೯೪೬ ರಲ್ಲಿ ಪ್ರಕಟಗೊಂಡ 'ಕರ್ನಾಟಕದ ಅರಸು ಮನೆತನಗಳು' ಎಂಬ ಗ್ರಂಥದಲ್ಲಿ ಎನ್. ಲಕ್ಷ್ಮೀನಾರಾಯಣರಾವ್ ಮತ್ತು ವಿದ್ಯಾರತ್ನ ಆರ್. ಎಸ್. ಪಂಚಮುಖಿ ಅವರು ಕದಂಬರ ಇತಿಹಾಸವನ್ನು ನಿರೂಪಿಸಿದರು.[೧೫] ಕರ್ನಾಟಕ ವಿಶ್ವವಿದ್ಯಾ ಲಯದ ಕನ್ನಡ ಸಂಶೋಧನ ಸಂಸ್ಥೆ ಪ್ರಕಟಿಸಿದ ಕರ್ನಾಟಕ ಚರಿತ್ರೆಯಲ್ಲಿ ಕದಂಬರ

---

೧೪. ಕಲಕತ್ತಾ ವಿಶ್ವವಿದ್ಯಾಲಯ, ೧೯೩೯.

೧೫. ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ.

ನಲ್ಲದೆ, ಸಾರ್ವಭೌಮತ್ವದ ಗುರುತಾದ ಅಶ್ವಮೇಧ ಯಾಗವನ್ನೂ ಮಾಡಿದನು..." ಎಂಬುದಾಗಿ ಡಾ. ಬಿ. ಎ. ಸಾಲೆತೊರೆಯವರು 'ಕನ್ನಡನಾಡಿನ ಚರಿತ್ರೆ' (ಪು. ೨೯) ಯಲ್ಲಿ ಹೇಳಿದ್ದಾರೆ.

ಬಹುಶಃ ಕದಂಬರ ಸಾಮಂತನಾಗಿದ್ದ ಬಾದಾಮಿ ಚಾಲುಕ್ಯರ ಮೊದಲನೆಯ ಪುಲಿಕೇಶಿಯು ಸುಮಾರು ಕ್ರಿ ಶ. ೫೪೦ ರಲ್ಲಿ ಇಮ್ಮಡಿ ಕೃಷ್ಣವರ್ಮನನ್ನು ಪರಾಭವ ಗೊಳಿಸಿರಬೇಕು. ಈ ಮಹತ್ವದ ಘಟನೆಯ ಪರಿಣಾಮವಾಗಿ, ಬನವಾಸಿಯ ಪ್ರಾಚೀನ ಕದಂಬ ಸಾಮ್ರಾಜ್ಯವೂ ಕೊನೆಗೊಂಡಿತು. ನಂತರದ ಶಾಸನಗಳು, ಇಮ್ಮಡಿ ಕೃಷ್ಣವರ್ಮನ ಮಗ ಅಜವರ್ಮ ಮತ್ತು ಅಜವರ್ಮನ ಮಗ ಭೋಗಿ ವರ್ಮ ಇವರನ್ನು ಕುರಿತು ಹೇಳಿದರೂ, ಇವರು ಬಾದಾಮಿ ಚಾಲುಕ್ಯರ ಸಾಮಂತ ರಾಗಿ ಆಳಿದರೆಂಬುದು ಖಚಿತವಾಗುತ್ತದೆ.[೧೮]

ಬನವಾಸಿಯ ಪ್ರಾಚೀನ ಕದಂಬರ ಆಳ್ವಿಕೆ, ಬಾದಾಮಿ ಚಾಲುಕ್ಯರ ಏಳ್ಗೆ ಯಿಂದಾಗಿ ಆಳಿದರೂ, ಪ್ರಾಚೀನ ಕದಂಬರದೇ ಹಲವಾರು ಶಾಖೆಗಳ ಅರಸರುಗಳು ದಕ್ಷಿಣ ಭಾರತದಲ್ಲಿಯ ಬೇರೆ ಬೇರೆ ಭಾಗಗಳಿಂದ ಆಳುತ್ತಿದ್ದರೆಂಬುದು ಅವರ ಶಾಸನ ಗಳಿಂದಲೇ ಸ್ಪಷ್ಟವಾಗುತ್ತದೆ. ಹಾನಗಲ್ ಮತ್ತು ಗೋವೆಯ ಕದಂಬರು ಪ್ರಮುಖರಾಗಿದ್ದು, ಬಯಲುನಾಡು, ಬೇಲೂರು, ಬಂಕಾಪುರ, ಉಚ್ಚಂಗಿ, ನಾಗರ ಖಂಡ ಮತ್ತು ಕನಿಂಗ, ಈ ಪ್ರದೇಶಗಳಲ್ಲಿ ರಾಜ್ಯಭಾರ ಮಾಡಿದವರು ತುಲನಾತ್ಮಕ ವಾಗಿ ಚಿಕ್ಕವರು, ಇಲ್ಲವೆ ಮಾಂಡಲಿಕರಾಗಿದ್ದರು. ಮೂಲ ಕದಂಬ ಮನೆತನ ದೊಡನೆ ಇವರ ಸಂಬಂಧ ಕಲ್ಪಿಸುವುದು ಕಷ್ಟವಾದರೂ, ನಂತರದಲ್ಲಿಯ ಕೆಲವು ಕದಂಬ ಅರಸುಗಳು 'ಬನವಾಸಿ ಪುರವರಾಧೀಶ್ವರ' ಎಂಬ ಉಪಾಧಿಯನ್ನು ತಮ್ಮ ಹೆಸರಿನೊಂದಿಗೆ ಹಚ್ಚಿಕೊಳ್ಳುತ್ತಿದ್ದರು. ಗೋವೆಯ ಕದಂಬರ ಪ್ರಥಮ ಅರಸನಾದ ಮೊದಲನೆಯ ಶಷ್ಠ (ಸು ಕ್ರಿ.ಶ. ೯೭೫-೫೦) ನ ಗಣದೇವಿ ಶಾಸನವು, ಮನೆತನದ ಮೂಲ ಪುರುಷನಾದ ತ್ರಿಲೋಚನ ಕದಂಬನ ವಾಸಸ್ಥಾನವು ವನವಾಸಿಪುರ (ಬನವಾಸಿ)ವಾಗಿತ್ತೆಂದು ಹೇಳುತ್ತದೆ.[೧೯]

## ಬನವಾಸಿಯ ಪ್ರಾಚೀನ ಕದಂಬರ ಸಾಧನೆಗಳು

ಪ್ರಾ. ಜಿ. ಎಂ. ಮೊರೇಸ್ ಅವರು ಕದಂಬ ಸಾಮ್ರಾಜ್ಯದಲ್ಲಿ ಧರ್ಮ, ಆಡಳಿತ, ಸಾಮಾಜಿಕ ಜೀವನ, ಯುದ್ಧಕಲೆ, ವ್ಯಾಪಾರ, ಉದ್ಯಮ, ಶಿಕ್ಷಣ,

---

೧೮. 'U.K.D.G.', ೧೯೮೫, P. ೧೦೮.

೧೯. A. S. Gadre, 'Important Inscriptions from the Baroda State', Vol.೧, ೧೯೪೩.

ಸಾಹಿತ್ಯ, ವಾಸ್ತುಶಿಲ್ಪ, ಮೂರ್ತಿಶಿಲ್ಪ ಮೊದಲಾದ ವಿಷಯಗಳನ್ನು ಸಂಶೋಧನಾತ್ಮಕವಾಗಿ ಮತ್ತು ಸವಿಸ್ತಾರವಾಗಿ ವಿವರಿಸಿದ್ದಾರೆ.[೨೦] ಹೀಗಾಗಿ ಅವುಗಳ ವಿವರಣೆಗಳಿಗಿಂತ ಸಾರಾಂಶವೇ ಸಮಂಜಸ.

ಪ್ರಾಚೀನ ಕದಂಬ ಸಾಮ್ರಾಟರು ತಮ್ಮನ್ನು "ಧರ್ಮ ಮಹಾರಾಜರು" ಎಂದು ಸಾತವಾಹನರಂತೆ ಕರೆದುಕೊಂಡಿದ್ದಾರೆ. ಮಯೂರವರ್ಮನನ್ನು "ವೈಜಯಂತಿ ಧರ್ಮ ಮಹಾರಾಜಾಧಿರಾಜ" ಮತ್ತು "ವೇದಾಂಗ ವಿದ್ಯಾವಿಶಾರದ" ಎಂದೂ, ಮೊದಲನೆಯ ಕೃಷ್ಣವರ್ಮನನ್ನು "ಧರ್ಮ ಮಹಾರಾಜ" ಎಂದೂ ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಅದೇ ರೀತಿ, ವ್ಯಾಕರಣ ಹಾಗೂ ತರ್ಕಶಾಸ್ತ್ರಗಳಲ್ಲಿ ವಿಷ್ಣುವರ್ಮನು ಪ್ರವೀಣನೆಂದೂ, ಸಿಂಹವರ್ಮನು ಹಲವಾರು ವಿದ್ಯೆಗಳಲ್ಲಿ ಪಾರಂಗತನಾಗಿದ್ದನೆಂದೂ ತಿಳಿದು ಬರುತ್ತದೆ.

ಪ್ರಧಾನ, ಮನೆವೆರ್ಗಡೆ (ಅರಮನೆಯ ಆಡಳಿತಗಾರ), ಕ್ರಮುಕಪಾಲ (ವೀಳ್ಯಕ್ಕೆ ಸಂಬಂಧಿಸಿದ ಕಾರ್ಯದರ್ಶಿ), ತಂತ್ರಪಾಲ ಮತ್ತು ಸಭಾಕಾರ್ಯ ಸಚಿವ ಎಂಬ ಐವರು ಮಂತ್ರಿಗಳ ಸಹಾಯದಿಂದ ಆಡಳಿತ ನಡೆಸಲಾಗುತ್ತಿತ್ತು ಎಂದು ಡಾ. ಮೊರೇಸ್ ಅಭಿಪ್ರಾಯಪಟ್ಟಿದ್ದಾರೆ. ಧರ್ಮಾಧ್ಯಕ್ಷನು ಮುಖ್ಯ ನ್ಯಾಯಾಧೀಶನಾಗಿದ್ದನು. ಇಡೀ ಸಾಮ್ರಾಜ್ಯವನ್ನು 'ಮಂಡಲ' (ಪ್ರಾಂತ) ಗಳನ್ನಾಗಿ ವಿಂಗಡಿಸಲಾಗಿತ್ತು. ಪ್ರತಿ ಮಂಡಲದಲ್ಲಿ ಅನೇಕ 'ವಿಷಯ' (ಜಿಲ್ಲೆ)ಗಳಿರುತ್ತಿದ್ದವು. ಪ್ರತಿ ವಿಷಯದಲ್ಲಿ ಅನೇಕ ಮಹಾಗ್ರಾಮಗಳಿರುತ್ತಿದ್ದವು. ಭೂ ಉತ್ಪನ್ನದಲ್ಲಿ ಆರರಲ್ಲಿ ಒಂದು ಭಾಗವನ್ನು ಕಂದಾಯವೆಂದು ವಸೂಲು ಮಾಡಲಾಗುತ್ತಿತ್ತು. ಅದೇ ರೀತಿ, ಗಾಣಿಗರು, ಬಡಿಗರು, ಕ್ಷೌರಿಕರು, ಕಮ್ಮಾರರು ಮೊದಲಾದ ಕಸಬುಗಳನ್ನು ಮಾಡುವವರಿಂದ ವೃತ್ತಿ ತೆರಿಗೆಯನ್ನು ಶೇಖರಿಸಲಾಗುತ್ತಿತ್ತು. ಕಾಲ್ದಳ, ಅಶ್ವಗಳು, ಆನೆಗಳು, ಹೀಗೆ ಚದುರಂಗ ಬಲಗಳಿಗೆ ದಂಡನಾಯಕ ಅಥವಾ ಸೇನಾಪತಿಯು ಮುಖ್ಯನಾಗಿದ್ದನು.

ಕದಂಬರು ಮೂಲತಃ ಬ್ರಾಹ್ಮಣ ವಂಶಜರಾಗಿದ್ದರೂ, ಮಯೂರವರ್ಮನ ನಂತರ ಕ್ಷಾತ್ರ ಧರ್ಮವನ್ನನುಸರಿಸಿದ್ದು ತಾಳಗುಂದ ಶಾಸನದಿಂದ ಮೊದಲೇ ಸ್ಪಷ್ಟಪಡಿಸಲಾಗಿದೆ. ಕದಂಬರು ವೈದಿಕ ಧರ್ಮವನ್ನು ಅನುಸರಿಸಿದರು. ಅವರು ಅಶ್ವಮೇಧ ಯಾಗವನ್ನು ಮಾಡಿದರು. ಬನವಾಸಿಯ ಮಧುಕೇಶ್ವರನ ಆರಾಧಕರಾದ ಇವರು ಶೈವ ಸಂಪ್ರದಾಯಸ್ಥರಾಗಿದ್ದರೆಂಬುದನ್ನು ತಾಳಗುಂದ ಶಾಸನದಲ್ಲಿ ಶಿವನನ್ನು ಕುರಿತು ಇರುವ ಪ್ರಾರ್ಥನಾ ಶ್ಲೋಕವು ದೃಢೀಕರಿಸುತ್ತದೆ. ಮೃಗೇಶವರ್ಮ ಹಾಗೂ ರವಿವರ್ಮರು ಜೈನ ಧರ್ಮವನ್ನು ಪೋಷಿಸಿದರು. ಮೌರ್ಯ,

---

೨೦. 'The Kadambakula', ೧೯೩೧.

ಸಾತವಾಹನ ಹಾಗೂ ಚುಟು ಅರಸುಗಳ ಕಾಲದಲ್ಲಿ ಬನವಾಸಿಯು ಬೌದ್ಧ ಧರ್ಮದ ನೆಲೆಯಾಗಿತ್ತೆಂಬುದನ್ನು ಮರೆಯುವಂತಿಲ್ಲ. ವೇದ, ವೇದಾಂತ ಮತ್ತು ನ್ಯಾಯ ಶಾಸ್ತ್ರಗಳನ್ನು ಪ್ರಣವೇಶ್ವರ ದೇವಾಲಯದಲ್ಲಿ ಕಲಿಸಲಾಗುತ್ತಿತ್ತೆಂದು ತಾಳಗುಂದ ಶಾಸನದಿಂದ ತಿಳಿದು ಬರುತ್ತದೆ. ದೇವಾಲಯಗಳು ಮತ್ತು ಅಗ್ರಹಾರಗಳು ಉನ್ನತ ಶಿಕ್ಷಣ ಕೇಂದ್ರಗಳಾಗಿದ್ದವು. ಕನ್ನಡ ಭಾಷೆಯಲ್ಲಿರುವ ಹಲ್ಮಿಡಿ ಶಾಸನದ ಹೊರತಾಗಿ, ಬನವಾಸಿ ಕದಂಬರ ಇನ್ನುಳಿದ ಶಾಸನಗಳೆಲ್ಲ ಪ್ರಾಕೃತ ಮತ್ತು ಸಂಸ್ಕೃತ ಭಾಷೆಗಳಲ್ಲಿವೆ. ಆದರೆ, ನಂತರದ ಗೋವೆಯ ಕದಂಬರ ಹೆಚ್ಚಿನ ಶಾಸನಗಳೆಲ್ಲ ಕನ್ನಡದಲ್ಲೇ ಇವೆ.[೨೧] ಕರ್ನಾಟಕದಲ್ಲಿಯ ಕುಂತಳ ದೇಶವು ಭಾರತವರ್ಷಕ್ಕೆ ಭೂಷಣವಾಗಿದ್ದು,[೨೨] ವೆಂಗಿ, ಕಳಿಂಗ, ವಂಗ, ಮಗಧ, ಆಂಧ್ರ, ಕಾಶ್ಮೀರ, ನೇಪಾಳ, ಮಾಳವ, ಮಹಾರಾಷ್ಟ್ರ, ಸೌರಾಷ್ಟ್ರ, ಕೇರಳ, ಕಾಂಭೋಜ, ತುರುಷ್ಕ, ಪಾಂಡ್ಯ, ಮಲೆಯಾಳ, ದ್ರವಿಲ ಮೊದಲಾದ ಭೂ ಪ್ರದೇಶಗಳಿಗಿಂತ ಅತ್ಯಂತ ಸುಂದರವಾಗಿದೆ ಎಂಬುದಾಗಿ ಸೊರಬದ ಶಾಸನದಿಂದ ಅರಿಯಬಹುದಾಗಿದೆ.[೨೩]

ಕುಂತಳ ದೇಶದ ವೈಭವವು ಪ್ರಾಚೀನದಲ್ಲಿ ಹೀಗಿರುವಾಗ ಚಾಲುಕ್ಯ ಅರಿಕೇಸರಿಯ ಆಸ್ಥಾನವನ್ನು ಅಲಂಕರಿಸಿದ ಕನ್ನಡದ ಆದಿ ಕವಿ ಪಂಪನು ಬನವಾಸಿಯ ಸುಂದರ ವರ್ಣನೆಯನ್ನು 'ವಿಕ್ರಮಾರ್ಜುನ ವಿಜಯ' (ಕ್ರಿ.ಶ. ೯೪೧)ದಲ್ಲಿ ಮಾಡಿದ್ದು ಸ್ವಾಭಾವಿಕ. ಆಗ ಬನವಾಸಿ ದೇಶವು ರಾಷ್ಟ್ರಕೂಟರ ದೊರೆಯಾದ ಮೂರನೆಯ ಕೃಷ್ಣ ಅಕಾಲವರ್ಷ (ಕ್ರಿ. ಶ. ೯೩೯–೯೬೮) ನ ಸಾರ್ವಭೌಮತ್ವವನ್ನು ಒಪ್ಪಿಕೊಂಡಿತ್ತು. ಕ್ರಿ. ಶ. ೯೪೧ ರಲ್ಲಿ ಪಂಪನು ಬನವಾಸಿಯನ್ನು ವರ್ಣಿಸಿದಾಗ ಬನವಾಸಿಯನ್ನು ಅಜವರ್ಮನೆಂಬವನು ರಾಷ್ಟ್ರಕೂಟರ ಮಾಂಡಲಿಕನಾಗಿ ಆಳುತ್ತಿರಬೇಕು. ಈ ಅಜವರ್ಮನ ನಂತರ, ಬನವಾಸಿಯಲ್ಲಿ ಕದಂಬ ಕುಲದ ಯಾವ ವ್ಯಕ್ತಿಯು ಆಳಿದನೆಂಬುದು ತಿಳಿದು ಬರುವುದಿಲ್ಲ. ಆದರೆ ಕ್ರಿ. ಶ. ೯೬೭ ರಲ್ಲಿ ಹಾನಗಲ್ಲನ್ನು ರಾಜಧಾನಿಯನ್ನಾಗಿ ಮಾಡಿಕೊಂಡ ಇರಿವಬೆಡಂಗದೇವ ಕದಂಬನು ಬನವಾಸಿ ರಾಜ್ಯವನ್ನು ಆಳಲಾರಂಭಿಸಿದ. ಈ ಇರಿವಬೆಡಂಗದೇವ ಕದಂಬನು ಅಜವರ್ಮನ ಮೊಮ್ಮಗನಾಗಿರಬೇಕೆಂದು ಊಹಿಸಲಾಗಿದೆ. ಫ್ಲೀಟ್, ಮೊರೇಸ್, ಗೋವಿಂದ ಪೈ, ಲಕ್ಷ್ಮೀನಾರಾಯಣರಾವ್, ಪಿ. ಬಿ. ದೇಸಾಯಿ, ಬಿ. ಆರ್. ಗೋಪಾಲ ಮೊದಲಾದ ವಿದ್ವಾಂಸರು ಬನವಾಸಿಯ ಪ್ರಾಚೀನ ಕದಂಬರ ವಂಶಾವಳಿಯನ್ನು ಅಲ್ಪಸ್ವಲ್ಪ ಭಿನ್ನವಾಗಿ ನೀಡಿದ್ದಾರೆ.[೨೪]

---

೨೧. Gurav, 'The Kadambas of Goa and their inscriptions', P. ೫.
೨೨. 'Epigraphia Carnatica' (E.C.), VIII.
೨೩. E.C. VII, Sb. ೧೩೮.
೨೪. ಡಾ. ಎ. ಕೆ. ಶಾಸ್ತ್ರಿ, 'ಶಿರಸಿ ತಾಲೂಕಿನ ಇತಿಹಾಸ', ೧೯೮೮, ಪುಟಗಳು ೪೧–೪೭.

**ಕದಂಬೋತ್ತರ ಕಾಲ**

ಇಮ್ಮಡಿ ಪುಲಿಕೇಶಿಯು ಬನವಾಸಿ ಮಂಡಲವನ್ನು ಆಳಲು ಮಂಗಳೂರಿನ ಆಳುಪರಿಗೆ ನೇಮಿಸಿದ್ದನೆಂದು ಕಂಡುಬರುತ್ತದೆ. ಚಾಲುಕ್ಯ ವಿನಯಾದಿತ್ಯನ (ಕ್ರಿ ಶ. ೬೮೧-೯೬) ಸಮಕಾಲೀನನಾದ ಆಳುಪ ಚಿತ್ರವಾಹನನು ಬನವಾಸಿ ಮಂಡಲವನ್ನು ಆಳುತ್ತಿದ್ದನು. ಅದೇ ರೀತಿ, ಕ್ರಿ. ಶ. ೯೪೧ ರಲ್ಲಿ ಬನವಾಸಿಯನ್ನು ಅಜವರ್ಮನೆಂಬವನು ರಾಷ್ಟ್ರಕೂಟರ ಮಾಂಡಲಿಕನಾಗಿ ಆಳುತ್ತಿರಬೇಕೆಂದು ಮೊದಲೇ ಅರಿತಾಗಿದೆ. ಉತ್ತರಕನ್ನಡ ಜಿಲ್ಲೆಯ ಸಾರ್ವಭೌಮತ್ವ ಹೊಂದಿದ ಕಲ್ಯಾಣ ಚಾಲುಕ್ಯರ ತ್ರೈಳೋಕ್ಯಮಲ್ಲ ಅಹವಮಲ್ಲ(ಮೊದಲನೆಯ ಸೋಮೇಶ್ವರ)ನ ಕ್ರಿ ಶ. ೧೦೬೮ ರ ಶಾಸನವೊಂದು ಬನವಾಸಿಯ ಮಧುಕೇಶ್ವರ ದೇವಾಲಯದಲ್ಲಿ ದೊರೆತಿದೆ. ಈ ಶಾಸನದಲ್ಲಿ ತ್ರೈಳೋಕ್ಯಮಲ್ಲದೇವನ ಆಳಿಕೆಯನ್ನು ಪ್ರಸ್ತಾಪಿಸಿ, ನಂತರ, "ಆತನ ಪಾದಪದ್ಮೋಪಜೀವಿಯಾದ ಬನವಾಸಿ ಕದಂಬರ ಕೀರ್ತಿವರ್ಮದೇವನ ಪ್ರಶಸ್ತಿ ಬರುತ್ತದೆ". ಕಲ್ಲದೇಗುಲಕ್ಕೆ ದತ್ತಿಯಿತ್ತಂತೆ ತೋರುತ್ತದೆ.[೨೫] ಆರನೆಯ ಚಾಲುಕ್ಯ ವಿಕ್ರಮಾದಿತ್ಯನಿಗೆ (೧೦೭೬-೧೧೨೭) ಕದಂಬ ಕೀರ್ತಿವರ್ಮನು ಕಲ್ಯಾಣದ ಪಟ್ಟವೇರಲು ಸಹಾಯ ಸಲ್ಲಿಸಿದ್ದಕ್ಕಾಗಿ ವಿಕ್ರಮಾದಿತ್ಯನು ಆತನನ್ನು ಬನವಾಸಿಯ ಮಹಾಮಂಡಲೇಶ್ವರನನ್ನಾಗಿ ನಿಯಮಿಸಿದನು. ಹನ್ನೆರಡನೆಯ ಶತಮಾನದವರೆಗೆ ಬನವಾಸಿಯು ಕದಂಬರ ರಾಜಧಾನಿಯಾಗಿತ್ತೆಂಬುದಕ್ಕೆ ಈ ಘಟನೆಯೊಂದು ನಿದರ್ಶನ. ದೇವಗಿರಿಯ ಯಾದವರೆಂದೇ ಹೆಚ್ಚು ಪ್ರಸಿದ್ಧರಾದ ಸೇವುಣರ ಕೆಲವು ಶಾಸನಗಳು ಉತ್ತರಕನ್ನಡ ಜಿಲ್ಲೆಯ ಮುಂಡಗೋಡ ಮತ್ತು ಶಿರಸಿ ತಾಲೂಕುಗಳಲ್ಲಿ ಲಭ್ಯವಾಗಿವೆ. ಕ್ರಿ. ಶ. ೧೧೪೦-೪೧ ರಲ್ಲಿ ಹೊಯ್ಸಳ ವಿಷ್ಣುವರ್ಧನನು ಬನವಾಸಿ ೧೨,೦೦೦ ಮತ್ತು ಹಾನಗಲ್ ಪ್ರದೇಶಗಳನ್ನು ಗೆದ್ದುಕೊಂಡು, ಹಾನಗಲ್ಲನ್ನು ತನ್ನ ಎರಡನೆಯ ರಾಜಧಾನಿಯನ್ನಾಗಿ ಮಾಡಿಕೊಂಡನು. ಕ್ರಿ. ಶ. ೧೧೯೨ ರಲ್ಲಿ ಇಮ್ಮಡಿ ಬಲ್ಲಾಳನ ಸಾಮಂತನಾಗಿ ಎರೆಯಣ್ಣನೆಂಬವನು ಬನವಾಸಿ ೧೨,೦೦೦ ಮಂಡಲವನ್ನು ಆಳುತ್ತಿದ್ದನು.[೨೬] ಒಟ್ಟಿನಲ್ಲಿ, ಉತ್ತರ ಕನ್ನಡದಲ್ಲಿ ಹೆಚ್ಚು ಕಾಲ, ಸೇವುಣರಿಗಿಂತ ಹೊಯ್ಸಳರದೇ ಹೆಚ್ಚು ಪ್ರಾಬಲ್ಯ ವಿದ್ದಂತೆ ತೋರುತ್ತದೆ.

ವಿಜಯನಗರ ಸಮ್ರಾಟರು ಮತ್ತು ಸ್ವಾದಿರಾಜರು ಬನವಾಸಿ ಮಂಡಲದ ಮೇಲೆ ತಮ್ಮ ಅಧಿಪತ್ಯ ಸ್ಥಾಪಿಸಿದರು. ಕ್ರಿ.ಶ. ೧೩೪೭ ರಲ್ಲಿ ಹರಿಹರ ಚಕ್ರವರ್ತಿಯ ಸಹೋದರನಾದ ಮಾರಪ್ಪನು ಉತ್ತರಕನ್ನಡದ ಮೇಲೆ ದಾಳಿಯಿಟ್ಟು ಕದಂಬರನ್ನು ಸೋಲಿಸಿದನು. ಈಗಿನ ಶಿವಮೊಗ್ಗ ಜಿಲ್ಲೆಯ ಚಂದ್ರಗುತ್ತಿಯಿಂದ ಮಾರಪ್ಪನು

೨೫. 'S. I. Inscriptions', XX, Sirsi Taluk, No. ೪೧.
೨೬. EC IV, Sr. ೩೪.

ಬನವಾಸಿ ೧೨ ೦೦೦ ದೇಶವನ್ನು ಆಳುತ್ತಿದ್ದನೆಂದು ಶಾಸನದಿಂದ ತಿಳಿದುಬರುತ್ತದೆ.[೨೭] ಮೊದಲನೆಯ ಬುಕ್ಕನ ಸಾಮಂತನಾದ ಮಾಧವಾಂಕನು ಬನವಾಸಿ ೧೨.೦೦೦ ದ ಆಡಳಿತವನ್ನು ನಡೆಸುತ್ತಿದ್ದ ಸಂಗತಿಯು ಮಧುಕೇಶ್ವರ ದೇವಾಲಯದ ಹೊರ ಆವರಣದಲ್ಲಿರುವ ತಿರುಮಲ ದೇವಸ್ಥಾನದಲ್ಲಿಯ ಕಂಬದ ಮೇಲಿನ ಮೊದಲನೆಯ ಬುಕ್ಕನ ಕ್ರಿ. ಶ ೧೩೬೮ ರ ಶಾಸನದಿಂದ ತಿಳಿದುಬರುತ್ತದೆ.[೨೮] ವಿಜಯನಗರ ಚಕ್ರವರ್ತಿಗಳ ಕಾಲದಲ್ಲಿ ಉತ್ತರಕನ್ನಡ ಜಿಲ್ಲೆಯ ಆಡಳಿತದ ಕೇಂದ್ರಸ್ಥಾನವು ಹೊನ್ನಾವರವಾಗಿತ್ತು. ವಿಜಯನಗರದಲ್ಲಿ ಶ್ರೀ ಸದಾಶಿವರಾಯರು ಆಳುತ್ತಿರುವಾಗ ಸೋದೆಯ ಇಮ್ಮಡಿ ಅರಸಪ್ಪೊಡೆಯರ ಮಕ್ಕಳೂ ಅರಸಾದೇವಿ ಅಮ್ಮನವರೂ ಬನವಸೆಯ ನರಸಿಂಹದೇವರಿಗೆ ಅಜ್ಯಾಭಿಷೇಕ, ನಂದಾದೀಪ್ತಿ, ಅಮೃತಪಡಿ, ಸಹಸ್ರನಾಮ ಪರಿಮಳಕ್ಕೆ ಕೊಟ್ಟ ಭೂದಾನ ಶಾಸನವು ಮಧುಕೇಶ್ವರ ದೇವಾಲಯ ದಲ್ಲಿ ಲಭ್ಯವಾಗಿದೆ.[೨೯] ವಸಂತೋತ್ಸವದಲ್ಲಿ ಉಪಯೋಗಿಸಲೆಂದು, ಸೋದೆಯ ರಘುನಾಥ ನಾಯಕನು ಜಯಂತಿಪುರದ ( ಬನವಾಸಿ ) ಮಧುಕೇಶ್ವರ ದೇವರಿಗೆ ಸುಂದರ ಶಿಲ್ಪಕಲೆಯುಳ್ಳ ಕಲ್ಲುಮಂಚವನ್ನು ಮಹಾಶಿವರಾತ್ರಿಯಂದು (ಕ್ರಿ.ಶ. ೧೬೨೭-೨೮) ದಾನ ಮಾಡಿದನೆಂದು ಮಧುಕೇಶ್ವರ ದೇವಾಲಯದಲ್ಲಿ ದೊರೆತ ಸಂಸ್ಕೃತ ಶ್ಲೋಕವಿರುವ ಶಿಲಾಶಾಸನವು ಹೇಳುತ್ತದೆ.[೩೦] ಕೆಳದಿಯ ಮುಮ್ಮಡಿ ಸೋಮಶೇಖರ ನಾಯಕನು ತನ್ನ ಸೀಮೆಯನ್ನು ನೋಡಲೆಂದು ಜಡೆಗೆ ಬಂದಾಗ, ಸೋದೆಯ ಇಮ್ಮಡಿ ಸದಾಶಿವನಾಯಕನು ಸೈನ್ಯ ಸಮೇತ ಬಂಧು ಜನರಿಂದೊಡಗೂಡಿ, ಗುಡ್ಡಣಾಪುರ (ಗುಡ್ನಾಪುರ) ದಲ್ಲಿ ಆತನನ್ನು ಭೇಟಿ ಮಾಡಿ, ಬನವಾಸಿಗೆ ಕರೆದುಕೊಂಡು ಹೋಗಿ, ದಿವ್ಯವಾದ ಬಟ್ಟೆ, ಆಭರಣ ಮುಂತಾದ ಕಾಣಿಕೆಗಳನ್ನು ನೀಡಿ ಉಪಚರಿಸಿದನೆಂದು ಲಿಂಗಣ್ಣ ಕವಿಯ 'ಕೆಳದಿನೃಪವಿಜಯ' ದಿಂದ ಅರಿಯಬಹುದಾಗಿದೆ.

ಕ್ರಿ. ಶ. ೧೮೦೧ ರಲ್ಲಿ ಬನವಾಸಿ ಪ್ರದೇಶದಲ್ಲಿ ಸಂಚರಿಸಿದ ಬುಕಾನನ್ ಪ್ರವಾಸಿಯು ಬನವಾಸಿ ಕುರಿತು ಕೆಲವು ಅಭಿಪ್ರಾಯಗಳನ್ನು ನೀಡುತ್ತಾನೆ.[೩೧] "...... ಈ ಪ್ರದೇಶದಲ್ಲಿ ಅಷ್ಟೊಂದು ಅರಣ್ಯವಿಲ್ಲ. ಮಣ್ಣು ಫಲವತ್ತಾಗಿದ್ದು ಸಾಗವಾನಿ ಗಿಡಗಳು ಬೆಳೆಯುತ್ತವೆ. ಕೆಲವು ಕಡೆ ಕೆಂಪು ಕಡಿಗಲ್ಲು ಭೂಮಿಯ ಮೇಲ್ಭಾಗದವರೆಗೂ ಗೋಚರಿಸುತ್ತವೆ. ಹೈದರನ ಆಡಳಿತದಲ್ಲಿ ಬನವಾಸಿಯಲ್ಲಿ

---

೨೭. EC VII, SK, ೩೭೫.

೨೮. SII, Vol. XX, N.K. Dist. Sirsi Taluk, No. ೨೩೦.

೨೯. ಅದೇ, ನಂ, ೨೪೧.

೩೦. ಅದೇ, ನಂ. ೨೫೪.

೩೧. ಅಡಿಟಿಪ್ಪಣಿ ನಂ. ೧೦ ನೋಡಿ.

೫೦೦ ಮನೆಗಳಿದ್ದು, ಈಗ ಸಂಖ್ಯೆ, ಅರ್ಧಕ್ಕಿಂತಲೂ ಕಡಿಮೆಯಾಗಿದೆ. ಹಿಂದೊಮ್ಮೆ ಬನವಾಸಿಯು ಹೆಸರುವಾಸಿಯಾದ ಸ್ಥಳವಾಗಿದ್ದರೂ, ಇಂದು, ಮುರುಕು ಕೋಟೆ ಗೋಡೆಗಳಿಂದ ಸುತ್ತುವರಿಯಲ್ಪಟ್ಟ ಬನವಾಸಿ ಅಷ್ಟೊಂದು ವಿಸ್ತಾರವಾಗಿಲ್ಲ ಈಗ ಇಲ್ಲೊಬ್ಬ ತಹಸೀಲ್ದಾರನಿರುತ್ತಾನೆ... ಬನವಾಸಿ ಸುತ್ತಮುತ್ತ ಕಬ್ಬು ಮತ್ತು ಭತ್ತವನ್ನು ಬೆಳೆಯಲಾಗುತ್ತದೆ........ ಮಧುಕೇಶ್ವರ ದೇವಾಲಯದ ಪೂಜಾರಿ ಮಧುಲಿಂಗಭಟ್ಟನು ತನಗೆ ಅನೇಕ ಶಾಸನ ಪ್ರತಿಗಳನ್ನು ತೋರಿರುವದಾಗಿ, ಇತ್ಯಾದಿ".

ಕ್ರಿ.ಶ. ೧೮೦೦ ರಲ್ಲಿ ಪ್ರಥಮಸಲ ಕರ್ನಾಟಕ, ತಮಿಳುನಾಡು ಮತ್ತು ಕೇರಳ ಗಳಲ್ಲಿ ಬ್ರಿಟಿಷ್‌ರ ವಿರುದ್ಧ ದಂಗೆಯಾಯಿತು. "ದಕ್ಷಿಣಭಾರತದ ದಂಗೆ" ಎಂದೇ ಪ್ರಸಿದ್ಧವಾದ ಈ ದಂಗೆಯಲ್ಲಿ ಬನವಾಸಿ, ಸೋಂದಾ ಮತ್ತು ಅಂಕೋಲಾದ ಪ್ರಜೆ ಗಳೂ ಭಾಗವಹಿಸಿದ್ದರು. ಸ್ವಾತಂತ್ರ್ಯ ಸಂಗ್ರಾಮದ ಅನೇಕ ಹಂತಗಳಲ್ಲಿ ಉತ್ತರ ಕನ್ನಡ ಜಿಲ್ಲೆಯ ಇತರ ಸ್ವಾತಂತ್ರ್ಯಯೋಧರಂತೆ ಬನವಾಸಿ ಪ್ರದೇಶದವರೂ ಸಕ್ರಿಯ ಪಾತ್ರವಹಿಸಿದ್ದರು. ಸ್ವದೇಶಿ ಚಳವಳಿ, ಅಸಹಕಾರ ಚಳವಳಿ, ಉಪ್ಪಿನ ಸತ್ಯಾಗ್ರಹ, ಜಂಗಲ್ ಸತ್ಯಾಗ್ರಹ, ಕರನಿರಾಕರಣ ಚಳವಳಿ, ಚಲೇಜಾವ್ ಚಳವಳಿ, ಹಿಂದುಸ್ತಾನಿ ಸೇವಾದಳದ ಚಟುವಟಿಕೆ ಮುಂತಾದ ಕಾರ್ಯಗಳಲ್ಲಿ ಬನವಾಸಿ ಯವರು ತಾವು ನಿರ್ವಹಿಸಬೇಕಾದ ಪಾತ್ರವನ್ನು ನಿರ್ವಹಿಸಿದ್ದಾರೆ. ಬನವಾಸಿಯ ಹರ್ಡೇಕರ್ ಮಂಜಪ್ಪನವರ ಪಾತ್ರವು ಚಿರಸ್ಮರಣೀಯವಾದುದು. ಅದೇ ರೀತಿ, ಶ್ರೀ ಗುರುನಾಥ ಕೇಶವ ಅಭ್ಯಂಕರ, ಚೆನ್ನಪ್ಪ ಚೆನ್ನಬಸಪ್ಪ ಮುಳಗುಂದ, ಚಂದ್ರ ಶೇಖರ ವೀರಪ್ಪ ಮುಳಗುಂದ ಮತ್ತು ಅನೇಕರನ್ನು ಹೆಸರಿಸಬಹುದು.[೩೨]

ಹೀಗಿದೆ, ಬನವಾಸಿಯ ಸಂಕ್ಷಿಪ್ತ ಐತಿಹಾಸಿಕ ಹಿನ್ನೆಲೆ. ಬನವಾಸಿಯ ಧಾರ್ಮಿಕ ಹಿನ್ನೆಲೆ, ಶಾಸನಸಂಪತ್ತು, ವಾಸ್ತು ಮತ್ತು ಶಿಲ್ಪಕಲೆ, ಸಾಹಿತ್ಯ ಮತ್ತು ಸಾಮಾಜಿಕ ಸಮೀಕ್ಷೆಗಳಿಗೆ ಸಂಬಂಧಿಸಿದ ವಿಷಯಗಳು ಈ ಲೇಖನದ ವ್ಯಾಪ್ತಿಗೆ ಮೀರಿದ್ದರಿಂದ ಆ ವಿಷಯಗಳ ವಿಶ್ಲೇಷಣೆಯನ್ನು ಪ್ರಸ್ತುತ ಲೇಖನದಲ್ಲಿ ಮಾಡಲಾಗಿಲ್ಲ. ಇವೆಲ್ಲ ವಿಷಯಗಳ ಸಮಸ್ತ ಅಧ್ಯಯನವಾದಾಗ, ಬನವಾಸಿಯ ಅಧ್ಯಯನಕ್ಕೆ ಒಂದು ವಿಶೇಷ ಮೆರುಗು ಬಂದಂತಾಗುವದರಲ್ಲಿ ಸಂದೇಹವಿಲ್ಲ. ಬನವಾಸಿಗೆ ಸಂಬಂಧಿಸಿದ ವಿಚಾರಗೋಷ್ಠಿಗಳು ನಡೆದು, ಸಂಶೋಧನಾತ್ಮಕ ಲೇಖನಗಳು ಪ್ರಕಟವಾಗುವುದು ಆತ್ಯವಶ್ಯ. ಇವುಗಳ ಜೊತೆಗೆ ಬನವಾಸಿಯು ತನ್ನ ಪ್ರಾಚೀನ ಘನತೆ ಮತ್ತು ಸೌಂದರ್ಯವನ್ನು ಪುನಃ ಪಡೆಯಬೇಕಾಗಿದೆ. ಬನವಾಸಿ ಪ್ರದೇಶದಲ್ಲಿ ಉತ್ಖನನ ಕಾರ್ಯವು ಭರದಿಂದ ಸಾಗಬೇಕು; ಪ್ರಾಚ್ಯವಸ್ತು ಸಂಗ್ರಹಾಲಯವು ವಿಶಾಲ

೩೨. ಹೆಚ್ಚಿನ ಮಾಹಿತಿಗಾಗಿ, ಡಾ. ಎ. ಕೆ. ಶಾಸ್ತ್ರಿ, 'ಶಿರಸಿ ತಾಲೂಕಿನ ಇತಿಹಾಸ,' ೧೯೮೯, ಪುಟಗಳು ೧೦೧–೧೨೪ ನೋಡಿ.

ವಾಗಿರಬೇಕು, ಸಂಶೋಧನಾ ಕೇಂದ್ರವಾಗಿ ಬೆಳೆಯಬೇಕು, ಅಭಯಾರಣ್ಯವು ಬೆಳೆದು ಪಂಪನು ಕಂಡು ಸವಿದ ವನಸಂಪತ್ತು ಸಮೃದ್ಧಿಯಾಗಬೇಕು ಮತ್ತು ಬನವಾಸಿ ಪ್ರದೇಶವು ಉತ್ತರಕನ್ನಡ ಜಿಲ್ಲೆಯಲ್ಲಿಯೇ ಪ್ರಸಿದ್ಧ ಪ್ರವಾಸಿ ತಾಣವಾಗಿ ಬೆಳೆಯಬೇಕು. ಈ ದಿಶೆಯಲ್ಲಿ, ಬನವಾಸಿ ವಲಯ ಅಭ್ಯುದಯ ಸಮಿತಿಯವರು, ಅದರಲ್ಲೂ, ಶ್ರೀ ಕೆ. ಅಭಿಶಂಕರರವರು ಸೇವೆ ಸಲ್ಲಿಸುತ್ತಿರುವುದು ಸ್ತುತ್ಯರ್ಹವಾದುದು.




# ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನದ ಚರಿತ್ರೆ

ಶ್ರೀ ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನದ ಚರಿತ್ರೆಯು ಆದಿಶಂಕರರಷ್ಟೇ ಪುರಾತನವಾದುದು. ಸುಮಾರು ಹನ್ನೆರಡುನೂರು ವರ್ಷಗಳ ಹಿಂದೆ ಆದಿಶಂಕರರು ಅವತರಿಸಿ ಮಠಗಳನ್ನು ಸ್ಥಾಪಿಸಿ, ತನ್ಮೂಲಕ ಅದ್ವೈತ ಸಿದ್ಧಾಂತವನ್ನು ಪ್ರಕಾಶಿಸಿ, ವೈದಿಕ ಧರ್ಮವನ್ನು ಪ್ರಚುರಪಡಿಸಿ, ಪ್ರಜೆಗಳ ಅಭ್ಯುದಯ ಮತ್ತು ದೇಶದ ಐಕ್ಯತೆಗಾಗಿ ಭಕ್ತಿ, ಕರ್ಮ ಮತ್ತು ಜ್ಞಾನ ಮಾರ್ಗಗಳನ್ನು ಪ್ರತಿಪಾದಿಸಿದರೆಂಬುದು ಐತಿಹಾಸಿಕ ಸತ್ಯ. ಶಂಕರರು ಪ್ರತ್ಯಕ್ಷವಾಗಿ ಮತ್ತು ತಮ್ಮ ಶಿಷ್ಯರ ಮೂಲಕ ಪರೋಕ್ಷವಾಗಿ ದೇಶದ ಅನೇಕ ಭಾಗಗಳಲ್ಲಿ ಮಠಗಳನ್ನು ಸ್ಥಾಪಿಸಲು ಕಾರಣ ರಾದರು. ಅಂಥ ಅದ್ವೈತ ಮಠಗಳ ಪರಂಪರೆಯು ಇಂದಿಗೂ ಸಾಗಿ ಬಂದಿದೆ. ಸ್ವರ್ಣವಲ್ಲೀಮಠ ಅಂಥ ಮಠಗಳಲ್ಲಿ ಒಂದು.

**ಆಕರ ಸಾಮಗ್ರಿಗಳು**

ಶ್ರೀಮಠದಲ್ಲಿರುವ ಸುಮಾರು ೩೦೦೦೦ ಚಾರಿತ್ರಿಕ ದಾಖಲೆಗಳು, ಮಂತ್ರ ಭಾಗ ಮತ್ತು ಧಾರ್ಮಿಕ ವಿಷಯಗಳನ್ನೊಳಗೊಂಡ ಸಹಸ್ರಾರು ತಾಡೋಲೆಗಳು, ಕಿರ್ದಿ ಪುಸ್ತಕಗಳು, ಶಿಲಾ ಮತ್ತು ತಾಮ್ರ ಶಾಸನಗಳು ಮತ್ತು ಅವುಗಳ ಪ್ರತಿಗಳು ಗೋಕರ್ಣ, ಮಂಜಗುಣಿ ಮತ್ತಿನ್ನಿತರ ಪ್ರದೇಶಗಳಲ್ಲಿ ಲಭ್ಯವಿರುವ ದಾಖಲೆಗಳು, ಸಂಸ್ಥಾನದ ಸೀಮೆಗಳಲ್ಲಿಯ ದೇವಾಲಯಗಳು ಮತ್ತು ಪ್ರಾಚ್ಯಾವಶೇಷಗಳು ಸ್ವರ್ಣವಲ್ಲೀ ಸಂಸ್ಥಾನದ ಚರಿತ್ರೆಯ ಮೇಲೆ ಬೆಳಕು ಬೀರುವ ಪ್ರಧಾನ ಆಕರ ಸಾಮಗ್ರಿಗಳು. ಸ್ವರ್ಣವಲ್ಲೀ ಮಠದ ಪೂರ್ವಚರಿತ್ರೆಯನ್ನರಿಯಲು ಗುರು ಪರಂಪರೆಯಲ್ಲಿ ೩೮ ನೆಯವರಾದ ಶ್ರೀ ಗಂಗಾಧರೇಂದ್ರ ಸರಸ್ವತಿಗಳು ರಚಿಸಿದ 'ಜ್ಞಾನದೀಪಿಕಾ' ಎಂಬ ಸಂಸ್ಕೃತ ಗ್ರಂಥ ಉಪಯುಕ್ತವಾದುದು.

**ಕಾಶಿಯಲ್ಲಿ ಶ್ರೀಮಠ :** "...ಪೂರ್ವದಲ್ಲಿ ಅಹಿಕ್ಷೇತ್ರದಲ್ಲಿ ಹೈವ ದ್ರಾವಿಡ ಬ್ರಾಹ್ಮಣನಾದ ವಿಶ್ವಪತಿ ದೀಕ್ಷಿತರ ಮಗನಾದ ಗುಣನಿಧಿ ಎಂಬುವನು ವಿರಕ್ತನಾಗಿ ಗೋಕರ್ಣ ಮಹಾಕ್ಷೇತ್ರದಲ್ಲಿ ದೇವತಾನುಗ್ರಹ ಸಂಪಾದಿಸಿಕೊಂಡು, ಶ್ರೀಮತ್ ಕಾಶೀಕ್ಷೇತ್ರಕ್ಕೆ ಹೋಗಿ, ಅಲ್ಲಿ ಶ್ರೀ ಶಂಕರಾಚಾರ್ಯರಿಗೆ ಹೇಳಿಕೊಳ್ಳಲಾಗಿ, ಅವರ ಅನುಗ್ರಹದಿಂದ ತಮ್ಮ ಶಿಷ್ಯರಾದ ಭಾಸ್ಕರೇಂದ್ರ ಸರಸ್ವತಿಗಳಿಂದ ಯತ್ಯಾಶ್ರಮ ವನ್ನು ಕೊಡಿಸಿ, ವರಾಹ ದೇವರು, ತುಂಗಭದ್ರಾತೀರ್ಥ ಭೂರಿವಾಳ ಸಂಪ್ರದಾಯ

ಪೂರ್ವಕ ವಿಶ್ವವಂದ್ಯ ಸರಸ್ವತಿಗಳೆಂತ ಯೋಗಪಟ್ಟ ಮಾಡಿ, ಶ್ರೀ ನರಸಿಂಹ ದೇವರ ವಿಗ್ರಹ, ಚಂದ್ರಮೌಳೀಶ್ವರ ದೇವರಲಿಂಗ ಸಹಾ ಕೊಟ್ಟು, ನೀನು ಗೋಕರ್ಣ ಮಂಡಲಕ್ಕೆ, ಹೈವದ್ರಾವಿಡ ಬ್ರಾಹ್ಮಣ್ಯಕ್ಕೆ ಧರ್ಮಶಾಸ್ತ್ರ ಮಾರ್ಗದಲ್ಲಿ ವರ್ತಿಸಿ ಗುರುವಾಗಿ ಇರು ಎಂದು ಅಪ್ಪಣೆ ಕೊಟ್ಟ ಬಳಿಕ ಕಾಶಿ ರಾಜನಿಂದ ನಿರ್ಮಿಸಿದ ದಶಾಶ್ವಮೇಧ ಘಾಟಿನಲ್ಲಿ ಇರುವ ಮಠದಲ್ಲಿ ಕೆಲವು ದಿವಸ ಇದ್ದು, ನಾರಾಯಣೇಂದ್ರ ಸರಸ್ವತಿಗಳೆಂಬ ಶಿಷ್ಯರ ಮಾಡಿದರು..." ಎಂಬುದಾಗಿ ೨೨ಳ ನೆಯ ದಾಖಲೆ ಮತ್ತು 'ಜ್ಞಾನದೀಪಿಕಾ' ಇವುಗಳಿಂದ ತಿಳಿದು ಬರುತ್ತದೆ.

**ಉಜ್ಜಯಿನಿಯಲ್ಲಿ ಶ್ರೀಮಠ :** ದೇವಿ ಭವಾನಿಯಿಂದ ವರ ಪಡೆದ ನಾರಾಯಣೇಂದ್ರರು ಶಿಷ್ಯರೊಂದಿಗೆ ಉಜ್ಜಯಿನಿಗೆ ಬಂದರು. ಉಜ್ಜಯಿನಿಯ ವಿಕ್ರಮಾದಿತ್ಯ ಅರಸನು ಕಾಳಿಕಾ ದೇವಾಲಯದ ಬಳಿ ಮಠ ನಿರ್ಮಾಣ ಮಾಡಿಸಿ, ಶ್ರೀಗಳಿಗೆ ಕಿರೀಟ, ಶ್ವೇತಛತ್ರ, ಮೇನೆ, ತೀರ್ಯಗಾಂದೋಲಿಕ, ಉಭಯ ಚಾಮರ, ಮಕರ ತೋರಣ, ವ್ಯಾಖ್ಯಾನ ಸಿಂಹಾಸನ, ಹಗಲು ದೀವಟಿಗೆಗಳು, ಸಿಂಹದ ಮುಖ, ಸೂರ್ಯ-ಚಂದ್ರ ಚಿತ್ರಿತ ಪತಾಕಾದಿ ಚಿಹ್ನೆಗಳು, ತಾಳ, ಶಂಖ, ಚಕ್ರಾದಿ ವಾದ್ಯ ವಿಶೇಷಗಳು ಮತ್ತು ಸಕಲ ಬಿರುದಾವಳಿಗಳನ್ನು ರಾಜಸಭೆಯಲ್ಲಿ ಘೋಷಿಸಿ, ಶಿಲಾ ಮತ್ತು ತಾಮ್ರ ಶಾಸನಗಳನ್ನು ಮಾಡಿಸಿ, ಶ್ರೀ ನಾರಾಯಣೇಂದ್ರರನ್ನು ಸತ್ಕರಿಸಿದನು. ಉಜ್ಜಯಿನಿ ಮಠದ ಗುರುಪರಂಪರೆಯಲ್ಲಿ, ಶ್ರೀ ಕೈವಲ್ಯೇಂದ್ರ, ಶ್ರೀ ಪ್ರಕಾಶೇಂದ್ರ, ಶ್ರೀ ಸರ್ವಜ್ಞೇಂದ್ರ, ಹೀಗೆ ೧೭ ಗುರುಗಳು ಪೀಠವನ್ನು ಅಲಂಕರಿಸಿದರು.

## ಗೋಕರ್ಣ ಕಡತೋಕೆ ಮತ್ತು ಸಹಸ್ರಲಿಂಗಗಳಲ್ಲಿ ಶ್ರೀಮಠ

**ಗೋಕರ್ಣ :** ಪೀಠದಲ್ಲಿ ೧೯ ನೆಯವರಾದ ಶ್ರೀ ವಿಶ್ವನಾಥೇಂದ್ರರು ಗಂಗಾಧರೇಂದ್ರರನ್ನು ಶಿಷ್ಯರನ್ನಾಗಿ ಮಾಡಿಕೊಂಡು, ಗೋಕರ್ಣ ಯಾತ್ರಾಪೇಕ್ಷಿಗಳಾಗಿ, ರಾಜದತ್ತ ಸಮಸ್ತ ಬಿರುದುಗಳ ಸಮೇತ ಗೋದಾವರಿ ಮೂಲದ ಸಪ್ತಶೃಂಗ ತ್ರಿಯಂಬಕ ಕ್ಷೇತ್ರಕ್ಕೆ ಬಂದು ಅಲ್ಲಿಯೇ ಮುಕ್ತಿಹೊಂದಿದರು.

ಗುರುಪರಂಪರೆಯಲ್ಲಿ ೨೦ ನೆಯವರಾದ ಶ್ರೀ ಗಂಗಾಧರೇಂದ್ರರು ಬನವಾಸಿಯಲ್ಲಿ ಗೋರಾಷ್ಟ್ರಾಧಿಪತಿಯನ್ನು ಆಶೀರ್ವದಿಸಿ, ಗೋಕರ್ಣಕ್ಕೆ ತೆರಳಿದರು. ವಿಕ್ರಮಾರ್ಕನ ಆದೇಶದ ಮೇರೆಗೆ ಚಂದಾವರದ ಚಂದ್ರಸೇನರಸನು ಗೋಕರ್ಣದಲ್ಲಿ ನಿರ್ಮಿಸಿದ ಮಠಕ್ಕೆ, ಕ್ರಮವಾಗಿ, ಶ್ರೀ ಗಂಗಾಧರೇಂದ್ರ (೨೦), ಶ್ರೀ ವಿಶ್ವವಂದ್ಯ (೨೧), ಶ್ರೀ ಗಂಗಾಧರೇಂದ್ರ (೨೨), ಶ್ರೀ ವಿಶ್ವನಾಥ (೨೩), ಶ್ರೀ ರಾಮಚಂದ್ರ (೨೪) ಮತ್ತು ಶ್ರೀ ಮಾಧವೇಂದ್ರ ಸರಸ್ವತಿಗಳು (೨೫) ಗುರುಗಳಾದರು.

**ಕಡತೋಕೆ :** ಮುಂದೆ ಶ್ರೀ ವಿಶ್ವವಂದ್ಯ ಸರಸ್ವತಿಗಳು (೨೬) ತಮ್ಮ ಗ್ರಾಮಗಳನ್ನು ಕಂಡು ಶಿಷ್ಯರನ್ನು ಅನುಗ್ರಹಿಸಲು ಕಡತೋಕೆಗೆ ಬಂದು, ಅಲ್ಲಿ ನಿರ್ಮಿಸಲಾದ

ರಮ್ಯ ಮಠದಲ್ಲಿ ವಾಸಿಸಿದರು. ಶ್ರೀವಿಶ್ವವಂದ್ಯರು ಬ್ರಹ್ಮೀಭೂತರಾದ ನಂತರ ಇನ್ನಿಬ್ಬರು (೨೭ ಮತ್ತು ೨೮) ಸ್ವಾಮಿಗಳು ಕಡತೋಕೆಯ ಗುರುಪೀಠವನ್ನು ಅಲಂಕರಿಸಿದರು. ಈ ಮಧ್ಯಂತರದಲ್ಲಿ ಬನವಾಸಿ ಅರಸನು ಶ್ರೀಗಳವರನ್ನು ಕಂಡು, ವಿಕ್ರಮಾರ್ಕನ ಆದೇಶದಂತೆ ೧೬ ಮಠಗಳನ್ನು ೧೬ ಸೀಮೆಗಳಲ್ಲಿ ನಿರ್ಮಿಸಿ, "ನಿಮ್ಮ ಶಿಷ್ಯರ ಇರುವಿಕೆಗಾಗಿ ಸುಧಾಪುರದಲ್ಲಿ ಸಕಲ ವ್ಯವಸ್ಥೆಯೂ ಆಗಿದೆ" ಎಂದು ತಿಳಿಸಿದ್ದನು.

**ಸಹಸ್ರಲಿಂಗ :** ಪೀಠದಲ್ಲಿ ೨೯ ನೆಯವರಾದ ಶ್ರೀವಿಶ್ವವಂದ್ಯರು ಸುಧಾಪುರದ ನೃಸಿಂಹ ಭೂಪಾಲನ ಅಪೇಕ್ಷೆಯಂತೆ ಸಹಸ್ರಲಿಂಗದ ಕಡೆಗೆ ಪ್ರಯಾಣಿಸಿದರು. ಚಂದಾವರದ ಚಂದ್ರಸೇನರಸನನ್ನು ಮತ್ತು ಆನೆಗುಂದಿಯ ಅರಸನನ್ನು ಆಶೀರ್ವದಿಸಿ, ಸಹಸ್ರಲಿಂಗಮಠಕ್ಕೆ ಪ್ರಥಮ ಗುರುಗಳಾದರು. ಶ್ರೀ ವಿಶ್ವನಾಥ ಸರಸ್ವತಿಗಳ (೩೦) ಕಾಲದಲ್ಲಿ ಕಳ್ಳರು ಶ್ರೀಮಠದ ಸೊತ್ತನ್ನೆಲ್ಲ ದೋಚಿದರು. ಸುಧಾಪುರದರಸ ನರಸಿಂಹ ರಾಜನು ಕಳ್ಳರನ್ನು ಸಂಹರಿಸಿ, ಪ್ರಧಾನ ಮತ್ತು ಶಾಖಾ ಮಠಗಳನ್ನು ರಕ್ಷಿಸಲೆಂದು ೧೦೦ ರಕ್ಷಕ ಭಟರನ್ನು ನಿಯಮಿಸಿದನು. ಶ್ರೀ ವಿಶ್ವನಾಥ ಸರಸ್ವತಿಗಳು ಪಂಡಿತರನ್ನು ಸಂಭಾವನೆಯಿಂದ ಸಂತೃಪ್ತಿ ಪಡಿಸುತ್ತ, ಶಿಷ್ಯರನ್ನು ಧರ್ಮಾಧರ್ಮಗಳಲ್ಲಿ ಪಾಲಿಸುತ್ತ-ಶಿಕ್ಷಿಸುತ್ತ, ಕವಿಗಳು, ವೇದಪಾಠಕರು, ಪಂಡಿತರು ಮತ್ತು ಧರ್ಮಶಾಸ್ತ್ರಜ್ಞರಿಂದೊಡಗೂಡಿ, ಪುರಾಣಿಕರು, ವಂದಿಗಳು, ಚಾರರು, ಯಾಚಕರು, ಸೇವಕರು ನಾನಾ ದೇಶಗಳಿಂದ ಬಂದ ಸಂದರ್ಶಕರು, ಕುಂಟರು, ಕಿವುಡರು, ದಡ್ಡರು, ರೋಗಿಗಳು, ಅನಾಥರು, ದುಃಖಿಗಳು ಮುಂತಾದವರನ್ನೆಲ್ಲ ಅನುಗ್ರಹಿಸುತ್ತ ಹರಿಸೇವೆ ಮಾಡುತ್ತ ಇರುತ್ತಿದ್ದರು. ಮುಂದೆ ಕ್ರಮವಾಗಿ, ಶ್ರೀ ಪ್ರಕಾಶೇಂದ್ರ (೩೧), ಶ್ರೀ ಪ್ರತ್ಯಗ್ಬ್ರಹ್ಮೇಂದ್ರ (೩೨) ಮತ್ತು ಶ್ರೀ ಸರ್ವಜ್ಞೇಂದ್ರ ಸರಸ್ವತಿಗಳೆಂಬ (೩೩) ಯತಿವರ್ಯರು ಸಹಸ್ರಲಿಂಗ ಮಠದಲ್ಲಿ ವಿರಾಜಿಸಿದರು.

ಶ್ರೀಮಠವು ಕಾಶಿಯಿಂದ ಉಜ್ಜಯಿನಿಗೆ, ಉಜ್ಜಯಿನಿಯಿಂದ ಗೋಕರ್ಣಕ್ಕೆ, ಗೋಕರ್ಣದಿಂದ ಕಡತೋಕೆಗೆ ಮತ್ತು ಕಡತೋಕೆಯಿಂದ ಸಹಸ್ರಲಿಂಗಕ್ಕೆ ಎಂದು ಸ್ಥಳಾಂತರಗೊಂಡಿತೆಂದು ಹೇಳಲಿಕ್ಕಾಗಲೀ, ಅಥವಾ ಈ ಪೀಠಗಳಲ್ಲಿ ವಿರಾಜಿಸಿದ ಗುರುಗಳ ಕಾಲವನ್ನು ನಿರ್ದಿಷ್ಟವಾಗಿ ಹೇಳಲಿಕ್ಕಾಗಲೀ ಸಾಧ್ಯವಿಲ್ಲ. ಆದರೂ, ಉಜ್ಜಯಿನಿ ವಿಕ್ರಮಾರ್ಕನ ಕ್ರಿ ಶ. ೯೦೫ ರ ಶಾಸನ, ಸೋದೆಯ ಇಮ್ಮಡಿ ಅರಸಪ್ಪ ನಾಯಕನ ಕ್ರಿ. ಶ. ೧೫೫೬ ರ ಶಾಸನ ಮತ್ತು ಮಧ್ಯಂತರದ ಅನೇಕ ಐತಿಹಾಸಿಕ ಘಟನೆಗಳನ್ನು ಜ್ಞಾಪಿಸಿಕೊಂಡಲ್ಲಿ, ೧೦ ನೆಯ ಶತಮಾನದ ಆದಿಯಿಂದ ೧೨ ನೆಯ ಶತಮಾನದ ಆದಿಯವರೆಗೆ ಉಜ್ಜಯಿನಿ, ೧೨ನೆಯ ಶತಮಾನದ ಆದಿಯಿಂದ ೧೩ನೆಯ ಶತಮಾನದ ಮಧ್ಯಭಾಗದವರೆಗೆ ಗೋಕರ್ಣ, ೧೩ ನೆಯ ಶತಮಾನದ ಮಧ್ಯದಿಂದ ೧೪ ನೆಯ ಶತಮಾನದ ಮಧ್ಯದವರೆಗೆ ಕಡತೋಕೆ ಮತ್ತು ೧೪ ನೆಯ ಶತಮಾನದ

ಮಧ್ಯಭಾಗದಿಂದ ಕ್ರಿ. ಶ. ೧೫೫೬ ರ ವರೆಗೆ ಸಹಸ್ರಲಿಂಗ – ಸ್ಥಳಗಳಲ್ಲಿ ಶ್ರೀಮಠವು ಅಸ್ತಿತ್ವದಲ್ಲಿತ್ತೆಂದು ಸಾಮಾನ್ಯವಾಗಿ ಊಹಿಸಬಹುದು.

ವಿಜಯನಗರ ಸಾಮ್ರಾಜ್ಯದ ವೀರಬುಕ್ಕರಾಯ ಮತ್ತು ಕೃಷ್ಣದೇವರಾಯರ ಕಾಲದಲ್ಲಿ ಶ್ರೀಮಠ ಸಹಸ್ರಲಿಂಗದಲ್ಲೇ ಇದ್ದು, ಅನೇಕ ಕಾಲು ಮಠಗಳನ್ನೊಳಗೊಂಡಿತ್ತೆಂದು ತಿಳಿದುಬರುತ್ತದೆ.

**ಸ್ವಾದಿ ಅರಸರ ಕಾಲ :** ಹದಿನಾರನೆಯ ಶತಮಾನದ ಮಧ್ಯದಿಂದ ಹದಿನೆಂಟನೆಯ ಶತಮಾನದ ಮಧ್ಯದವರೆಗೆ ಸ್ವಾದಿಯ ಅರಸರು ರಾಜ್ಯಭಾರ ಮಾಡಿದರು. ಕ್ರಿ.ಶ. ೧೭೬೩ ರಲ್ಲಿ ಹೈದರಲಿಯ ಸೇನೆಯು ಸ್ವಾದಿ ರಾಜ್ಯವನ್ನು ಗೆದ್ದುಕೊಳ್ಳುವದರ ಜೊತೆಗೆ, ಸೋದಾ ರಾಜ್ಯದ ಪತನವೂ ಆಯಿತು.

ತಮ್ಮ ವಂಶಸ್ಥರಿಗೆಲ್ಲ ಶಿವಸಾಯುಜ್ಯ ಮೋಕ್ಷ ಪದವು ಸ್ಥಿರವಾಗಬೇಕೆಂದು, ಇಮ್ಮಡಿ ಅರಸಪ್ಪನಾಯಕನು ೩೪ ನೆಯವರಾದ ಶ್ರೀ ಚಂದ್ರಶೇಖರ ಸರಸ್ವತಿಗಳಿಗೆ ಕ್ರಿ. ಶ. ೧೫೫೬ ರಲ್ಲಿ ಶಾಲ್ಮಲೀ ತೀರದ ವಿಶಾಲವಾದ ಪ್ರದೇಶದಲ್ಲಿ, ಮಠ, ಚಂದ್ರಶಾಲೆ, ಶ್ರೀ ಲಕ್ಷ್ಮೀನರಸಿಂಹ, ಚಂದ್ರಮೌಳೀಶ್ವರ ದೇವಾಲಯ, ಶಾರದಾ, ಗಣಪತಿ, ವ್ಯಾಸಾದಿಗಳಿರುವ ಬೇರೆ ಬೇರೆ ಗುಡಿಗಳನ್ನು ಕಟ್ಟಿಸಿ, 'ಶ್ರೀ ಸ್ವರ್ನವಲ್ಲಿ ಮಠ' ಎಂದು ನಾಮಧೇಯವಿಟ್ಟು, ಪೂಜೆ, ವಿನಿಯೋಗ ನಿತ್ಯದಲ್ಲಿ ನಡೆಯಲೆಂದು ಸೋದಾ ಗ್ರಾಮಕ್ಕೆ 'ಹೊನ್ನಹಳ್ಳಿ ಗ್ರಾಮ'ವೆಂದು ಹೆಸರು ನಿರ್ಮಿಸಿ, ೫೨ ಗ್ರಾಮಗಳನ್ನು ಶ್ರೀಮಠಕ್ಕೆ ಉಂಬಳಿಯಾಗಿ ಕೊಟ್ಟನೆಂದು ಶಾಸನದ ಪಾಠವು ತಿಳಿಸುತ್ತದೆ.

ಸೋದೆಯ ದೊರೆಗಳಾದ, ಕ್ರಮವಾಗಿ, ಇಮ್ಮಡಿ ಅರಸಪ್ಪ, ರಾಮಚಂದ್ರ, ರಘುನಾಥ, ಮಧುಲಿಂಗ, ಸವಾಯಿ ರಾಮಚಂದ್ರ, ಇಮ್ಮಡಿ ಸದಾಶಿವ, ಇಮ್ಮಡಿ ಬಸವಲಿಂಗ ಮತ್ತು ಮುಮ್ಮಡಿ ಸದಾಶಿವ ನಾಯಕರು ಸ್ವರ್ಣವಲ್ಲೀ ಮಠಕ್ಕೆ ಭೂದಾನ ಮಾಡಿ, ಮಠ ರಕ್ಷಿಸಿ, ಗುರುಗಳನ್ನು ಗೌರವಿಸಿದರೆಂದು ಸ್ವರ್ಣವಲ್ಲಿಯ ಚಾರಿತ್ರಿಕ ದಾಖಲೆಗಳು ಸ್ಪಷ್ಟಪಡಿಸುತ್ತವೆ.

ಸೋದೆಯರಸರ ಕಾಲದಲ್ಲಿ, ಕ್ರಮವಾಗಿ, ಹಿರೆ ಶ್ರೀ ಚಂದ್ರಶೇಖರ ಸರಸ್ವತೀ (೩೪), ಶ್ರೀ ಸರ್ವಜ್ಞೇಂದ್ರ ಸರಸ್ವತೀ (೩೫), ಶ್ರೀ ರಾಮಚಂದ್ರ ಸರಸ್ವತೀ(೩೬), ಶ್ರೀ ಸರ್ವಜ್ಞೇಂದ್ರ ಸರಸ್ವತೀ (೩೭), ಶ್ರೀ ಗಂಗಾಧರೇಂದ್ರ ಸರಸ್ವತೀ (೩೮), ಶ್ರೀ ಸರ್ವಜ್ಞೇಂದ್ರ ಸರಸ್ವತೀ (೩೯), ಶ್ರೀ ರಾಮಚಂದ್ರ ಸರಸ್ವತೀ (೪೦), ಶ್ರೀ ಸರ್ವಜ್ಞೇಂದ್ರ ಸರಸ್ವತೀ (೪೧), ಶ್ರೀ ಮಾಧವೇಂದ್ರ ಸರಸ್ವತೀ (೪೨), ಶ್ರೀ ಸರ್ವಜ್ಞೇಂದ್ರ ಸರಸ್ವತೀ (೪೩), ಶ್ರೀ ರಾಮಚಂದ್ರ ಸರಸ್ವತೀ (೪೪), ಶ್ರೀ ಪ್ರತ್ಯಗ್ಬ್ರಹ್ಮೇಂದ್ರ ಸರಸ್ವತೀ (೪೫), ಶ್ರೀ ರಾಮಚಂದ್ರ ಸರಸ್ವತೀ (೪೬), ಶ್ರೀ ಸರ್ವಜ್ಞೇಂಪ್ರ ಸರಸ್ವತೀ (೪೭) ಎಂಬ ಗುರುಗಳು ಸ್ವರ್ಣವಲ್ಲೀ ಪೀಠವನ್ನು ಅಲಂಕರಿಸಿದರೆಂದು ತಿಳಿದುಬರುತ್ತದೆ.

**ಹೈದರ ಮತ್ತು ಟಿಪ್ಪುಸುಲ್ತಾನರ ಕಾಲ :** ಹೈದರ ಮತ್ತು ಟಿಪ್ಪು ಸುಲ್ತಾನರ ಆಡಳಿತವು ಸ್ವರ್ಣವಲ್ಲೀ ಪ್ರದೇಶದಲ್ಲಿ ಜಾರಿಯಲ್ಲಿತ್ತೆಂದು ತಿಳಿದು ಬರುತ್ತದೆ ಸ್ವಾದಿ ಅರಸರ ಕಾಲದಲ್ಲಿ ನೀಡಲಾಗಿದ್ದ ಧರ್ಮಸಾಧನಗಳು, ಹೈದರಲಿ ಮತ್ತು ಬಾಜಿರಾಯರ ಸೈನ್ಯ ದಂಡೆತ್ತಿ ಬಂದಾಗ ಅವಾಂತರವಾಗಿ ಹೋಗಿದ್ದರಿಂದ, ಅವುಗಳನ್ನು ಪುನಃ ದಯಪಾಲಿಸಬೇಕಾಗಿ ಸ್ಥಳಿಕರು ಮುಸಲ್ಮಾನ ಅಧಿಕಾರಿಗಳಲ್ಲಿ ವಿನಂತಿಸಿಕೊಂಡಿದ್ದನ್ನು ಗಮನಿಸಬಹುದಾಗಿದೆ. ಹೈದರಲಿಯು ಸೇನೆ ಸೋದೆ ರಾಜ್ಯವನ್ನು ಕೊಳ್ಳೆಹೊಡೆದಾಗ (ಕ್ರಿ.ಶ. ೧೭೬೩), ಗುರುಪರಂಪರೆಯಲ್ಲಿ ೪೭ನೆಯವ ರಾದ ಶ್ರೀ ಸರ್ವಜ್ಞೇಂದ್ರ ಸರಸ್ವತಿಗಳು ಪೀಠದಲ್ಲಿದ್ದರು. ಮುಸಲ್ಮಾನ ಅಧಿಕಾರಿ ಗಳು ಹಿಂದೂ ಸ್ವಾಮಿಗಳನ್ನು ಗೌರವಿಸಿ, ಅವರಿಂದ ಫಲ-ಮಂತ್ರಾಕ್ಷತೆ ಸ್ವೀಕರಿಸು ತ್ತಿದ್ದರೆಂದು ದಾಖಲೆಗಳು ಅರುಹುತ್ತವೆ. ಈ ದಿಶೆಯಲ್ಲಿ, ಹೈದರ ಮತ್ತು ಟಿಪ್ಪು ಸುಲ್ತಾನರು ಶೃಂಗೇರಿ ಮಠದ ಜಗದ್ಗುರುಗಳನ್ನು ಗೌರವಿಸುತ್ತಿದ್ದರೆಂಬುದು ಗಮನಾರ್ಹ ಅಂಶವಾಗಿದೆ.

**ಕಂಪನಿ ಸರಕಾರದ ಕಾಲ :** ಕ್ರಿ.ಶ. ೧೭೯೯ ರಲ್ಲಿ ಟಿಪ್ಪುಸುಲ್ತಾನರ ಪತನ ವಾದ ನಂತರ ಉತ್ತರಕನ್ನಡ ಜಿಲ್ಲೆಯಲ್ಲಿ ಕಂಪನಿ ಸರಕಾರದ ಆಡಳಿತ ಪ್ರಾರಂಭವಾಗಿ ೧೮೫೮ ರಲ್ಲಿ ಮುಕ್ತಾಯವಾಯಿತು. ಈ ಅವಧಿಯಲ್ಲಿ ಸ್ವರ್ಣವಲ್ಲೀ ಪೀಠವನ್ನಲಂಕರಿ ಸಿದವರು ಕ್ರಮವಾಗಿ, ಶ್ರೀ ಗಂಗಾಧರೇಂದ್ರ ಸರಸ್ವತೀ (೪೮), ಶ್ರೀ ಸರ್ವಜ್ಞೇಂದ್ರ ಸರಸ್ವತೀ (೪೯) ಮತ್ತು ಶ್ರೀ ಗಂಗಾಧರೇಂದ್ರ ಸರಸ್ವತಿಗಳು (೫೦) ಕೆನರಾ ಜಿಲ್ಲಾ ಕಲೆಕ್ಟರರಾದ ಅಲೆಕ್ಝಾಂಡರ್ ರೀಡ್, ಥಾಮಸ್ ಹ್ಯಾರಿಸ್, ಕೆಮರನ್ ಮತ್ತು ಅನೇಕ ಬ್ರಿಟಿಷ್ ಅಧಿಕಾರಿಗಳು ಸ್ವರ್ಣವಲ್ಲೀ ಮಠಾಧೀಶರನ್ನು ಗೌರವಿಸಿ, ಶ್ರೀಗಳವರ ಸಂಚಾರ ಸಮಯದಲ್ಲಿ ಅವರಿಗೆ ತಕ್ಕ ಮರ್ಯಾದೆ, ಬಂದೋಬಸ್ತು ಮತ್ತು ಸಕಲ ಸೌಕರ್ಯಗಳನ್ನು ನೀಡುತ್ತಿದ್ದರೆಂದು ವಿದಿತವಾಗುತ್ತದೆ. ಸ್ವರ್ಣವಲ್ಲೀ ಪೀಠದಲ್ಲಿ ೫೧ ನೆಯವರು ಶ್ರೀ ಸರ್ವಜ್ಞೇಂದ್ರ ಸರಸ್ವತಿಗಳು.

**ಶ್ರೀ ಗಂಗಾಧರೇಂದ್ರ ಸರಸ್ವತೀ** (ಸು. ಕ್ರಿ ಶ. ೧೮೮೦–೧೯೧೮) : ಗುರು ಪರಂಪರೆಯಲ್ಲಿ ೫೨ ನೆಯವರಾದ ಶ್ರೀ ಗಂಗಾಧರೇಂದ್ರ ಸರಸ್ವತಿಗಳು ಶ್ರೀ ಸರ್ವ ಜ್ಞೇಂದ್ರರ ಕರಕಮಲಸಂಜಾತರು. ಸ್ವರ್ಣವಲ್ಲೀ ಸಂಸ್ಥಾನದಲ್ಲಿ ಸುವ್ಯವಸ್ಥಿತ ಆಡಳಿತ ರೂಪಿಸಿ, ಆರ್ಥಿಕ ಪ್ರಗತಿಗಾಗಿ ಶ್ರಮಿಸಿ, ಧರ್ಮವನ್ನಾಚರಿಸಿ, ಶಿಷ್ಯರ ಏಳ್ಗೆಗಾಗಿ ಸದಾ ಚಿಂತಿಸಿ, ಸಕಲ ಧರ್ಮ ಸಮನ್ವಯ ದೃಷ್ಟಿಯನ್ನಿರಿಸಿ ಅನುಷ್ಠಾನ ನಿರತರಾದವರು ಶ್ರೀ ಗಂಗಾಧರೇಂದ್ರರು. ಶ್ರೀಮಠದ ಚಾರಿತ್ರಿಕ ದಾಖಲೆಗಳನ್ನು ಸಂಗ್ರಹಿಸಿ, ಅವುಗಳನ್ನು ಸುವ್ಯವಸ್ಥಿತವಾಗಿ ಇರಿಸಿದವರು ಗಂಗಾಧರೇಂದ್ರರೆಂಬುದು ಸುಸ್ಪಷ್ಟ.

ಸ್ವರ್ಣವಲ್ಲೀ ಮಠದ ಗುರುಪರಂಪರೆಯು ತಪಸೀಲು, ಗೇಣಿಶೀರ್ವೆಗೆ ಸಂಬಂಧಿಸಿ ಕಬೂಲನಾಮೆ, ನಿಷೇಧಿತ ಸಹಪಂಕ್ತಿ ಭೋಜನ, ಮಠದ ಬಡ್ಡಿ ಲೇವಾದೇವಿ, ಶಿಷ್ಯರಿಂದ ಕಾಣಿಕೆ, ತೆರ ತೆಗೆದುಕೊಂಡು ಕನ್ಯಾವಿಕ್ರಯ ಮಾಡಬಾರದಾಗಿ ಅಪ್ಪಣೆ, ವಿಧವೆ ವಿಚಾರ, ತುಂಬಬೀಡಿನಲ್ಲಿ ಅಷ್ಟಬಂಧೋತ್ಸವ, ಕ್ಷತ್ರಿಯರ ಪೌರೋಹಿತ್ಯ ಕುರಿತು ಸಿರೂಪ, ಗೋಕರ್ಣ ಮಹಾಬಲೇಶ್ವರ ದೇವರಲ್ಲಿ ಅಷ್ಟಬಂಧ, ಆಚಾರ-ವಿಚಾರ, ಹವ್ಯಕ ಸದ್ವಿದ್ಯಾಭಿವೃದ್ಧಿ ಸಂಘ, ಸ್ವರ್ಣವಲ್ಲೀ ಶ್ರೀ ಲಕ್ಷ್ಮೀನರಸಿಂಹದೇವರ ಜಯಂತಿ ಮತ್ತು ಮಹಾರಥೋತ್ಸವ, ಶ್ರೀಗಳವರ ಸವಾರಿ, ಧರ್ಮ ಮತ್ತು ಶಿಷ್ಟಾಚಾರ, ದೀಪಾರಾಧನೆ ಕಾಣಿಕೆ, ಪ್ರಾಯಶ್ಚಿತ್ತ, ಬೆಟ್ಟದ ಸಲುವಾಗಿ ಜಂಗಲ್ ಭೂಮಿಯನ್ನು ಕೊಡುವದಕ್ಕೆ ಸಂಬಂಧಿಸಿದ ಕರಾರು ನಾಮೆ, ಶಿಷ್ಯಪರಿಗ್ರಹಣಕ್ಕೆ ಸಂಬಂಧಿಸಿದ ನಿರೂಪ ಮುಂತಾದ ಅನೇಕ ವಿಷಯಗಳನ್ನು ಶ್ರೀ ಗಂಗಾಧರೇಂದ್ರರ ಕಾಲದ ದಾಖಲೆಗಳು ಬೆಳಕಿಗೆ ತರುತ್ತವೆ, ಸಂಸ್ಥಾನದ ಆಡಳಿತಾತ್ಮಕ, ಧಾರ್ಮಿಕ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗಳನ್ನು ಅಭಿವೃದ್ಧಿಪಡಿಸಿ, ಸಂರಕ್ಷಿಸುವಲ್ಲಿ ಶ್ರೀಗಳವರ ಪಾತ್ರ ಹಿರಿದು. ದೂರದೃಷ್ಟಿಯನ್ನಿರಿಸಿಕೊಂಡಿದ್ದ ಶ್ರೀ ಗಂಗಾಧರೇಂದ್ರರು ಸಂಸ್ಥಾನಕ್ಕೆ ಉಜ್ವಲ ಭವಿಷ್ಯವನ್ನು ಕಲ್ಪಿಸಿದರು.

**ಶ್ರೀ ಸರ್ವಜ್ಞೇಂದ್ರ ಸರಸ್ವತೀ** (೧೯೧೮-೧೯೪೦) : ಗುರುಪರಂಪರೆಯಲ್ಲಿ ೫೩ ನೆಯವರಾದ ಶ್ರೀ ಸರ್ವಜ್ಞೇಂದ್ರ ಸರಸ್ವತಿಗಳು ಶ್ರೀ ಗಂಗಾಧರೇಂದ್ರರ ಶಿಷ್ಯರು. ಸರ್ವಜ್ಞೇಂದ್ರರ ಕಾಲಕ್ಕೆ ಸೇರಿದ ಚಾರಿತ್ರಿಕ ದಾಖಲೆಗಳು ಅನೇಕ ವಿಷಯಗಳನ್ನು ಬೆಳಕಿಗೆ ತರುತ್ತವೆ. ಶ್ರೀ ಸರ್ವಜ್ಞೇಂದ್ರರ ಜನ್ಮಕುಂಡಲಿ, ತ್ರಿರಾತ್ರಾಶೌಚ ಮಾಡಿಕೊಂಡು, ಸಂಸ್ಥಾನಕ್ಕೆ ಗೋದಾನ ಕಾಣಿಕೆ ಬಗ್ಗೆ ಹನ್ನೆರಡು ರೂಪಾಯಿಗಳನ್ನು ಕಳುಹಿಸಿರುವದಾಗಿ ತಟ್ಟಿಸರುಹಿನ ಗಣಪಯ್ಯ ದೇವಪ್ಪ ಹೆಗಡೆಯು ಸರ್ವಜ್ಞೇಂದ್ರರಿಗೆ ಬರಕೊಂಡ ಬಿನ್ನಹ ಪತ್ರ; ಸಂಸ್ಥಾನದಿಂದ ತಮ್ಮ ಜಾತಿಯವರು ವಿಶೇಷ ದಿನಗಳಲ್ಲಿ ದೀವಟಿಗೆ ಹಿಡಿಯುವ ಕೆಲಸ ಮಾಡಿಕೊಂಡು, ಆ ಬಗ್ಗೆ ಶ್ರೀಮಠದಿಂದ ಸಿಗುವ ಮರ್ಯಾದೆಯನ್ನು ಪಡೆಯಲಿಕ್ಕೆ ಕಬೂಲ ಇರುವದಾಗಿ ಸಂಸ್ಥಾನದ ಶಿಷ್ಯರಾದ ಶೀಲಿಗ ಜಾತಿಯವರು, ಶ್ರೀ ಲಕ್ಷ್ಮೀನರಸಿಂಹ ದೇವರ ಭಂಡಾರಕ್ಕೆ ಬರೆಸಿಕೊಟ್ಟ ಉತ್ತರ: ಶ್ರೀಗಳವರು ವೇದಾಂತಶಾಸ್ತ್ರ ಅಭ್ಯಸಿಸುವ ಬಗ್ಗೆ ಶ್ರೀಮಠದಿಂದ ತೆರಳಿ, ಶಿರಸಿಯ ವೈದ್ಯ ನೀಲಕಂಠರಾವ್ ಪಟವರ್ಧನರ ಮನೆಯಲ್ಲಿ ಬೆಳ್ಳಿ-ಬಂಗಾರದ ದಾಗೀನೆಗಳನ್ನು ಟ್ರಂಕಿನಲ್ಲಿ ಇಟ್ಟಿದ್ದರ ತಪಶೀಲವಾರ ಯಾದಿ; ಮೈಸೂರಿನ ಅರಮನೆ ಖಜಾಂಚಿ ಎಂ ಎಸ್. ಗುಂಡೂರಾವರಿಗೆ ಸರ್ವಜ್ಞೇಂದ್ರರು ಕಳುಹಿಸಿದ ಆಶೀರ್ವಾದ ಪತ್ರ; ಹೊನ್ನಾವರ ತಾಲೂಕು ಕಸಬಾ ದುರ್ಗದಕೇರಿಯಲ್ಲಿರುವ ಶ್ರೀ ಲಕ್ಷ್ಮೀ ನಾರಾಯಣ ದೇವಸ್ಥಾನ ಕಟ್ಟುವ ಕೆಲಸಕ್ಕೆ ಸಂಬಂಧಿಸಿ ಸಂಸ್ಥಾನದ ಆಜ್ಞಾಧಾರಕ ಶಿಷ್ಯರಾದ ಹೊನ್ನಾವರ ಕೊಡಾವಳಿಯ ಕ್ಷತ್ರಿಯ ವರ್ಗದ ವಂದೂರು ಅನಂತ

ನಾಯಕನು ಸರ್ವಜ್ಞೇಂದ್ರರಿಗೆ ಬರೆದ ಬಿನ್ನಹ ಪತ್ರ; ಕುಮಟಾ ಮತ್ತು ಹೊನ್ನಾವರಗಳಲ್ಲಿ ಸ್ವಾಮಿಗಳು ಸಂಚರಿಸುವ ವಾಹನಕ್ಕೆ ಸಂಬಂಧಿಸಿ, ಜಾರಿಯಲ್ಲಿರುವ ಮೋಟಾರ್ ಟ್ರ್ಯಾಫಿಕ್ ಕಾನೂನನ್ನು ಸಡಿಲಿಸಿರುವದಾಗಿ, ಕೆನರಾ ಜಿಲ್ಲಾ ಮೆಜಿಸ್ಟ್ರೇಟರ ಆಜ್ಞಾಪತ್ರ; ನವರಾತ್ರಿಯಲ್ಲಿ ಶ್ರೀ ಮಾರಿಕಾಂಬಾ ದೇವಾಲಯದಲ್ಲಿ ಶ್ರೀಯುತ ಬೇಂದ್ರೆಯವರನ್ನು, ಇನ್ನಿತರ ವಿದ್ವಜ್ಜನರನ್ನೂ ಆಮಂತ್ರಿಸಿ, ಭಾಷಣಾದಿಗಳಿಂದ ಜನರಲ್ಲಿ ಜಾಗೃತಿಯನ್ನು ದೀಪ್ತಿಗೊಳಿಸಬೇಕಾಗಿದೆ, ಎಂಬುದಾಗಿ ಡಿ. ಎನ್. ವಿಶ್ವಾಮಿತ್ರ ವಕೀಲರು ಶ್ರೀಗಳಿಗೆ ಬರೆದ ಬಿನ್ನಹ ಪತ್ರ; ಸಂಸ್ಥಾನಕ್ಕೆ ಸಾಲವಾಗಿರುವುದರಿಂದ, ಅದನ್ನು ತೀರಿಸುವ ಹೊಣೆ ಶಿಷ್ಯರದ್ದಾಗಿರವುದರಿಂದ, ಆ ದಿಶೆಯಲ್ಲಿ ನಿರ್ದಿಷ್ಟ ಧೋರಣೆಯನ್ನು ಹೊಂದುವಂತೆ, ಆಸ್ತಿಕ ಸಮಾಜ ಬಂಧುಗಳಿಗೆ ಆಡಳಿತ ಕಮಿಟಿಯವರಿಂದ ವಿನಂತಿ ಪತ್ರ; "ದೈವೀ ಶಕ್ತಿಯಲ್ಲಿಯೇ ದೃಢ ವಿಶ್ವಾಸವಿಟ್ಟು ಕರ್ತವ್ಯಮುಖರಾಗಿರಿ", ಎಂಬುದಾಗಿ ಗುರು ಸಂದೇಶ; ಸ್ವರ್ಣವಲ್ಲೀ ಮಠದ ಘಟನೆ ಮತ್ತು ನಿಯಮಾವಳಿ; ಸರ್ವಜ್ಞೇಂದ್ರ ಸರಸ್ವತಿಗಳು ಬ್ರಹ್ಮೀಭೂತರಾದ ಸಮಾಚಾರ, ಇತ್ಯಾದಿ ಅನೇಕ ವಿಷಯಗಳನ್ನು ಶ್ರೀ ಸರ್ವಜ್ಞೇಂದ್ರರ ಕಾಲದ ದಾಖಲೆಗಳು ಬೆಳಕಿಗೆ ತರುತ್ತವೆ.

ಒಟ್ಟಿನಲ್ಲಿ, ಹನ್ನೆರಡುನೂರು ವರ್ಷಗಳ ಹಿಂದೆ ಆದಿ ಶಂಕರಾಚಾರ್ಯರು ಯಾವ ಉದ್ದೇಶಕ್ಕಾಗಿ ಮಠಗಳನ್ನು ಸ್ಥಾಪಿಸಿದರೋ ಆ ಉದ್ದೇಶವನ್ನು ಸಫಲಗೊಳಿಸುವದಕ್ಕೆ ಸ್ವರ್ಣವಲ್ಲೀ ಮಠದ ಪಾತ್ರ ಹಿರಿದು. ಸನಾತನ ವೈದಿಕ ಧರ್ಮವನ್ನು ರಕ್ಷಿಸಿಕೊಂಡು ಬಂದವರು ಸರ್ಣವಲ್ಲಿಯ ತಪೋನಿಧಿಗಳು. ಸ್ವರ್ಣವಲ್ಲಿಯ ಗುರುಪರಂಪರೆ ಅವಿಚ್ಛಿನ್ನವಾಗಿದ್ದು, ಇಂದು ಪೀಠದಲ್ಲಿ ವಿರಾಜಿಸುತ್ತಿರುವವರು ಪರಂಪರೆಯಲ್ಲಿ ೫೪ನೆಯವರಾದ ಶ್ರೀ ಗಂಗಾಧರೇಂದ್ರ ಸರಸ್ವತಿಗಳು.

---

**ಟಿಪ್ಪಣಿ :** ಹೆಚ್ಚಿನ ಮಾಹಿತಿಗಾಗಿ ಲೇಖಕರ 'ಶ್ರೀ ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನದ ಐತಿಹಾಸಿಕ ದಾಖಲೆಗಳು' ಮತ್ತು 'ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನದ ಚರಿತ್ರೆ', ಎಂಬ ಪುಸ್ತಕಗಳನ್ನು ಓದಿರಿ,

# ಶ್ರೀ ಸ್ವರ್ಣವಲ್ಲೀ ಮಠದೊಂದಿಗೆ ಸ್ವಾದಿ ಅರಸುಮನೆತನದ ಸಂಬಂಧ

---

ಶ್ರೀ ಸ್ವರ್ಣವಲ್ಲೀ ಮಠದ ಚರಿತ್ರೆ ಕ್ರಿ ಶ. ೧೦ ನೆಯ ಶತಮಾನದ ಆದಿಯಿಂದ ಅಂದರೆ ಶ್ರೀಮಠ ಕಾಶಿಯಲ್ಲಿ ಸ್ಥಾಪನೆಯಾದಾಗಿನಿಂದ ಪ್ರಾರಂಭವಾದರೂ, ಇಂದಿನ ಸ್ವರ್ಣವಲ್ಲಿಗೆ ಮಠ ಸ್ಥಳಾಂತರಗೊಂಡಿದ್ದು ಕ್ರಿ. ಶ. ೧೫೫೬ ರಲ್ಲಿ. ಅಂದಿನಿಂದ ಇಂದಿನವರೆಗೂ ಮಠ ಸ್ವರ್ಣವಲ್ಲಿಯಲ್ಲೇ ನೆಲೆಸಿದೆ. ಸ್ವಾದಿ ಅರಸರ ಕಾಲದಿಂದ ಅದೊಂದು ಮಹಾಸಂಸ್ಥಾನವಾಗಿ ರೂಪುಗೊಂಡು ೧೬ ಸೀಮೆಗಳನ್ನೊಳಗೊಂಡಿದೆ.

ಸ್ವರ್ಣವಲ್ಲೀ ಮಠದಲ್ಲಿರುವ ಸುಮಾರು ೩೦,೦೦೦ ಚಾರಿತ್ರಿಕ ದಾಖಲೆಗಳು, ಮಂತ್ರಭಾಗ ಮತ್ತು ಧಾರ್ಮಿಕ ವಿಷಯಗಳನ್ನೊಳಗೊಂಡ ಸಹಸ್ರಾರು ತಾಡೋಲೆಗಳು, ಕಿರ್ದಿ ಪುಸ್ತಕಗಳು, ಶಿಲಾ ಮತ್ತು ತಾಮ್ರ ಶಾಸನಗಳು ಮತ್ತು ಅವುಗಳ ಪ್ರತಿಗಳು, ಗೋಕರ್ಣ, ಮಂಜುಗುಣಿ, ಮತ್ತಿನ್ನಿತರ ಪ್ರದೇಶಗಳಲ್ಲಿ ಲಭ್ಯವಿರುವ ದಾಖಲೆಗಳು, ಸ್ವರ್ಣವಲ್ಲೀ ಸಂಸ್ಥಾನದ ಸೀಮೆಗಳಲ್ಲಿರುವ ದೇವಾಲಯಗಳು ಮತ್ತು ಪ್ರಾಚ್ಯಾವಶೇಷಗಳು, ಸ್ವರ್ಣವಲ್ಲೀ ಸಂಸ್ಥಾನದ ಇತಿಹಾಸದ ಮೇಲೆ ಬೆಳಕು ಬೀರುವ ಪ್ರಧಾನ ಆಕರ ಸಾಮಗ್ರಿಗಳು. ಇವುಗಳ ಹೊರತಾಗಿ ಪೂರ್ವದಲ್ಲಿ ಶ್ರೀ ಬೃಹದ್ಗಂಗಾಧರೇಂದ್ರ ಸರಸ್ವತಿಗಳು (ಸು. ಕ್ರಿ. ಶ. ೧೬೪೮–೧೬೫೩) ರಚಿಸಿದ ಗುರುಪರಂಪರೆಯ ವೃತ್ತಾಂತವನ್ನು ಅರುಹುವ 'ಜ್ಞಾನದೀಪಿಕಾ' ಎಂಬ ಸಂಸ್ಕೃತದಲ್ಲಿಯ ಕೃತಿ ಈ ದಿಶೆಯಲ್ಲಿ ಅತ್ಯಂತ ಉಪಯುಕ್ತ.

ಸ್ವಾದಿ ರಾಜ್ಯವನ್ನು ಕುರಿತು ಫ್ರಾಯರ್, ಜಿಮೆಲಿ, ಹ್ಯಾಮಿಲ್ಟನ್, ಕ್ಯಾಂಬೆಲ್, ಡಾನ್‌ವರ್ಸ್, ಬುಕಾನನ್ ಮೊದಲಾದ ವಿದೇಶೀಯರು ನೀಡಿರುವ ವೃತ್ತಾಂತಗಳು ಉಪಯುಕ್ತವಾಗಿವೆ. ೧೮೮೩ ರ 'ಕೆನರಾ ಗೆಝೆಟಿಯರ್', ೧೯೮೫ ರ 'ಉತ್ತರಕನ್ನಡ ಜಿಲ್ಲೆಯ ಗೆಝೆಟಿಯರ್', ಪಣಜಿ ಹಾಗೂ ಲಿಸ್ಬನ್ ನಗರಗಳಲ್ಲಿಯ ಪೋರ್ತುಗೀಸ್ ಕಾಗದ ಪತ್ರಗಳ ಸಂಗ್ರಹ, ಪೇಶ್ವೆದಪ್ತರಿನ ಹಸ್ತಪ್ರತಿಗಳು, 'ಶಿವಚಾರಿತ್ರ್ಯ ಸಾಹಿತ್ಯ', ಆದಿಲ್‌ಶಾಹಿ ಮನೆತನಕ್ಕೆ ಸಂಬಂಧಿಸಿದ ದಾಖಲೆಗಳು, ಶೃಂಗೇರಿ ಮಠದಲ್ಲಿಯ ಕಡತಗಳು, ಹೈದರಲಿ ಮತ್ತು ಟಿಪ್ಪುಸುಲ್ತಾನರ ಕಾಲದ ಕಾಗದ ಪತ್ರಗಳು ಸ್ವಾದಿಯ ಚರಿತ್ರೆಯ ಮೇಲೆ ವಿಶೇಷ ಬೆಳಕು ಬೀರುತ್ತವೆ. 'ಬಿಳಗಿ ಅರಸರ ವಂಶಾವಳಿ' ಮತ್ತು 'ಕೆಳದಿ ನೃಪವಿಜಯ'ಗಳಲ್ಲಿ ಸ್ವಾದಿಯ ಬಗ್ಗೆ ಮಾಹಿತಿ ದೊರೆಯುತ್ತದೆ. ಸ್ವಾದಿ ಹಾಗೂ ಅದರ ಸುತ್ತಮುತ್ತಲಿರುವ

ಪ್ರದೇಶಗಳಲ್ಲಿಯ ಅವಶೇಷಗಳು, ಶಿರಸಿ, ಸದಾಶಿವಗಡ, ಸಾಂಬ್ರಾಣಿ, ಅಂಕೋಲೆಯ ಹಳೆಯ ಕೋಟೆಗಳು, ಬನವಾಸಿ ಮಧುಕೇಶ್ವರ ದೇವಾಲಯದಲ್ಲಿಯ ವಿಗ್ರಹಗಳು, ಶಿಲಾಶಾಸನಗಳು, ಸಹಸ್ರಲಿಂಗದಲ್ಲಿಯ ವಿಗ್ರಹಗಳು ಮತ್ತು ಶಾಸನಗಳು ಸ್ವಾದಿ ಚರಿತ್ರೆಯ ಮೇಲೆ ಬೆಳಕು ಬೀರುವ ಮೂಕಸಾಕ್ಷಿಗಳು. ಗದಗಿನ ವೀರಶೈವ ಅಧ್ಯಯನ ಸಂಸ್ಥೆಯವರು ೧೯೭೫ ರಲ್ಲಿ ಪ್ರಕಟಿಸಿದ 'ಸ್ವಾದಿ ಅರಸು ಮನೆತನ' ಎಂಬ ಗ್ರಂಥದಲ್ಲಿಯ ೧೮ ವಿದ್ವಾಂಸರ ಲೇಖನಗಳು, ಆಕರ ಸಾಮಗ್ರಿಗಳು, ರಾಜಕೀಯ ಇತಿಹಾಸ, ಧರ್ಮ, ವಾಸ್ತು ಶಿಲ್ಪ, ಕಲೆ, ಸಾಹಿತ್ಯ, ಕೋಟೆಗಳು, ಕೈಫಿಯತ್‌ಗಳು ಮುಂತಾದ ವಿಷಯಗಳನ್ನು ಕುರಿತು ಸಾಕಷ್ಟು ಮಾಹಿತಿ ನೀಡುತ್ತವೆ. ಲೇಖಕರ 'ಶ್ರೀ ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನದ ಐತಿಹಾಸಿಕ ದಾಖಲೆಗಳು' ಎಂಬ ಗ್ರಂಥದಲ್ಲಿಯ ಸ್ವಾದಿ ಅರಸರ ಕಾಲಕ್ಕೆ ಸಂಬಂಧಿಸಿದ ೪೬ ಚಾರಿತ್ರಿಕ ದಾಖಲೆಗಳು (೫ ೫೦) ಸ್ವರ್ಣವಲ್ಲೀ ಮಠದೊಂದಿಗೆ ಸೋದೆಯರಸರ ಸಂಬಂಧವನ್ನರಿಯಲು ಉಳಿದೆಲ್ಲ ಆಕರ ಸಾಮಗ್ರಿಗಳಿಗಿಂತ ಹೆಚ್ಚು ಪ್ರಯೋಜನಕಾರಿಯಾಗಿವೆ.

ಸ್ವಾದಿ ರಾಜ್ಯದ ಉಚ್ಛ್ರಾಯ ಕಾಲ ಹದಿನಾರನೆಯ ಶತಮಾನದ ಮಧ್ಯದಿಂದ ಹದಿನೆಂಟನೆಯ ಶತಮಾನದವರೆಗಿದ್ದರೂ ಆ ರಾಜ್ಯಕ್ಕೆ ೮ ನೆಯ ಶತಮಾನದಿಂದಲೇ ಪೂರ್ವಚರಿತ್ರೆ ಇತ್ತೆಂಬುದಕ್ಕೆ ಸಾಹಿತ್ಯಕ ಕೃತಿಗಳು ಮತ್ತು ಶಾಸನಗಳೇ ಆಧಾರ. ಕ್ರಿ. ಶ. ೮೦೦ ರ ಸುಧಾಪುರದ ಸದಾಶಿವರಾಯನ ಶಾಸನ, ಕ್ರಿ. ಶ ೮೭೫ ರ ಚಾಮುಂಡರಾಯನ ಶಾಸನ, ಪಂಪನ 'ವಿಕ್ರಮಾರ್ಜುನ ವಿಜಯ'ದಲ್ಲಿ 'ಸುಧಾ' ಪ್ರದೇಶವನ್ನೊಳಗೊಂಡ ಬನವಾಸಿ ಮಂಡಲದ ವರ್ಣನೆ, ವಿಜಯನಗರದ ಸಾರ್ವಭೌಮತ್ವವನ್ನು ಪ್ರತಿಭಟಿಸಿ ಸೋಂದಾದ ಅರಸಪ್ಪ ನಾಯಕನು (ಸೋದೆಯ ಸಂಕಣ್ಣ ನಾಯಕನ ಮಗ) ಮಡಿದು, ಆತನ ೯ ಮಡದಿಯರು ಸತಿ ಹೋದರೆಂದು ಕ್ರಿ. ಶ. ೧೪೩೧ ರ ಸೋಂದಾದಲ್ಲಿಯ ವೀರಗಲ್ಲಿನಲ್ಲಿಯ ಕೆತ್ತನೆ ಇತ್ಯಾದಿ ಚರಿತ್ರಾರ್ಹ ವಿಷಯಗಳು ಗಮನಾರ್ಹವಾಗಿವೆ. ಪ್ರಾರಂಭಿಕ ವರ್ಷಗಳಲ್ಲಿ ಬೇರೆ ಬೇರೆ ಪ್ರದೇಶಗಳಲ್ಲಿಯ ಪಾಳೆಯಗಾರರು ವಿಜಯನಗರದ ಸಾರ್ವಭೌಮತ್ವವನ್ನು ಪ್ರತಿಭಟಿಸಿದರೂ, ಕೊನೆಯಲ್ಲಿ ಹಾಡುವಳ್ಳಿ, ಸೋದೆ, ಬಿಳಗಿ, ಗೇರಸೊಪ್ಪೆ ಮೊದಲಾದ ಸ್ಥಳಗಳಲ್ಲಿಯ ಪಾಳೆಯಗಾರರು ವಿಜಯನಗರದ ಸಾರ್ವಭೌಮತ್ವವನ್ನು ಒಪ್ಪಿಕೊಂಡರೆಂಬುದು ಅವರ ದಾಖಲೆಗಳಿಂದಲೇ ಸ್ಪಷ್ಟವಾಗುತ್ತದೆ.

ಸ್ವಾದಿ ಅರಸರ ಉಚ್ಛ್ರಾಯಪೂರ್ವಕಾಲದಲ್ಲಿಯೇ ಶ್ರೀಮಠದ ಗುರುಗಳನ್ನು ಸುಧಾಪುರದ ಅರಸರು ಗೌರವಿಸುತ್ತಿದ್ದರೆಂಬುದು ವಿದಿತವಾಗುತ್ತದೆ. ಗುರುಪರಂಪರೆಯಲ್ಲಿ ೨೦ ನೆಯವರಾದ ಶ್ರೀ ಗಂಗಾಧರೇಂದ್ರ ಸರಸ್ವತಿಗಳಿಗೆ ೨೦ ಗ್ರಾಮಗಳನ್ನು ದತ್ತಿಯಾಗಿ ಅರ್ಪಿಸಿ, ಶ್ರೀಗಳವರನ್ನು ಆಶ್ರಯಿಸಿದ ಉಳಿದ ಯತಿಗಳಿಗೂ ಅವರು ಅಪೇಕ್ಷಿಸಿದ ಸ್ಥಳದಲ್ಲಿ ವಸತಿ ನಿರ್ಮಿಸಿಕೊಟ್ಟು ಅವರ ಉಪಹಾರ

ಕ್ಕಾಗಿ ಆಹಾರಧಾನ್ಯ, ಪೂಜೆಗಾಗಿ ತುಪ್ಪ, ಎಣ್ಣೆ, ನೈವೇದ್ಯಕ್ಕೆ ಹಾಲು, ಬೆಲ್ಲ, ಫಲಗಳು, ಧಾನ್ಯಗಳು, ವಸ್ತ್ರ, ಪಾತ್ರೆಗಳು ಹೀಗೆ ಸಕಲ ಸೌಲಭ್ಯಗಳನ್ನೂ ಒದಗಿಸುವಂತೆ ಉಜ್ಜಯಿನಿಯ ವಿಕ್ರಮಾರ್ಕನು ಸುಧಾಪುರದ ನೃಸಿಂಹ ವೀರಭೂಪಾಲನಿಗೆ ಪತ್ರ ಬರೆಸಿದನೆಂದು 'ಜ್ಞಾನದೀಪಿಕಾ'ದ ಐದನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ. ಗೋಕರ್ಣದಲ್ಲಿ ಮಠ ಸ್ಥಾಪನೆ ಕಾಲಕ್ಕೆ ಸಂಭವಿಸಿದ ಘಟನೆ ಇದಾದ್ದರಿಂದ ಈ ನಿರೂಪವನ್ನು ೧೨ ನೆಯ ಶತಮಾನದ ಆದಿಕಾಲಕ್ಕೆ ನಿಗದಿಪಡಿಸಬಹುದು.

ಗುರುಪೀಠದಲ್ಲಿ ೨೯ ನೆಯವರಾದ ವಿಶ್ವವಂದ್ಯ ಸರಸ್ವತಿಗಳಿಗೆ ಅಪುತ್ರಕನಾದ ಸುಧಾಪುರದ ಅರಸನು (ವೀರನರಸಿಂಹ) ಸಹಸ್ರಲಿಂಗದಲ್ಲಿ ಮಠ ನಿರ್ಮಾಣ ಮಾಡಿಕೊಟ್ಟು ಅವರ ಶಿಷ್ಯರಾದ ೧೫ ಯತಿಗಳಿಗಾಗಿ ೧೫ ಗ್ರಾಮಗಳನ್ನು ಪ್ರತ್ಯೇಕವಾಗಿ ಆ ಮಠಗಳಿಗೆ ಕೊಟ್ಟು ಶಾಸನವನ್ನು ಬರೆಸಿದನೆಂಬ ವೃತ್ತಾಂತವು 'ಜ್ಞಾನದೀಪಿಕಾ' ದಲ್ಲಿಯ ಐದನೆಯ ಅಧ್ಯಾಯದಿಂದ ತಿಳಿದು ಬರುತ್ತದೆ. ಆದರೆ ಸಹಸ್ರಲಿಂಗ ಮಠವು ಸುಮಾರು ೧೪ ನೆಯ ಶತಮಾನದ ಮಧ್ಯಭಾಗದಲ್ಲಿ ನಿರ್ಮಾಣವಾಗಿರಬಹುದಾಗಿರುವದರಿಂದ, ಗೋಕರ್ಣ ಮಠ ಸ್ಥಾಪನೆಯ ಕಾಲದಲ್ಲಿ ಉಲ್ಲೇಖಿತ ನರಸಿಂಹ ವೀರಭೂಪಾಲ ಮತ್ತು ಸಹಸ್ರಲಿಂಗ ಮಠ ಸ್ಥಾಪನೆಯ ಸಂದರ್ಭದಲ್ಲಿ ಉಲ್ಲೇಖಿತ ವೀರನರಸಿಂಹ, ಇಬ್ಬರೂ ಬೇರೆ ಬೇರೆ ಎಂಬುದು ಖಚಿತವಾಗುತ್ತದೆ.

ಗುರುಪರಂಪರೆಯಲ್ಲಿ ೩೦ ನೆಯವರಾದ ವಿಶ್ವನಾಥ ಸರಸ್ವತಿಗಳ ಕಾಲದಲ್ಲಿ ಸಹಸ್ರಲಿಂಗ ಮಠದ ಮೇಲೆ ಕಳ್ಳರು ಒಮ್ಮಿಂದೊಮ್ಮೆಲೇ ದಾಳಿ ಮಾಡಿ ಸರ್ವಸ್ವವನ್ನೂ ದೋಚಿಕೊಂಡು ಹೋದಾಗ ಸುಧಾಪುರದರಸ ಸದಾಶಿವರಾಜನು ದಸ್ಯು (ಕಳ್ಳರು) ಸಂಹಾರ ಕಥೆಯನ್ನು ಶ್ರೀಗಳಿಗೆ ವಿವರಿಸಿ ಶ್ರೀಮಠ ಮತ್ತು ಶಾಖಾಮಠಗಳನ್ನು ಕಾಯಲು ರಕ್ಷಕ ಭಟರನ್ನು ನಿಯಮಿಸಿದನೆಂದು ಅದೇ 'ಜ್ಞಾನದೀಪಿಕಾ'ದ ಐದನೆಯ ಅಧ್ಯಾಯದಿಂದ ಮನವರಿಕೆಯಾಗುತ್ತದೆ. ಸಹಸ್ರಲಿಂಗ ಮಠದ ವಿಶ್ವನಾಥ ಸರಸ್ವತಿಗಳ ಕಾಲ ಸುಮಾರು ೧೫ ನೆಯ ಶತಮಾನವಾಗಿರಲು ಸಾಕು.

ಒಟ್ಟಿನಲ್ಲಿ ಸ್ವಾದಿಯ ಉಚ್ಛ್ರಾಯಕಾಲ ಪೂರ್ವದಲ್ಲಿ ಕ್ರಮವಾಗಿ ಸುಧಾಪುರದ ನರಸಿಂಹ ವೀರಭೂಪಾಲನು ಶ್ರೀ ಗಂಗಾಧರೇಂದ್ರ ಸರಸ್ವತಿಗಳಿಗೆ ೨೦ ಗ್ರಾಮಗಳನ್ನು ಮತ್ತು ವೀರನರಸಿಂಹನು ವಿಶ್ವವಂದ್ಯ ಸರಸ್ವತಿಗಳಿಗೆ ಸಹಸ್ರಲಿಂಗ ಮಠವನ್ನು ಅರ್ಪಿಸಿದರು. ವಿಶ್ವನಾಥ ಸರಸ್ವತಿಗಳ ಸಹಸ್ರಲಿಂಗ ಮಠವನ್ನು ಸದಾಶಿವರಾಜನು ಕಳ್ಳರಿಂದ ರಕ್ಷಿಸಿದನು.

**ಸ್ವಾದಿ ಅರಸುಗಳ ಉಚ್ಛ್ರಾಯಕಾಲ :** ಉಚ್ಛ್ರಾಯಕಾಲದಲ್ಲಿ ಸೋದೆ ರಾಜ್ಯವನ್ನು ಒಟ್ಟು ೮ ಅರಸರು ಆಳಿದರು. ಇಮ್ಮಡಿ ಅರಸಪ್ಪ (ಕ್ರಿ.ಶ. ೧೫೫೫–೧೬೦೩), ರಾಮಚಂದ್ರ (ಕ್ರಿ.ಶ. ೧೬೦೩–೧೬೧೮), ರಘುನಾಥ (ಕ್ರಿ.ಶ. ೧೬೧೮–

೧೬೩೮), ಮಧುಲಿಂಗ (ಕ್ರಿ. ಶ. ೧೬೩೮-೧೬೭೨), ಸವಾಯಿ ರಾಮಚಂದ್ರ (ಕ್ರಿ. ಶ ೧೬೭೨-೧೬೭೮), ಇಮ್ಮಡಿ ಸದಾಶಿವ (ಕ್ರಿ. ಶ. ೧೬೭೮-೧೭೧೮), ಇಮ್ಮಡಿ ಬಸವಲಿಂಗ, (ಕ್ರಿ. ಶ. ೧೭೧೮-೧೭೪೫), ಮುಮ್ಮಡಿ ಸದಾಶಿವ (ಕ್ರಿ.ಶ. ೧೭೪೫-೧೭೬೩) ನಾಯಕರು. ಇವರೇ ಆ ೮ ಅರಸರು. ಸ್ವಾದಿ ರಾಜ್ಯದ ಗಡಿ ಪ್ರಾರಂಭದಿಂದ ಅಂತ್ಯದವರೆಗೆ ಏಕಪ್ರಕಾರವಾಗಿರಲಿಲ್ಲ. ಆದರೂ ೧೭೬೩ ರ ವೇಳೆಗೆ ಉತ್ತರಕನ್ನಡ ಜಿಲ್ಹೆಯ ಘಟ್ಟದ ಪ್ರದೇಶಗಳಾದ ಶಿರಸಿ, ಸುಪಾ, ಯಲ್ಲಾಪುರ ಮತ್ತು ಮಿರ್ಜಾನದಿಂದ ಕಾರವಾರದವರೆಗಿನ ಕರಾವಳಿ ಪ್ರದೇಶಗಳು ಮತ್ತು ಗೋವಾದ ದಕ್ಷಿಣ ಪ್ರದೇಶಗಳು ಸೋದೆ ರಾಜ್ಯದಲ್ಲಿದ್ದವು.

ಸೋದೆ ರಾಜ್ಯದ ಉಚ್ಛ್ರಾಯಕಾಲದ ಎರಡು ಶತಮಾನಗಳ ಅವಧಿಯಲ್ಲಿ ಸ್ವರ್ಣವಲ್ಲೀ ಪೀಠವನ್ನು ಕ್ರಮವಾಗಿ ೩೪. ಹಿರೆ ಶ್ರೀ ಚಂದ್ರಶೇಖರ ಸರಸ್ವತೀ (ಕ್ರಿ ಶ. ೧೫೫೬-೧೫೯೭). ೩೫. ಶ್ರೀ ಸರ್ವಜ್ಞೇಂದ್ರ ಸರಸ್ವತೀ (೧೫೯೭-೧೬೨೦), ೩೬. ಶ್ರೀ ರಾಮಚಂದ್ರ ಸರಸ್ವತೀ (೧೬೨೦-೧೬೪೨), ೩೭. ಶ್ರೀ ಸರ್ವಜ್ಞೇಂದ್ರ ಸರಸ್ವತೀ (೧೬೪೨-೧೬೪೮), ೩೮. ಶ್ರೀ ಗಂಗಾಧರೇಂದ್ರ ಸರಸ್ವತೀ (೧೬೪೮-೧೬೫೩). ೩೯. ಶ್ರೀ ಸರ್ವಜ್ಞೇಂದ್ರ ಸರಸ್ವತೀ (೧೬೫೩-೧೬೫೪), ೪೦. ಶ್ರೀ ರಾಮಚಂದ್ರ ಸರಸ್ವತೀ (೧೬೫೪-೧೬೫೬), ೪೧. ಶ್ರೀ ಸರ್ವಜ್ಞೇಂದ್ರ ಸರಸ್ವತೀ (೧೬೫೬-೧೬೬೮), ೪೨. ಶ್ರೀ ಮಾಧವೇಂದ್ರ ಸರಸ್ವತೀ (೧೬೬೮-೧೬೭೨), ೪೩. ಶ್ರೀ ಸರ್ವಜ್ಞೇಂದ್ರ ಸರಸ್ವತೀ (೧೬೭೨-೧೬೭೮), ೪೪. ಶ್ರೀ ರಾಮಚಂದ್ರ ಸರಸ್ವತೀ (೧೬೭೮-೧೭೧೨), ೪೫ ಶ್ರೀ ಪ್ರತ್ಯಗ್ಬ್ರಹ್ಮೇಂದ್ರ ಸರಸ್ವತೀ (೧೭೧೨-೧೭೫೦), ೪೬. ಶ್ರೀ ರಾಮಚಂದ್ರ ಸರಸ್ವತೀ (೧೭೫೦-೧೭೫೮), ೪೭. ಶ್ರೀ ಸರ್ವಜ್ಞೇಂದ್ರ ಸರಸ್ವತೀ (೧೭೫೮-೧೭೭೮) ಎಂಬ ೧೪ ಯತಿಗಳು ಅಲಂಕರಿಸಿದರು.

ಸ್ವಾದಿ ಅರಸರ ಉಚ್ಛ್ರಾಯ ಕಾಲದಲ್ಲಿ ಶ್ರೀ ಸ್ವರ್ಣವಲ್ಲೀ ಮಠದೊಂದಿಗೆ ಸ್ವಾದಿ ಅರಸರು ಇರಿಸಿಕೊಂಡ ಸಂಬಂಧ ಕುರಿತು ಬೆಳಕು ಬೀರುವ ಕೆಲವು ದೃಷ್ಟಾಂತಗಳನ್ನು ನೀಡಬಹುದು. ಸ್ವಾದಿ ಅರಸರ ಕಾಲಕ್ಕೆ ಸಂಬಂಧಿಸಿದ ಒಟ್ಟೂ ೪೬ (೫ ೫೦) ದಾಖಲೆಗಳು ಸ್ವರ್ಣವಲ್ಲೀ ಮಠದ ಪತ್ರಾಗಾರದಲ್ಲಿ ದೊರಕಿವೆ.

ತಮ್ಮ ವಂಶಸ್ಥರಿಗೆಲ್ಲ ಶಿವಸಾಯುಜ್ಯ ಮೋಕ್ಷ ಪದವಿ ಸ್ಥಿರವಾಗಬೇಕೆಂದು ಶಾಲಿವಾಹನ ಶಕ ೧೪೭೮ ನೆಯ ರಾಕ್ಷಸ ಸಂವತ್ಸರದ ಮಾಘ ಬ. ೧೪ (೧೦-೨-೧೫೫೬) ಸೋಮವಾರದಂದು, ಇಮ್ಮಡಿ ಅರಸಪ್ಪನಾಯಕರು ಸೋದೆ ಸಹಸ್ರಲಿಂಗ ಮಠಕ್ಕೆ ಕಳ್ಳರ ಉಪದ್ರವಾಗಿದ್ದರಿಂದ, ಗುರುಪರಂಪರೆಯಲ್ಲಿ ೩೪ ನೆಯವರಾದ ಹಿರೆ ಶ್ರೀ ಚಂದ್ರಶೇಖರ ಸರಸ್ವತೀ ಶ್ರೀಪಾದಂಗಳಿಗೆ, ಗೋಸೂರು ಎಂಬ ಕಾನನ್ನು ಕಡಿಸಿ, ಪೂಗಾರಾಮ (ಅಡಿಕೆ ತೋಟ)ವನ್ನು ಮಾಡಿಸಿ, ಅಲ್ಲಿ ಯೋಗ್ಯವಾಗಿದ್ದ

ಸ್ಥಳದಲ್ಲಿ ಮಠವನ್ನು ಕಟ್ಟಿಸಿ, ತನ್ಮಧ್ಯದಲ್ಲಿ ಶ್ರೀ ನರಸಿಂಹದೇವರಿಗೆ ಒಂದು ಮತ್ತು ಶ್ರೀ ಕಾಶಿವಿಶ್ವೇಶ್ವರ ಮತ್ತು ಶಂಕರಾಚಾರ್ಯರಿಗೆ ಒಂದು, ಹೀಗೆ ಎರಡು ಶಿಲಾಮಯ ದೇವಾಲಯಗಳನ್ನು ನಿರ್ಮಿಸಿ, ಈ ಮಠಕ್ಕೆ 'ಸ್ವರ್ನವಲ್ಲಿ' [ಸ್ವರ್ಣವಲ್ಲಿ] ಮಠವೆಂದು ನಾಮಧೇಯಪಿಟ್ಟು, ಪೂಜೆ ವಿನಿಯೋಗ ಪ್ರತಿನಿತ್ಯ ನಿಯಮದಂತೆ ನಡೆಯಬೇಕೆಂದು, ಪೂಗಾರಾಮಕ್ಕೆ 'ಹೊಂನೆಹಳ್ಳಿ' ಗ್ರಾಮವೆಂದು ಹೆಸರಿಟ್ಟು, ಸಹಿರಣ್ಯೋದಕ ದಾನ ಧಾರಾಪೂರ್ವಕವಾಗಿ ಸಮರ್ಪಿಸಿದನೆಂದು ಧರ್ಮಸಾಧನವು (ಸ್ವರ್ಣವಲ್ಲೀ ದಾಖಲೆ : ೬) ತಿಳಿಸುತ್ತದೆ. ಶಾಸನದ ಪ್ರಾರ್ಥನಾ ಶ್ಲೋಕದಲ್ಲಿ ಸೋದೆಯನ್ನು 'ಸೋಮದಾಪುರಿ' ಎಂದು ಉಲ್ಲೇಖಿಸಲಾಗಿದೆ ದೇವರನ್ನು ಪೂಜಿಸುವ ಯತಿವರ್ಯರಿಗೆ ನೈವೇದ್ಯ-ಭಿಕ್ಷೆಗೋಸ್ಕರವಾಗಿ ಅಡಿಕೆ ತೋಟ ಸಹಿತವಾದ ಹೊನ್ನೆಹಳ್ಳಿ ಗ್ರಾಮ, ಅಡಿಕೆ ತೋಟದಿಂದ ಕಂಗೊಳಿಸುವ ದೊಡ್ಡದಾದ ಗೊಣಸರ ಗ್ರಾಮ, ಮುಸ್ಕಿಗ್ರಾಮ, ಅಡಕಳ್ಳಿ, ಕೋಟೆಮನೆ, ಜಡ್ಡಿಗದ್ದೆ, ಕವಡಿಕೆರೆ, ಬೆಳಖಂಡ ಮುಂತಾದ ಇನ್ನೂ ಹಲವಾರು ಗ್ರಾಮಗಳನ್ನು ನಾಯಕರು ಸಮರ್ಪಿಸಿದರೆಂದು ಹೊನ್ನೆಹಳ್ಳಿ ಮಠದ ಕ್ರಿ. ಶ. ೧೫೫೬ ರ ಶಿಲಾಶಾಸನವು (ಸ್ವ. ದಾ. ೭) ತಿಳಿಸುತ್ತದೆ.

ಶಾ.ಶ. ೧೫೭೬ ನೆಯ ಜಯ ಸಂವತ್ಸರ ಮಾಘ ಬ. ೩೦ (೨೬-೨-೧೬೫೫), ಸೋಮವಾರದಂದು, ಪೂರ್ವದಿಂದ ತಾವು ಆಳಿ ಬರುತ್ತಿದ್ದ ಕರೂರು ಸೀಮೆಯೊಳಗಿನ ಅಡಕಳ್ಳಿ ಮಠದ ಧರ್ಮ, ಆ ಮಠದ ಕಾಲುಮಠಗಳು ತಮ್ಮ ಧರ್ಮದ ಭೂಮಿಯನ್ನು ಸೋದೆಯ ಮಹಾಪ್ರಭು ಮಧುಲಿಂಗನಾಯಕರು ಶ್ರೀ ರಾಮಚಂದ್ರ ಸರಸ್ವತೀ ಶ್ರೀಪಾದಂಗಳಿಗೆ (ಪೀಠದಲ್ಲಿ ೪೦ ನೆಯವರು) ದತ್ತಿಯಾಗಿ ನೀಡಿದರು. ಅರಸುಮನೆತನದ ಶ್ರೇಯೋಭಿವೃದ್ಧಿಯಾಗುವಂತೆ, ಪೂರ್ವ ಪ್ರಮಾಣ ಅಡಕಳ್ಳಿ ಮಠದ ನರಸಿಂಹದೇವರ ಸೇವೆಯನ್ನು ನಡೆಸಿಕೊಂಡು ಬರುವಂತೆ ಮಧುಲಿಂಗನಾಯಕರು ಪ್ರಾರ್ಥಿಸಿಕೊಂಡರು (ಸ್ವ ದಾ. ೨೪). ಶಾ ಶ. ೧೫೯೫ ನೆಯ ಪರಿಧಾವಿ ಸಂವತ್ಸರದ ಭಾದ್ರಪದ ಶು. ೧೦ (೨೨-೮-೧೬೭೨), ಗುರುವಾರದಂದು ಮಧುಲಿಂಗನಾಯಕರು, ನರಸಿಂಹದೇವರ ಅಭಿಷೇಕ, ಪೂಜೆ, ನೈವೇದ್ಯ ಮತ್ತು ನಂದಾದೀಪ್ತಿ ಬಗ್ಗೆ ಶ್ರೀ ಸರ್ವಜ್ಞೇಂದ್ರ ಸರಸ್ವತಿಗಳಿಗೆ (ಪೀಠದಲ್ಲಿ ೪೩ನೆಯವರು) ಪ್ರಾಕು ಬಿಟ್ಟ ಮುಸ್ಕಿ ಗ್ರಾಮವನ್ನು ಬರೆಸಿಕೊಟ್ಟ ರಾಯಸಪಟ್ಟಿ (ಸ್ವ ದಾ.) ಮತ್ತು ಪಶಿಹುಲ್ಲುಮನೆ, ಡಬಕಳಿ, ಕೂಮನಮನೆ, ಅರಸಾಪುರ, ಗೋಳಿಕೊಪ್ಪ ಮುಂತಾದ ಗ್ರಾಮಗಳನ್ನು ದತ್ತಿಯಾಗಿ ನೀಡಿದ ವಿವರ, ಶ್ರೀಮಠದ ದಾಖಲೆಗಳಲ್ಲಿ (ಸ್ವ.ದಾ. ೩೦, ೩೧) ಲಭ್ಯವಾಗಿವೆ.

ಪಿಂಗಳ ಸಂವತ್ಸರದ ಫಾಲ್ಗುಣ ಬ. ೧೦ (೮-೩-೧೬೭೮), ಶುಕ್ರವಾರದಂದು ಶ್ರೀ ರಾಮಚಂದ್ರ ಸರಸ್ವತೀ ಶ್ರೀಪಾದಂಗಳಿಗೆ (೪೪ ನೆಯವರು) ಸೋದೆಯ ಮಹಾ

ಪ್ರಭುಗಳಾದ ಇಮ್ಮಡಿ ಸದಾಶಿವನಾಯಕರು ಯಲ್ಲಾಪುರ ಸೀಮೆಯೊಳಗಿನ ತಟಿಗಾರು ಕೊಮಾಡಿ ಧರ್ಮಸ್ವದ ಇಪ್ಪತ್ತುಮೂರುವರೆ ವರಹದ ಭೂಮಿಯನ್ನು ನರಸಿಂಹದೇವರ ಸೇವೆಗಾಗಿ ಬಿಟ್ಟುಕೊಟ್ಟರು (ಸ್ವ.ದಾ. ೩೪). ಇಮ್ಮಡಿ ಸದಾಶಿವ ನಾಯಕರ ಕಾಲದಲ್ಲಿ (ಕ್ರಿ. ಶ. ೧೬೭೮–೧೭೧೮) ಆದಿಲ್‌ಶಾಹಿಗಳ ಪ್ರಾಬಲ್ಯ ಕುಸಿದಿತ್ತು. ಮೊಘಲರ ಆಧಿಪತ್ಯವನ್ನು ಸದಾಶಿವನಾಯಕರು ನೆಪಮಾತ್ರಕ್ಕೆ ಒಪ್ಪಿಕೊಂಡರು. ಶಿವಾಜಿಯನ್ನು ಧೈರ್ಯದಿಂದ ಎದುರಿಸಿದ (೧೬೭೬–೧೬೭೮) ಧೀರ ಮಹಿಳೆ ಮಲ್ಲಮ್ಮ ಸದಾಶಿವನಾಯಕರ ಸಹೋದರಿಯಾಗಿದ್ದು, ಬೆಳವಡಿಯ ನಾಯಕ, ಈಶ್ವರ ಪ್ರಭುಗಳ ಮಡದಿಯಾಗಿದ್ದಳು. ಕ್ರಿ.ಶ. ೧೭೦೫ರಲ್ಲಿ ಬ್ರಿಟಿಷ್‌ರ ಚಟುವಟಿಕೆಗಳನ್ನು ನಿಯಂತ್ರಿಸಲೆಂದು ಸದಾಶಿವನಾಯಕರು ಕಾಳಿ ನದಿಯ ದಂಡೆಯ ಮೇಲೆ 'ಸದಾಶಿವಗಡ'ವೆಂಬ ಕೋಟೆಯನ್ನು ನಿರ್ಮಿಸಿದರು.

ಶ್ರೀ ಸ್ವರ್ಣವಲ್ಲೀ ಮಠದೊಂದಿಗೆ ಸೋದೆಯರಸರು ಇರಿಸಿಕೊಂಡ ಸಂಬಂಧವನ್ನರಿಯಲೆಂದು ಕೆಲವೇ ದೃಷ್ಟಾಂತಗಳನ್ನು ಮಾತ್ರ ಲೇಖನದಲ್ಲಿ ನಮೂದಿಸಲಾಗಿದೆ. ಕ್ರಿ.ಶ. ೧೭೬೩ ರಲ್ಲಿ ಹೈದರಲಿಯ ಸೈನ್ಯ ಸೋದೆ ರಾಜ್ಯವನ್ನು ಗೆದ್ದುಕೊಳ್ಳುವದರ ಜೊತೆಗೆ ಸೋದೆ ರಾಜ್ಯದ ಪತನವೂ ಆಯಿತು. ಆದರೆ ಸೋದೆ ಅರಸು ಮನೆತನದವರಾದ ಶ್ರೀ ಸವಾಯಿವೀರ ಸದಾಶಿವರಾಜೇಂದ್ರ ಬಸವಲಿಂಗ ಒಡೆಯರು ಇಂದಿಗೂ ಗೋವಾ ರಾಜ್ಯದ ಬಾಂದೋರಾ (ಬಾಂದೇವಾಡಿ) ದಲ್ಲಿ ನೆಲೆಸಿದ್ದಾರೆ. ವಿಜಯನಗರದ ಸಾಮಂತರಾಗಿ, ನಂತರ ಸ್ವತಂತ್ರರಾದ ಸ್ವಾದಿಯ ಅರಸರು ವಿಜಯನಗರ ಸಾಮ್ರಾಜ್ಯದ ಆಡಳಿತ ಪದ್ಧತಿ, ರಾಜಕೀಯ ಕುಶಲತೆ, ಸಂಸ್ಕೃತಿ ಮತ್ತಿನ್ನಿತರ ಗುಣಗಳನ್ನು ಅಳವಡಿಸಿಕೊಂಡು, ಸಾಹಿತ್ಯ ಮತ್ತು ಶಿಲ್ಪಕಲೆಗೆ ಪ್ರೋತ್ಸಾಹ ನೀಡಿದರು. ನೀರಾವರಿಯತ್ತ ವಿಶೇಷ ಗಮನಹರಿಸಿ, ಕೃಷಿಯನ್ನು ಪ್ರೋತ್ಸಾಹಿಸಿ, ಎಕರೆವಾರು ಕಂದಾಯ ನಿರ್ಧರಿಸಿ, ಅದರಂತೆ ಕೃಷಿಕರಿಂದ ಕಂದಾಯ ವಸೂಲು ಮಾಡುತ್ತಿದ್ದರು. ವಿಜಯನಗರ, ಆದಿಲ್‌ಶಾಹಿ, ಮೊಘಲ್, ಮರಾಠಾ, ಬ್ರಿಟಿಷ್, ಡಚ್, ಪೋರ್ತುಗೀಜ, ಕೆಳದಿ, ಬಿಳಗಿ ಮತ್ತು ಕೊಡಗಿನ ದೊರೆಗಳೊಂದಿಗೆ ಸುಧಾಪುರದ ಅರಸರು ಸಂದರ್ಭೋಚಿತವಾಗಿ ನಡೆದುಕೊಂಡು, ಉದಾತ್ತ ನೀತಿ ಮತ್ತು ವ್ಯವಹಾರದ ಕುಶಲತೆಯಿಂದ ರಾಜ್ಯವನ್ನಾಳಿದರು. ಸುಧಾ ರಾಜ್ಯವು ಮೆಣಸಿನ ಕಾಳಿಗಾಗಿ ಜಗತ್ಪ್ರಸಿದ್ಧಿ ಪಡೆದಿದ್ದರಿಂದ, ವಿದೇಶಿ ವ್ಯಾಪಾರಸ್ಥರು ಈ ರಾಜ್ಯದೊಂದಿಗೆ ವ್ಯಾಪಾರಿ ಸಂಬಂಧವನ್ನಿರಿಸಿಕೊಂಡಿದ್ದರು. ತಮ್ಮ ರಾಜ್ಯದಲ್ಲಿ ಸ್ಮಾರ್ತ (ಹವ್ಯಕ), ಜೈನ, ಮಾಧ್ವ ಮತ್ತು ವೀರಶೈವ ಮಠಗಳನ್ನು ಪೋಷಿಸಿ, ಸರ್ವಧರ್ಮೀಯರನ್ನು ಸಮಾನವಾಗಿ ಕಂಡು ಪ್ರಜಾಹಿತ ಕಾರ್ಯಗಳನ್ನು ಮಾಡಿದರು, ಸುಧಾಪುರದ ಅರಸರ ಲಾಂಛನ ವ್ಯಾಘ್ರ.

ಸೋದೆಯರಸರ ಉಚ್ಛ್ರಾಯ ಕಾಲದ ಎರಡು ಶತಮಾನಗಳ ಅವಧಿಯಲ್ಲಿ ಸ್ವರ್ಣವಲ್ಲೀ ಮಠದ ಗುರುಪರಂಪರೆಯಲ್ಲಿ ೩೪ನೆಯ ಹಿರೆ ಶ್ರೀ ಚಂದ್ರಶೇಖರ ಸರಸ್ವತಿಗಳಿಂದ ಪ್ರಾರಂಭಿಸಿ, ೪೭ನೆಯ ಶ್ರೀ ಸರ್ವಜ್ಞೇಂದ್ರ ಸರಸ್ವತಿಗಳವರೆಗೆ, ಒಟ್ಟು ೧೪ ಸ್ವಾಮಿಗಳು ಪೀಠದಲ್ಲಿದ್ದರು. ಸ್ವರ್ಣವಲ್ಲೀ ಮಠದ ಚರಿತ್ರೆಯಲ್ಲಿಯೂ ಈ ಎರಡು ಶತಮಾನಗಳ ಕಾಲವು ಉಚ್ಛ್ರಾಯ ಕಾಲವೆಂದೇ ಹೇಳಬೇಕು. ಸ್ವರ್ಣವಲ್ಲೀ ಮಠಕ್ಕೆ ಸೋದೆಯರಸರು ನೀಡಿದ ಅನೇಕ ದಾನಶಾಸನಗಳನ್ನು ಗಮನಿಸಿದಾಗ ಸೋದೆಯರಸರಿಗೆ, ವಿಶೇಷವಾಗಿ ಸ್ವರ್ಣವಲ್ಲೀ ಮಠದ ಗುರುಗಳ ಬಗ್ಗೆ ಎಷ್ಟೊಂದು ಗೌರವವಿತ್ತೆಂಬುದು ವಿದಿತವಾಗುತ್ತದೆ.

---

ವಿ.ಸೂ. : ಹೆಚ್ಚಿನ ಮಾಹಿತಿಗಾಗಿ ಲೇಖಕರ 'ಶ್ರೀ ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನದ ಐತಿಹಾಸಿಕ ದಾಖಲೆಗಳು' ಮತ್ತು 'ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನ' ಎಂಬ ಗ್ರಂಥಗಳನ್ನು ಓದಿರಿ.

# ಸ್ವರ್ಣವಲ್ಲೀ ಮಠಕ್ಕೆ ಸೋದೆಯ
# ಇಮ್ಮಡಿ ಅರಸಪ್ಪನಾಯಕನ ಧರ್ಮಶಾಸನಗಳು

---

ಇಂದಿನ ಉತ್ತರಕನ್ನಡ ಜಿಲ್ಲೆಯ ಶಿರಸಿ ತಾಲೂಕಿನಲ್ಲಿರುವ ಸ್ವಾದಿ, ಹಿಂದೊಮ್ಮೆ ಸ್ವಾದಿ ಅರಸರ ರಾಜಧಾನಿಯಾಗಿತ್ತು. ಸುಧಾಪುರ, ಸೊದೆ ಸೋಮದಾಪುರ, ಸೋವದೆ, ಸೋದೆ, ಸೋಂದಾಭಿದಾನ (ಸೋಂದಾನಗರ), ಸೋಂದಾ, ಸೂಂದಾ, ಸ್ವಾದಿ ಇತ್ಯಾದಿ ಹೆಸರುಗಳಿಂದ ಪೂರ್ವದಲ್ಲಿ ಈ ಸ್ಥಳ ಗುರುತಿಸಲ್ಪಟ್ಟಿದೆ. ಹದಿನಾರನೆಯ ಶತಮಾನದ ಮಧ್ಯಕಾಲದಿಂದ ಹದಿನೆಂಟನೆಯ ಶತಮಾನದ ಮಧ್ಯಕಾಲದವರೆಗೆ ಸೋದೆ ರಾಜ್ಯದ ಉಚ್ಛ್ರಾಯ ಕಾಲ ಎಂದು ಪರಿಗಣಿಸಬಹುದು. ಉಚ್ಛ್ರಾಯ ಕಾಲದಲ್ಲಿ ಸೋದೆ ರಾಜ್ಯವನ್ನು ಕ್ರಮವಾಗಿ ಇಮ್ಮಡಿ ಅರಸಪ್ಪ, ರಾಮಚಂದ್ರ, ರಘುನಾಥ, ಮಧುಲಿಂಗ, ಸವಾಯಿ ರಾಮಚಂದ್ರ, ಇಮ್ಮಡಿ ಸದಾಶಿವ, ಇಮ್ಮಡಿ ಬಸವಲಿಂಗ ಮತ್ತು ಮುಮ್ಮಡಿ ಸದಾಶಿವ ನಾಯಕರು ಆಳಿದರು.[೧] ಪ್ರಸ್ತುತ ಲೇಖನವು ಇಮ್ಮಡಿ ಅರಸಪ್ಪನಾಯಕನು (ಕ್ರಿ ಶ. ೧೫೫೫-೧೬೦೩) ಸೋದೆ ರಾಜ್ಯದ ಹೊನ್ನೇಹಳ್ಳಿ ಗ್ರಾಮದ ಸ್ವರ್ಣವಲ್ಲೀ ಮಠದೊಂದಿಗೆ ಇರಿಸಿಕೊಂಡ ಸಂಬಂಧ ಕುರಿತು ವಿವೇಚಿಸುವದರಿಂದ, ಸ್ವರ್ಣವಲ್ಲೀ ಮಠಕ್ಕೆ ಇಮ್ಮಡಿ ಅರಸಪ್ಪನಾಯಕನು ಕೊಟ್ಟ ದಾನಶಾಸನಗಳ ಕಿರುಪರಿಚಯವನ್ನಷ್ಟೇ ಲೇಖನದಲ್ಲಿ ಕೊಡಲಾಗಿದೆ.[೨]

ಸ್ವರ್ಣವಲ್ಲೀ ಮಠ ಆದಿಶಂಕರರಷ್ಟೇ ಪುರಾತನವಾಗಿದ್ದರೂ, ಮಠ ಸ್ವರ್ಣವಲ್ಲಿಗೆ ಸ್ಥಳಾಂತರಗೊಂಡಿದ್ದು ಕ್ರಿ. ಶ. ೧೫೫೬ ರಲ್ಲಿ. ಕಾಶಿಯಲ್ಲಿ ೯ ನೆಯ ಶತಮಾನದಲ್ಲಿ ಸ್ಥಾಪಿತವಾದ, ಶ್ರೀಮಠ, ಕ್ರಮೇಣ, ಉಜ್ಜಯಿನಿ, ಗೋಕರ್ಣ, ಕಡತೋಕೆ, ಸಹಸ್ರಲಿಂಗ, ನಂತರ ಸ್ವರ್ಣವಲ್ಲಿಗೆ ಸ್ಥಳಾಂತರಗೊಂಡಿತು. ಅದ್ವೈತ ಸಂಪ್ರದಾಯದ ಸ್ವರ್ಣವಲ್ಲೀ ಮಠದ ಗುರುಪರಂಪರೆ ಅವಿಚ್ಛಿನ್ನವಾಗಿ ಇಂದಿಗೂ ಸಾಗಿ

---

೧. ಹೆಚ್ಚಿನ ಮಾಹಿತಿಗಾಗಿ ಲೇಖಕರ 'ಶಿರಸಿ ತಾಲೂಕಿನ ಇತಿಹಾಸ', ಎಂ. ಇ. ಸೊಸೈಟಿ, ಶಿರಸಿ. ೧೯೮೮, ಪು. ೬೪-೯೨.

೨. ಸ್ವರ್ಣವಲ್ಲೀ ಮಠದೊಂದಿಗೆ ಸ್ವಾದಿ ಅರಸರು ಇರಿಸಿಕೊಂಡ ಸಂಬಂಧದ ಮೇಲೆ ಬೆಳಕು ಬೀರುವ ೪೬ (೫-೫೦) ದಾಖಲೆಗಳನ್ನು ಲೇಖಕರು ತಮ್ಮ, 'ಶ್ರೀ ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನದ ಐತಿಹಾಸಿಕ ದಾಖಲೆಗಳು, ಸಂ, I' (ಸ. ದಾ. ೫-೫೦) ಉಲ್ಲೇಖಿಸಿದ್ದಾರೆ.

ಬಂದಿದೆ.[೩] ಗುರುಪರಂಪರೆಯಲ್ಲಿ ೩೪ ನೆಯವರಾದ ಓರೆ [ಹಿರಿಯ] ಶ್ರೀ ಚಂದ್ರಶೇಖರ ಸರಸ್ವತೀ (ಕ್ರಿ ಶ ೧೫೫೬ ಸು.ಕ್ರಿ ಶ ೧೫೯೭), ಮತ್ತು ೩೫ ನೆಯವರಾದ ಶ್ರೀ ಸರ್ವಜ್ಞೇಂದ್ರ ಸರಸ್ವತಿಗಳು (ಸು.ಕ್ರಿ ಶ ೧೫೯೭-೧೬೨೦) ಇಮ್ಮಡಿ ಅರಸಪ್ಪ ನಾಯಕನ ಸಮಕಾಲೀನರು. ಮಠಗಳಿಗೆ ಭೂದಾನ ಮಾಡುವ ವಿಜಯನಗರ ಸಾಮ್ರಾಜ್ಯದ ಸಂಪ್ರದಾಯವನ್ನು ಸೋದೆಯ ಅರಸರು ಮುಂದುವರಿಸಿಕೊಂಡು ಬಂದರೆಂಬುದು ಅವರ ದಾನಶಾಸನಗಳಿಂದ ಖಚಿತವಾಗುತ್ತದೆ.

ತಮ್ಮ ವಂಶಸ್ಥರಿಗೆಲ್ಲ ಶಿವಸಾಯುಜ್ಯ ಮೋಕ್ಷ ಪದವಿ ಸ್ಥಿರವಾಗಬೇಕೆಂದು ಶಾ. ಶ. ೧೪೭೮ ನೆಯ ರಾಕ್ಷಸ ಸಂವತ್ಸರದ ಮಾಘ ಬ. ೧೪ (೧೦-೨-೧೫೫೬), ಸೋಮವಾರದಂದು, ಇಮ್ಮಡಿ ಅರಸಪ್ಪನು ಶ್ರೀ ಸೋದೆ ಸಹಸ್ರಲಿಂಗಮಠದ[೪] ಶ್ರೀ ಚಂದ್ರಶೇಖರ ಸರಸ್ವತೀ ಶ್ರೀಪಾದಂಗಳಿಗೆ, ಗೋಸೂರು ಎಂಬ ಅಡವಿಯನ್ನು ಕಡಿಸಿ, ಪೂಗಾರಾಮವನ್ನು ಮಾಡಿಸಿ, ಅಲ್ಲಿ ಯೋಗ್ಯವಾಗಿದ್ದ ಸ್ಥಳದಲ್ಲಿ ಮಠವನ್ನು ಕಟ್ಟಿಸಿ, ತನ್ಮಧ್ಯದಲ್ಲಿ ಶ್ರೀ ನರಸಿಂಹದೇವರಿಗೆ ಒಂದು ಮತ್ತು ಶ್ರೀ ಕಾಶಿ ವಿಶ್ವೇಶ್ವರ ಮತ್ತು ಶ್ರೀ ಶಂಕರಾಚಾರ್ಯರಿಗೆ ಒಂದು, ಹೀಗೆ ಎರಡು ಶಿಲಾಮಯ ದೇವಾಲಯಗಳನ್ನು ನಿರ್ಮಿಸಿ,[೫] ಈ ಮಠಕ್ಕೆ 'ಸ್ವರ್ನವಲ್ಲಿ'[೬] [ಸ್ವರ್ಣವಲ್ಲೀ] ಮಠವೆಂದು ನಾಮಧೇಯವಿಟ್ಟು, ಪೂಜೆ ವಿನಿಯೋಗ ಪ್ರತಿನಿತ್ಯ ನಿಯಮದಂತೆ ನಡೆಯಬೇಕೆಂದು, ಪೂಗಾರಾಮಕ್ಕೆ 'ಹೊಂನೆಹಳ್ಳಿ'[೭] [ಹೊನ್ನೇಹಳ್ಳಿ] ಗ್ರಾಮವೆಂದು ಹೆಸರಿಟ್ಟು, ಸಹಿರಣ್ಯೋದಕ ದಾನಧಾರಾಪೂರ್ವಕವಾಗಿ ಸಮರ್ಪಿಸಿದನೆಂದು ಧರ್ಮ

---

೩. ಸ್ವರ್ಣವಲ್ಲೀ ಮಠದ ಗುರುಪರಂಪರೆಯಲ್ಲಿ ೩೮ ನೆಯವರಾದ ಶ್ರೀ ಗಂಗಾಧರೇಂದ್ರ ಸರಸ್ವತಿಗಳು ರಚಿಸಿದ 'ಜ್ಞಾನ ದೀಪಿಕಾ'ದ ಎರಡನೆಯ ಅಧ್ಯಾಯದಲ್ಲಿ, ವಿಶ್ವಪತಿ ದೀಕ್ಷಿತರ ಮಗ ಗುಣನಿಧಿಯು ಕಾಶಿಯಲ್ಲಿ ಆದಿ ಶಂಕರಾಚಾರ್ಯರನ್ನು ಕಂಡು, ಅವರ ಶಿಷ್ಯರಾದ ಭಾಸ್ಕರೇಂದ್ರ ಸರಸ್ವತಿಗಳಿಂದ ಸನ್ಯಾಸ ಪಡೆದು, ದಶಾಶ್ವಮೇಧ ಘಾಟನಲ್ಲಿ ನಿರ್ಮಿತವಾದ ಮಠಕ್ಕೆ ಪ್ರಥಮ ಗುರುಗಳಾಗಿ, 'ವಿಶ್ವವಂದ್ಯ ಸರಸ್ವತೀ' ಎಂಬ ಹೆಸರಿನಿಂದ ಪ್ರಸಿದ್ಧಿಗೆ ಬಂದರು. ಕಾಶಿಯಿಂದ ಕ್ರಮೇಣ ಬೇರೆ ಬೇರೆ ಸ್ಥಳಗಳಿಗೆ ಶ್ರೀಮಠ ಸ್ಥಳಾಂತರಗೊಂಡ ಚಾರಿತ್ರಿಕ ಘಟನೆಗಳನ್ನು 'ಜ್ಞಾನದೀಪಿಕಾ' ದಲ್ಲಿಯ ೫ ಅಧ್ಯಾಯಗಳಲ್ಲಿ ವಿವರಿಸಲಾಗಿದೆ.

೪. ಸ್ವರ್ಣವಲ್ಲಿಗೆ ಸಮೀಪವಿರುವ ಸಹಸ್ರಲಿಂಗದಲ್ಲಿ, ಶಾಲ್ಮಲಾ ನದಿಯ ದಂಡೆಯ ಮೇಲೆ, ಸ್ವರ್ಣವಲ್ಲಿಗೆ ಸ್ಥಳಾಂತರಗೊಳ್ಳುವ ಪೂರ್ವದಲ್ಲಿ, ಶ್ರೀಮಠವಿತ್ತು. ಆದರೆ ಇಂದು ಅಲ್ಲಿ ಮಠದ ಕುರುಹುಗಳಾವವೂ ಗೋಚರಿಸುವದಿಲ್ಲ.

೫. ಸ್ವರ್ಣವಲ್ಲಿಯಲ್ಲಿ ಇಂದಿಗೂ ಈ ದೇವಾಲಯಗಳಿದ್ದು, ನಿತ್ಯ ಪೂಜೆ ನಡೆಯುತ್ತದೆ.

೬. ಹೆಚ್ಚಿನ ಶಾಸನಗಳಲ್ಲಿ ಮತ್ತು ದಾಖಲೆಗಳಲ್ಲಿ ಸ್ವರ್ಣವಲ್ಲಿಯನ್ನು 'ಸ್ವರ್ನವಲ್ಲಿ' ಎಂದೇ ಉಲ್ಲೇಖಿಸಲಾಗಿದೆ.

೭. ಗ್ರಾಮೀಣ ಜನರು 'ಹೊನ್ನಳ್ಳಿಮಠ' ಎಂದೇ ಕರೆಯುತ್ತಾರೆ.

ಸಾಧನವು ತಿಳಿಸುತ್ತದೆ.[೮] ಸೋದೆ ಅರಸರ ವಂಶವೃದ್ಧಿಯಾಗಲೆಂದು,[೯] ಸೋದೆಯರಸರಿಂದಲೇ ನಿರ್ಮಾಣವಾಗಿದ್ದ ಸಹಸ್ರಲಿಂಗ ಮಠದಲ್ಲಿ ಶ್ರೀ ನರಸಿಂಹ ಮತ್ತು ಶ್ರೀ ಚಂದ್ರಮೌಳೀಶ್ವರ ದೇವರನ್ನು ಸ್ವಾಮಿಗಳು ಆರಾಧಿಸುತ್ತಿರುವಾಗ, ಆ ಸಹಸ್ರಲಿಂಗ ಮಠಕ್ಕೆ ಕಳ್ಳರ ಉಪದ್ರವಾಗಿದ್ದರಿಂದ, ಗುರುಗಳ ತಪೋಯೋಗಾನುಷ್ಠಾನ ಸರಾಗದಿಂದ ನಡೆಯಬೇಕೆಂದು, ಇಮ್ಮಡಿ ಅರಸಪ್ಪನಾಯಕನು ಹೊನ್ನೇಹಳ್ಳಿ ಮಠದಲ್ಲಿ ಸ್ವರ್ಣವಲ್ಲೀ ಮಠವನ್ನು ನಿರ್ಮಾಣ ಮಾಡಿಸಿದನೆಂದೂ ಧರ್ಮಶಾಸನವು ತಿಳಿಸುತ್ತದೆ. ಹೊನ್ನೇಹಳ್ಳಿ ಎಂಬ ತೋಟ ಗ್ರಾಮವನ್ನು ಪೂಜಾವಿನಿಯೋಗದಲ್ಲಿ ನಿರ್ವಹಿಸಿಕೊಳ್ಳುತ್ತ, ಸರ್ವಮಾನ್ಯವಾಗಿ, ಸರ್ವಬಾಧಾ ಪರಿಹಾರವಾಗಿ, ಪೂರ್ವ ಮರ್ಯಾದೆ ಪ್ರಕಾರ ಶಿಬಿಕೆ ಮುಂತಾದ ಬಿರುದುಗಳನ್ನು[೧೦] ಕೂಡಾ ಆಳಿ ಅನುಭವಿಸಿಕೊಂಡು, ನಿರುಪದ್ರವದಿಂದ ತಪೋಯೋಗಾನುಷ್ಠಾನವನ್ನು ಮಾಡಿಕೊಳ್ಳುತ್ತ ಇಚ್ಛಾನುಸಾರವಾಗಿ ಶ್ರೀಗಳವರು ಇರಬೇಕೆಂಬ ಅಂಶವನ್ನೂ ಶಾಸನದ ಪಾಠದ ಕೊನೆಯಲ್ಲಿ ನಮೂದಿಸಲಾಗಿದೆ. ಶಾಸನದಲ್ಲಿ ಇಮ್ಮಡಿ ಅರಸಪ್ಪನನ್ನು "ಶ್ರೀ ಮನ್ನಾಳ್ವ ಮಹಾಪ್ರಭು ಸೋದೆ ಸಧರ್ಮಸಿಂಹಾಸನಾಧೀಶ್ವರರಾದ ಶ್ರೀ ಅರಸಪ್ಪ ನಾಯ್ಕರವರು", ಎಂದು ಸಂಬೋಧಿಸಲಾಗಿದೆ ಶಾಸನದ ಪ್ರಾರ್ಥನಾ ಶ್ಲೋಕದಲ್ಲಿ ಸೋದೆಯನ್ನು 'ಸೋಮದಾಪುರಿ' ಎಂದು ಉಲ್ಲೇಖಿಸಲಾಗಿದೆ.

ಶಾ. ಶ. ೧೪೭೮ ನೆಯ (ಕ್ರಿ. ಶ. ೧೫೫೬) ರಾಕ್ಷಸ ಸಂವತ್ಸರದಲ್ಲಿ ಇಮ್ಮಡಿ ಅರಸಪ್ಪನಾಯಕನು, ದೇವಾಲಯ ನಿರ್ಮಿಸಿಕೊಟ್ಟು, 'ಸ್ವರ್ಣವಲ್ಲೀ' ಎಂಬ ಹೆಸರನ್ನಿಟ್ಟು, ಅಲ್ಲಿರುವ ಜಗತ್ಪತಿಯಾದ ನೃಸಿಂಹದೇವರಿಗೆ, ಈ ದೇವರನ್ನು ಪೂಜಿಸುವ ಯತಿವರ್ಯರಿಗೆ (ಚಂದ್ರಶೇಖರ ಸರಸ್ವತೀ) ನೈವೇದ್ಯ– ಭಿಕ್ಷೆಗೋಸ್ಕರವಾಗಿ ಅಡಿಕೆ ತೋಟ ಸಹಿತವಾದ ಹೊನ್ನೇಹಳ್ಳಿ ಗ್ರಾಮ, ಅಡಿಕೆ ತೋಟದಿಂದ ಕಂಗೊಳಿಸುವ ದೊಡ್ಡದಾದ ಗೋಣಸರ ಗ್ರಾಮ, ಮುಶ್ಕಿ ಗ್ರಾಮ, ಘಟ್ಟದ ಮೇಲಿನ

---

೮. ಸ್ವ. ದಾ. ೬.

೯. ಆದ್ದರಿಂದಲೇ. ಪುತ್ರಸಂತತಿ ಇಲ್ಲದವರು ಶ್ರದ್ಧೆಯಿಂದ ಸ್ವರ್ಣವಲ್ಲೀ ಮಠದಲ್ಲಿ ಪೂಜೆ ಮಾಡಿಸಿದರೆ ಪುತ್ರಸಂತತಿ ಆಗುವದೆಂದು ಭಕ್ತರಲ್ಲಿ ಗಾಢ ನಂಬಿಕೆಯಿದೆ.

೧೦. ಉಜ್ಜನಿಯ ವಿಕ್ರಮಾರ್ಕರಸನು ಗುರುಪರಂಪರೆಯಲ್ಲಿ ದ್ವಿತೀಯರಾದ ಶ್ರೀ ನಾರಾಯಣೇಂದ್ರ ಸರಸ್ವತಿಗಳಿಗೆ ಕ್ರಿ. ಶ. ೯೦೫ ರಲ್ಲಿ ಕೊಟ್ಟ ಶಾಸನದಲ್ಲಿ ಮೇನೆ ಶ್ವೇತಛತ್ರ, ಉಭಯಚಾಮರ, ಮಕರ ತೋರಣ, ಹಗಲು ದೀವಟಿಗೆ, ಸಿಂಹಮುಖ, ಪೂರ್ಣಕುಂಭ, ಶಂಖ, ಚಕ್ರ, ಚಂದ್ರ, ಸೂರ್ಯ ಶ್ವೇತಶಂಖಚಿಹ್ನಿತ ಪತಾಕೆಗಳು, ನಾನಾ ವಿಧ ವಾದ್ಯಗಳು, ಯತಿಗಳ ಭಿಕ್ಷೆಗಾಗಿ ಗ್ರಾಮಗಳು ಅನೇಕ ಬಿರುದುಗಳನ್ನು ಮಹಾಜನರಿಂದ ತುಂಬಿದ ಸಭೆಯಲ್ಲಿ ಶಾಸನ ಮಾಡಿಕೊಟ್ಟಿರುವುದಾಗಿ ನಮೂದಿಸಲಾಗಿದೆ. ಅಂದಿನಿಂದ ಇಂದಿನವರೆಗೂ ಸ್ವರ್ಣವಲ್ಲೀ ಪೀಠಕ್ಕೆ ಬಂದ ಗುರುಗಳು ಮೇಲ್ಕಾಣಿಸಿದ ಬಿರುದಾವಳಿಗೆಲ್ಲ ಅರ್ಹರಾಗಿರುತ್ತಾರೆ.

ಮೊದೂರು, ಓಣೀಕೆರೆ, ಭತ್ತದಿಂದ ಶೋಭಿಸುವ ನೆಕ್ಕಾರು ಜೋಡಿ ಗ್ರಾಮ, ಕಕ್ಕೋಡು, ಗೋಳಗೋಡು, ಅಡಕಳ್ಳಿ ದೋಣಗಾರು, ಪಡುನ ಬಯಲು, ಶೀಗನಹಳ್ಳಿ, ಮುಂಡಿಗೇಸರ, ಅರಸಾಪುರ, ಗೋಳಿಕೊಪ್ಪ, ಕಾಳಮೆಣಸು ಮತ್ತು ಅಡಿಕೆ ಬೆಳೆಗಳಿಂದ ಸಮೃದ್ಧವಾದ, ಕೋಟೆಮನೆ, ಶೀಗೆಮನೆ, ಮಂಚಿಗೆ, ಹಲಸುಕೊಪ್ಪ, ಹುಳಸೆ, ವನಿಕೆಮನೆ, ಜಡ್ಡಿಗದ್ದೆ, ಮಲ್ಲಳ್ಳಿ, ಕವಡಿಕೆರೆ, ಜೆಳಖಂಡ, ಗರಾಸ, ಸಹಸ್ರಳ್ಳಿ ಮುಂತಾದ ಗ್ರಾಮಗಳನ್ನು ಸಮರ್ಪಿಸಿದನೆಂದು ಹೊನ್ನೇಹಳ್ಳಿ ಮಠದ ಶಿಲಾಶಾಸನವು ತಿಳಿಸುತ್ತದೆ ೧೧ "ಭೂಲೋಕದಲ್ಲಿ ಆಳುತ್ತಿರುವ ಎಲ್ಲ ಅರಸರಿಗೆ ಮತ್ತು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟ ಭೂಮಿಯು ಅನುಭವಿಸಲೂ, ಕಸಿಯಲೂ ಆಗದು. ತನ್ನಿಂದ ದಾನವಾಗಿ ಕೊಡಲ್ಪಟ್ಟದ್ದು ಎರಡು ಪಟ್ಟು ಪುಣ್ಯವನ್ನೀಯುವದು. ಬೇರೆಯವರು ದಾನ ಕೊಟ್ಟಿದ್ದರೂ ಅದನ್ನು ರಕ್ಷಿಸಬೇಕು. ಪರದತ್ತಾಪಹಾರದಿಂದ ಸ್ವದತ್ತ ದಾನವೂ ನಿಷ್ಫಲವಾಗುತ್ತದೆ. ದಾನಪಾಲನೆಗಳ ಮಧ್ಯ ಪಾಲನೆಯೇ ವಿಶೇಷ ಫಲ ನೀಡುತ್ತದೆ. ದಾನದಿಂದ ಸ್ವರ್ಗವನ್ನು ಪಡೆಯುತ್ತಾನೆ. ಮತ್ತು ಪಾಲನೆಯಿಂದ ಶಾಶ್ವತ ಸ್ಥಾನ ಪಡೆಯುತ್ತಾನೆ. ಸೂರ್ಯ, ಚಂದ್ರ, ಅಗ್ನಿ, ಗಾಳಿ, ಆಕಾಶ, ಭೂಮಿ, ನೀರು, ಹೃದಯ, ಯಮನು, ಹಗಲು_ರಾತ್ರಿಗಳೆರಡೂ, ಸಂಧ್ಯಾಕಾಲ, ಧರ್ಮವೂ ಕೂಡ, ಮನುಷ್ಯನ ನಡತೆಗೆ ಸಾಕ್ಷಿಯಾಗಿರುತ್ತವೆ," ಎಂಬುದಾಗಿ ಅದೇ ಹೊನ್ನೇಹಳ್ಳಿ ಶಾಸನದ ಪಾಠದ ಕೊನೆಯಲ್ಲಿ ನಮೂದಿಸಲಾಗಿದೆ.೧೨ ಶಾಸನದಲ್ಲಿ ಸ್ವರ್ಣವಲ್ಲೀ ಮಠದ ಸ್ವಾಮಿಗಳ ಹೆಸರನ್ನು ನಮೂದಿಸಿಲ್ಲವಾದರೂ, ಶಾ. ಶ. ೧೪೭೮ (ಕ್ರಿ. ಶ. ೧೫೫೬) ರಲ್ಲಿ ಸ್ವರ್ಣವಲ್ಲೀ ಮಠದ ಸ್ವಾಮಿಗಳು ಹಿರೆ ಶ್ರೀ ಚಂದ್ರಶೇಖರ ಸರಸ್ವತಿಗಳಾಗಿದ್ದರೆಂದು ಈ ಹಿಂದೆ ನಮೂದಿಸಲಾದ ಶಾಸನವು ಖಚಿತಪಡಿಸಿರುವದರಿಂದ, ಹೊನ್ನೇಹಳ್ಳಿ ಶಿಲಾಶಾಸನವೂ ಶ್ರೀ ಚಂದ್ರಶೇಖರ ಸರಸ್ವತಿಗಳಿಗೇ ಸಂಬಂಧಿಸಿದ್ದೆಂದು ಖಂಡಿತವಾಗಿ ಹೇಳಬಹುದು.

ಹಿಂದಿನಿಂದಲೂ ತಾನು ಆಳಿ ಬರುತ್ತಲಿದ್ದ ಭರ್ತನಹಳ್ಳಿ ಸೀಮೆಯೊಳಗಿನ ಉಮ್ಮಚಗಿ ಮಠದ ಕಾಲು ಮಠಗಳು ಮತ್ತು ಅದಕ್ಕೆ ಸಲ್ಲುವ ಸ್ವಾಸ್ಥಿ[ಸ್ವಾಸ್ಥ್ಯ]ಗಳನ್ನೆಲ್ಲ ಹೊನ್ನೇಹಳ್ಳಿಯ ಚಂದ್ರಶೇಖರ ಸರಸ್ವತಿಗಳ ಶಿಷ್ಯರಾದ ಸರ್ವಜ್ಞೇಂದ್ರ ಸರಸ್ವತಿಗಳಿಗೆ, ಉಮ್ಮಚಗಿ ಮಠದ ನರಸಿಂಹದೇವರಿಗೆ ನಂದಾದೀಪ್ತಿ, ನೈವೇದ್ಯ ಮತ್ತು ಭಿಕ್ಷೆ ಮಾಡಿಕೊಂಡಿರಲೆಂದು, ಶಿಷ್ಯ ಪಾರಂಪರ್ಯವಾಗಿ ಆ ಭೂಮಿಗಳನ್ನು ಅನುಭವಿಸಿಕೊಂಡು ಬರುವಂತೆ, ಇಮ್ಮಡಿ ಅರಸಪ್ಪನಾಯಕನು ಸು. ಕ್ರಿ.ಶ. ೧೫೯೫

೧೧. ಸ್ವ. ದಾ. ೭.

೧೨. ಶಾಸನದ ಭಾಷೆ ಸಂಸ್ಕೃತ ಮತ್ತು ಲಿಪಿ ಕನ್ನಡ. ಸಂಸ್ಕೃತದಲ್ಲಿರುವ ಶಾಸನದ ಪಾಠವನ್ನು ಸ್ವರ್ಣವಲ್ಲೀ ಮಠದ ಸಂಸ್ಕೃತ ಪಾಠಶಾಲೆಯ ಪ್ರಾಚಾರ್ಯರಾದ ವಿದ್ವಾನ್ ಬಾಲಚಂದ್ರ ಶಾಸ್ತ್ರಿಗಳು ಕನ್ನಡಕ್ಕೆ ಅನುವಾದ ಮಾಡಿಕೊಟ್ಟಿದ್ದಾರೆ.

ರಲ್ಲಿ ಧರ್ಮಸಾಧನ ನೀಡಿದನು.[೧೩] ಉಮ್ಮಚಗಿ ಮಠ ಪೂರ್ವದಿಂದಲೂ ಸ್ವರ್ಣವಲ್ಲೀ ಮಠದ ಕಾಲುಮಠವಾಗಿತ್ತೆಂಬುದೂ ಪ್ರಸ್ತುತ ಶಾಸನದಿಂದ ತಿಳಿದುಬರುತ್ತದೆ.

ಪ್ರಸ್ತುತ ವಿಷಯಕ್ಕೆ ಸಂಬಂಧಿಸಿ ಇಮ್ಮಡಿ ಅರಸಪ್ಪನಾಯಕನ ಇನ್ನೊಂದು ಶಾಸನವನ್ನು ಉಲ್ಲೇಖಿಸಬಹುದು. ಶಾ. ಶ. ೧೫೧೯ ನೆಯ ದುರ್ಮುಖಿ ಸಂವತ್ಸರದ ಫಾಲ್ಗುಣ ಬ ೩೦ (೭-೩-೧೫೯೭) ರಂದು ಸ್ವರ್ಣವಲ್ಲೀ ಮಠದ ಹಿರೆ ಚಂದ್ರಶೇಖರ ಸರಸ್ವತಿಗಳಿಗೆ ಇಮ್ಮಡಿ ಅರಸಪ್ಪನು, ಪೂರ್ವದಲ್ಲಿ ಬಿಟ್ಟ ರಾಯದತ್ತ ಧರ್ಮ, ರಾಜದತ್ತಧರ್ಮ, ಪ್ರಭುದತ್ತಧರ್ಮ, ನಾಡಸೀಮೆಯವರು ಬಿಟ್ಟ ಧರ್ಮ, ಬ್ರಹ್ಮದತ್ತಧರ್ಮ, ತುಂಡುಧರ್ಮ ಮುಂತಾದ ಬಿಟ್ಟ ಧರ್ಮಸ್ಥಳಗಳನ್ನು ನೀಡಿದನೆಂದು ಧರ್ಮಸಾಧನದ ಮೂಲ ಪಟ್ಟಿಯು ಅರುಹುತ್ತದೆ.[೧೪] ಹೊನ್ನೇಹಳ್ಳಿ ಗ್ರಾಮ, ಹಶಿಹುಲ್ಲಮನೆ, ಹುಲ್ಲುದೇವರಸರುಹು, ಡಬಕುಳಿ, ಹಾಸರಗದ್ದೆಪುರ, ಕೋಣೆಸರು, ಹೂಗುಂಡಿಗದ್ದೆ, ಶಿವದ[ಲ?]ಮನೆ, ಅರಸಾಪುರ, ಗೋಳಿಕೊಪ್ಪ, ಮೊದೂರು, ಓಣಿಕೆರೆ, ಮೊದೂರು ಗ್ರಾಮದೊಳಗಿನ ದವಸದ ಗ್ರಾಮ, ತಟ್ಟಿಸರುಹು, ಮೂರಡೆಗೆರೆ, ಶೀಗೆಹಳ್ಳಿ, ಹೆಗಡೆಕಟ್ಟು, ಶಿರಳಿ, ದೊಣಿಗಾಮನೆ, ಹೆಗ್ಗಾರು, ಕಾರಿಕನಮನೆ, ಗೋಣಸರ, ಮುಶಿಕೆಗ್ರಾಮ, ಕಕ್ಕೋಡಗ್ರಾಮ, ಅಡಕಳ್ಳಿ, ಕೊಡಲ್ಲಿಗದ್ದೆ, ಶಿಂಗನಮನೆ, ಮುಂಡಿಗೆ ಸರುಹು, ನೆರೂರು, ಕರುಮನೆ, ಬಾಳಗಾರು, ತೋಟಿಕೊಪ್ಪ, ಕವಡಿಕೆರೆ, ಬೆಳಖಂಡ, ಗರಾಸಾ, ಸಬಗೆರೆ, ಹಲ್ಲಸಖಂಡ, ಜಡ್ಡಿಗದ್ದೆ, ಘಾಂಡೆಮನೆ, ಕುಂಗಗದ್ದೆ, ಕಡವಿನಕೆರಿ, ಅರಗಡಿ, ಬೊಮ್ಮನಕಟ್ಟಾ, ಅಣಲಗಾರು, ಲಿಂಗದಬೈಲು, ಗೋಪನಮನೆ, ಗದ್ದೆನಕುಳಿ, ಗದ್ದೆಮಠ, ಕೊನಸಗುಳಿ, ಶಿಂಗದಮನೆ, ಬಿಗಾರು, ಅರಗೋಡು, ನಾಗರಕುರಾ, ಹಿತ್ತಲಕೊಪ್ಪ, ಜಂಬೆಕೊಪ್ಪ, ಕೋಟೆಮನೆ, ಮಣ್ಣಕುಳಿ, ಶೀಗೆಮನೆ, ಉಮ್ಮಚಿಗೆ, ವೊತ್ತಿಸರುಹು, ಹಲ್ಲಸಿನಕಟ್ಟಾ, ಹುಣಸೆಮನೆ, ವನಿಕೆಮನೆ, ಸಂಪೆಸರುಹು, ಹಿರೆಸರುಹು, ಹಾಸಣಿಗೆ ಮಠ, ಆಗರೊಳಿ, ಹಿಂಡಸಿ, ಕುಂಬರಾಳು, ದಡಸಕ, ಚರಿಕೆ, ಚಿಲ್ಲುಗದ್ದೆ, ಚಿಕರೂಮನ ಮನೆ, ಮುಂತಕುಳಿಯೊಳಗೆ ಉತಾರವಾದ ದವಸದಗದ್ದೆ ಮತ್ತು ತನ್ನ ಸೀಮೆಯಲ್ಲಿಯ ಕಾಲು ಮಠಗಳನ್ನು, ಪೂರ್ವಮರ್ಯಾದೆಯಲ್ಲಿ ನಡೆದು ಬರುವಂಥ

---

೧೩. ಸ್ವ. ದಾ. ೧೪. ಕ್ರಿ ಶ. ೧೫೯೭ರ ವರೆಗೂ ಹಿರೆ ಶ್ರೀ ಚಂದ್ರಶೇಖರ ಸರಸ್ವತಿಗಳು ಸ್ವರ್ಣವಲ್ಲೀ ಪೀಠದಲ್ಲಿದ್ದರು. ಆದರೆ ಕ್ರಿ ಶ. ೧೫೯೨ ಮತ್ತು ೧೫೯೫ ರಲ್ಲಿ ಹಿರೆ ಚಂದ್ರಶೇಖರ ಸರಸ್ವತಿಗಳ ಶಿಷ್ಯರಾದ ಸರ್ವಜ್ಞೇಂದ್ರ ಸರಸ್ವತಿಗಳಿಗೆ ಧರ್ಮಸಾಧನಗಳನ್ನು ನೀಡಲಾಗಿರುವುದರಿಂದ ಹಿರೆ ಚಂದ್ರಶೇಖರ ಸರಸ್ವತಿಗಳು ಕ್ರಿ ಶ. ೧೫೯೨ ರ ಅವಧಿಯಲ್ಲಿ, ಅಥವಾ ಅದಕ್ಕೂ ಸ್ವಲ್ಪ ಪೂರ್ವದಲ್ಲಿ ಸರ್ವಜ್ಞೇಂದ್ರರನ್ನು ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡು ಮಠದ ಕಾರ್ಯಭಾರವನ್ನು ಅವರಿಗೆ ಒಪ್ಪಿಸಿರಲು ಸಾಕು.

೧೪. ಸ್ವ. ದಾ. ೧೬.

ಆಚಾರ ವ್ಯವಹಾರ, ಪ್ರಾಯಶ್ಚಿತ್ತ, ಪೌರೋಹಿತ್ತಿಕೆ, ಪುರಾಣ, ತೇಜಪೂಜೆ, ಸರತೆ, ಸಾಮ್ಯ ಮುಂತಾದವುಗಳನ್ನೆಲ್ಲ ಅನುಭವಿಸಿಕೊಂಡು ಇರುವಂತೆ ಇಮ್ಮಡಿ ಅರಸಪ್ಪನಾಯಕನು ಹಿರೆ ಚಂದ್ರಶೇಖರ ಸರಸ್ವತೀ ಶ್ರೀಪಾದಂಗಳ ದಿವ್ಯಪಾದಪದ್ಮಂಗಳಿಗೆ ಧರ್ಮಸಾಧನವನ್ನು ಅರ್ಪಿಸಿದನೆಂದು ತಿಳಿದುಬರುತ್ತದೆ.[೧೫] ಶ್ವೇತಛತ್ರ, ಉಭಯಚಾಮರ, ತಾಳ, ಶಂಖ, ದಿವ್ಯಜ್ಯೋತಿ, ಸಿಂಹಮುಖ, ಶಿಬಿಕ (ಮೇನೆ) ಮುಂತಾದ ಸಕಲ ಬಿರುದುಗಳನ್ನೂ ಶ್ರೀಗಳವರು ಶಿಷ್ಯ ಪಾರಂಪರ್ಯವಾಗಿ ಅನುಭವಿಸಿಕೊಂಡು ಬರುವಂತೆ ಅರಸಪ್ಪನು ಧರ್ಮಶಾಸನ ನೀಡಿದನು ಶಾ.ಶು ೧೫೭೯ (ಕ್ರಿ. ಶ. ೧೬೫೭) ರ ಈ ಧರ್ಮಶಾಸನವು ಇಮ್ಮಡಿ ಅರಸಪ್ಪನಾಯಕನ ಕಾಲಕ್ಕೆ ಸೇರಿದ, ಸ್ವರ್ಣವಲ್ಲೀ ಮಠದ ಪತ್ರಾಗಾರದಲ್ಲಿ ದೊರೆತ ಕೊನೆಯ ದಾಖಲೆಯಾಗಿದೆ. ಅದರಂತೆ, ಹಿರೆ ಶ್ರೀ ಚಂದ್ರಶೇಖರ ಸರಸ್ವತಿಗಳ ಹೆಸರನ್ನು ಉಲ್ಲೇಖಿಸುವ ಕೊನೆಯ ಧರ್ಮಶಾಸನವೂ ಇದೇ ಆಗಿದೆ.

ಇಮ್ಮಡಿ ಅರಸಪ್ಪನಾಯಕರಿಗೆ ಸ್ವರ್ಣವಲ್ಲೀ ಮಠದ ಗುರುಗಳ ಬಗ್ಗೆ ಎಷ್ಟೊಂದು ಗೌರವವಿತ್ತೆಂಬುದು ಮೇಲ್ಕಾಣಿಸಿದ ಧರ್ಮಶಾಸನಗಳಿಂದ ಸ್ಪಷ್ಟವಾಗುತ್ತದೆ. ಮಠಕ್ಕೆ ಪೂರ್ವದಲ್ಲಿ ಬಿಟ್ಟ ಧರ್ಮಸಾಧನಗಳನ್ನೂ ಅರಸಪ್ಪನು ಗೌರವಿಸಿದನು. ಅರಸಪ್ಪನ ಉತ್ತರಾಧಿಕಾರಿಗಳೂ, ಮಠಕ್ಕೆ ದತ್ತಿ ಬಿಡುವ ಸತ್ ಸಂಪ್ರದಾಯವನ್ನು ಮುಂದುವರಿಸಿಕೊಂಡು ಬಂದುದು ಗಮನಾರ್ಹವಾಗಿದೆ.[೧೬]

---

೧೫. ಧರ್ಮಸಾಧನದಲ್ಲಿ ನಮೂದಿತವಾದ ಗ್ರಾಮಗಳ ಹೆಸರುಗಳನ್ನು ಇದ್ದಂತೆಯೇ ಬರೆಯಲಾಗಿದ್ದು, ಕಾಲ ಸರಿದಂತೆ ಹೆಸರುಗಳನ್ನು ಉಚ್ಚರಿಸುವಲ್ಲಿ ಸಾಕಷ್ಟು ಬದಲಾವಣೆಗಳಾಗಿದ್ದನ್ನು ನಾವು ಗಮನಿಸಬಹುದು ಧರ್ಮಸಾಧನದ ಲಿಪಿಕಾರರು ವಿದ್ವಾಂಸರಾಗಿರದೆ ಸಾಮಾನ್ಯರಾಗಿದ್ದರಿಂದ, ಲಿಪಿ ಮತ್ತು ಭಾಷಾ ದೋಷಗಳನ್ನು (ಕರ್ನಾಟಕದಲ್ಲಿಯ ಇನ್ನಿತರ ಶಾಸನಗಳಲ್ಲಿ ಕಂಡುಬರುವ ದೋಷಗಳಂತೆ) ಇಲ್ಲಿಯೂ ಕಾಣಬಹುದು.

೧೬. ಇಮ್ಮಡಿ ಅರಸಪ್ಪನು ವೈಷ್ಣವ ಸಿದ್ಧಾಂತವನ್ನು ಪೋಷಿಸಿದನೆಂಬುದಕ್ಕೆ ಸೋದೆಯ ತ್ರಿವಿಕ್ರಮ ದೇವಾಲಯದ ಕ್ರಿ. ಶ. ೧೬೫೩ ರ ಶಾಸನವೇ ಸಾಕ್ಷಿ. ಸೋದೆಯರಸರು ಜೈನ, ಅದ್ವೈತ(ಹವ್ಯಕ), ದ್ವೈತ, ವಿಶಿಷ್ಟಾದ್ವೈತ ಮತ್ತು ವೀರಶೈವ ಮತಧರ್ಮಗಳನ್ನು ಪೋಷಿಸಿ, ಧರ್ಮಸಮನ್ವಯತೆಯನ್ನು ಕಾಪಾಡಿಕೊಂಡು ಬಂದರೆಂಬುದನ್ನು ಅಂದಿನ ಶಾಸನಗಳ ಅಧ್ಯಯನದಿಂದ ಅರಿಯಬಹುದು. (ಹೆಚ್ಚಿನ ಮಾಹಿತಿಗಾಗಿ ಪೂರ್ವೋಕ್ತ 'ಸ್ವಾದಿ ಅರಸುಮನೆತನ' ಓದಿರಿ.

# ಬಿಳಗಿಗೆ ಸಂಬಂಧಿಸಿದ ಚಾರಿತ್ರಿಕ ದಾಖಲೆಗಳು

ಉತ್ತರಕನ್ನಡ ಜಿಲ್ಲೆಯ ಘಟ್ಟದ ಮೇಲಿನ ಸಿದ್ದಾಪುರ ತಾಲೂಕಿನಲ್ಲಿಯ ಬಿಳಗಿ ಇದು ಒಂದು ಚಿಕ್ಕ ಗ್ರಾಮ. ಗ್ರಾಮ ಚಿಕ್ಕದಾದರೂ ಬಿಳಗಿಯ ಇತಿಹಾಸ, ಪ್ರಾಚೀನತೆ ಹಿರಿದು. ಬನವಾಸಿ, ಸ್ವಾದಿ, ಚಂದಾವರ, ಗೇರುಸೊಪ್ಪೆ, ಹಾಡುವಳ್ಳಿ, ಬಸವರಾಜದುರ್ಗ, ಅಂಕೋಲೆ, ಭಟಕಳ, ಹೊನ್ನಾವರ, ಗೋಕರ್ಣ, ಧಾರೇಶ್ವರ, ಗುಣವಂತೆ, ಮುರ್ಡೇಶ್ವರ, ಸದಾಶಿವಗಡ, ಕದ್ರಾ, ಕುಮಟಾ, ವಿರ್ಜಾನ, ಸಾಂಬ್ರಾಣಿ, ಬೆಡಸಗಾಂವ್, ಯಾಣ, ಇಸಳೂರು, ಮುಂತಾದ ಉತ್ತರಕನ್ನಡ ಜಿಲ್ಲೆಯ ಮಹತ್ವದ ಐತಿಹಾಸಿಕ ಸ್ಥಳಗಳ ಯಾದಿಯಲ್ಲಿ, 'ಬಿಳಗಿ' ಯನ್ನೂ ಧಾರಾಳವಾಗಿ ಸೇರಿಸಬಹುದು. ಬಿಳಗಿ ಐತಿಹಾಸಿಕವಾಗಿ ಹೆಚ್ಚು ಪ್ರಸಿದ್ಧಿಗೆ ಬಂದಿದ್ದು ಕ್ರಿ. ಶ. ಸು. ೧೪೯೦ ರಿಂದ ಕ್ರಿ. ಶ. ಸು. ೧೭೩೦ ರ ವರೆಗಿನ ಕಾಲದಲ್ಲಿ, ಅಂದರೆ ಬಿಳಗಿ ಅರಸರ ಕಾಲದಲ್ಲಿ.[೧] ಬಿಳಗಿ ಅರಸುಗಳು ಮೂಲತಃ ವಿಜಯನಗರ ಸಾಮ್ರಾಟರ ಸಾಮಂತರಾಗಿದ್ದು, ವಿಜಯನಗರದ ಪತನಾ ನಂತರ, ಬಲಿಷ್ಠರಾದ ಕೆಳದಿ ನಾಯಕರಿಗೆ ಮಾಂಡಲಿಕರಾದರು. ನೆರೆಯವರಾದ ಸೋದೆ ಮತ್ತು ಗೇರುಸೊಪ್ಪೆ ಅರಸರೊಂದಿಗೆ ಬಿಳಗಿ ಅರಸುಗಳು ಸೆಣಸಾಡಿದ್ದೂ ಉಂಟು. ಬಿಳಗಿ ಅರಸರ ಪ್ರಥಮ ರಾಜಧಾನಿ ಐಸೂರು[೨]. 'ಐಶ್ವರ್ಯಪುರ', 'ಹೊಸೂರು, ಎಂಬ ಹೆಸರುಗಳಿಂದಲೂ ಐಸೂರು ಗುರುತಿಸಲ್ಪಡುತ್ತದೆ. ಬಿಳಗಿ ಅಥವಾ ಬಿಳಿಗೆಯನ್ನು ಶಾಸನಗಳಲ್ಲಿ 'ಶ್ವೇತಪುರ' ಎಂದು ಉಲ್ಲೇಖಿಸಲಾಗಿದೆ.

ರತ್ನತ್ರಯ ಬಸದಿ, ವಿರೂಪಾಕ್ಷ ದೇವಾಲಯ, ವಾದಿರಾಜ ಮಠ, ಅಷ್ಟ ಮಠಗಳು, ಸೀತಾರಾಮಚಂದ್ರ, ಹನುಮಂತ, ಲಕ್ಷ್ಮೀನಾರಾಯಣ, ವೀರಭದ್ರ, ಜಟಕೇಶ್ವರ, ರಾಮಲಿಂಗ, ಮುಂತಾದ ದೇವಸ್ಥಾನಗಳು ಮತ್ತು ಅಳಿದುಳಿದ

---

೧. 'ಬಿಳಗಿಯ ಒಡೆಯರು' ಎಂಬ ಗ್ರಂಥದಲ್ಲಿ ಡಾ. ಸೂರ್ಯನಾಥ ಕಾಮತರು ಬಿಳಗಿ ರಾಜರ ವಂಶವೃಕ್ಷವನ್ನು ಶಾಸನಗಳ ಆಧಾರದಿಂದ ನೀಡಿದ್ದಾರೆ. ಈ ವಂಶವೃಕ್ಷವನ್ನು ಬಿಳಗಿಯ ಶ್ರೀ ಸೀತಾರಾಮಚಂದ್ರ ಪ್ರೌಢ ಶಾಲೆಯ ರಜತ ಮಹೋತ್ಸವ ಸ್ಮರಣ ಸಂಚಿಕೆ 'ಶ್ವೇತಪುರ' (೧೯೯೩)ದಲ್ಲಿ. ಸಂಚಿಕೆಯ ಪ್ರಧಾನ ಸಂಪಾದಕರಾದ ಶ್ರೀ ಪದ್ಮಾಕರ ಮಡಗಾಂವಕರರು ನಮೂದಿಸಿದ್ದಾರೆ. ವಂಶವೃಕ್ಷದ ಪುನರ್ಪರಿಶೀಲನೆ ಅಗತ್ಯವೆಂದು ತೋರುತ್ತದೆ.

೨. ಬೀಳಗಿಯಿಂದ ಸುಮಾರು ನಾಲ್ಕು ಮೈಲುಗಳ ಅಂತರದಲ್ಲಿ ಐಸೂರು ಇದೆ.

ಅವಶೇಷಗಳು ಬಿಳಗಿಯ ಐತಿಹಾಸಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ಬೆಳಕಿಗೆ ತರುತ್ತವೆ. ಚಂಪು ಶೈಲಿಯಲ್ಲಿರುವ ಹಸ್ತಪ್ರತಿ ರೂಪದಲ್ಲಿರುವ 'ಬಿಳಗಿಲ ಅರಸರ ಚರಿತ್ರೆ' ಮತ್ತು ಸುಮಾರು ೨೮ ಶಾಸನಗಳು ಬಿಳಗಿ ರಾಜಮನೆತನದ ಚರಿತ್ರೆಯನ್ನು ಅರಿಯಲು ಸಹಾಯಕಾರಿಯಾಗಿವೆ.[೩] ಎಪಿಗ್ರಾಫಿಯಾ ಕರ್ನಾಟಿಕಾ, VIII. ೪೬, ಕೆ. ಆರ್. ಐ. ಆನ್ಯುಅಲ್ ರಿಪೋರ್ಟ್, ೮೭–೮೮, ೧೯೩೯-೪೦, ಕರ್ನಾಟಕ ಇನ್ಸ್ಕ್ರಿಪ್ಷನ್ಸ್, ಸಂ. ೫. ೭೩, ಎಂ.ಎ ಆರ್. ೧೯೨೩, ದಾಖಲೆಗಳು : ೧೦೧, ೧೦೨, ೧೦೪, ಎಂ. ಎ. ಆರ್. ೧೯೨೯ ಪು ೧೭೩, ಎಂ. ಎ. ಆರ್. ೧೯೪೩, ಪು. ೧೨೨ ರಲ್ಲಿ ಬಿಳಗಿ ಅರಸರ ಚರಿತ್ರೆಗೆ ಸಂಬಂಧಿಸಿದ ಶಾಸನಗಳು ಪ್ರಕಟವಾಗಿವೆ. ಪ್ರಸ್ತುತ ಲೇಖನವು ಬಿಳಗಿಗೆ ಸಂಬಂಧಿಸಿದ ಚಾರಿತ್ರಿಕ ದಾಖಲೆಗಳಿಗೆ ಸೀಮಿತವಾಗಿದ್ದರಿಂದ, ಅಂಥ ದಾಖಲೆಗಳಲ್ಲಿಯ ಮಹತ್ವದ ಅಂಶಗಳನ್ನು ಮಾತ್ರ ಇಲ್ಲಿ ಉಲ್ಲೇಖಿಸಲಾಗಿದೆ. ಶೃಂಗೇರಿ ಮಠದ ಕಡತಗಳಲ್ಲಿ[೪] ಮತ್ತು ಉತ್ತರಕನ್ನಡ ಜಿಲ್ಲೆಯಲ್ಲಿಯ ಶಿರಸಿ ತಾಲೂಕಿನ ಸ್ವರ್ಣವಲ್ಲೀ ಮಠದ ಐತಿಹಾಸಿಕ ಹಸ್ತಪ್ರತಿಗಳಲ್ಲಿ ಬಿಳಗಿಯನ್ನು ಉಲ್ಲೇಖಿಸುವ ಕೆಲವು ದಾಖಲೆಗಳು ಲಭ್ಯವಾಗಿವೆ.

ವೈಶ್ಯ ಕೊಂಕಣಿಗರಿಗೆ ಆಶ್ರಮಧರ್ಮ ಅಧಿಕಾರ ಉಂಟೋ, ಇಲ್ಲವೋ ಎಂಬುದಕ್ಕೆ ಸಂಬಂಧಿಸಿ, ಶಾ. ಶ. ೧೫೫೧ (ಕ್ರಿ. ಶ. ೧೬೨೯) ರಲ್ಲಿ, ಸೋದೆ, ಬಿಳಗಿ, ಇಕ್ಕೇರಿ ಮತ್ತು ಗೇರುಸೊಪ್ಪೆ, ಈ ನಾಲ್ಕು ಸಂಸ್ಥಾನದ ಅರಸುಗಳ ರಾಜ್ಯಗಳಲ್ಲಿ ವಾಸವಾಗಿದ್ದ ಕುಶಸ್ಥಳಿ ಕೊಂಕಣ ವರ್ಗದವರಾದ ಗೋವೆಯ ರಾಮಶೆಣೈ, ಕೃಷ್ಣಪ್ರಭು, ಪರ್ತಗಾಳಿ ಗೋವಿಂದಪ್ರಭು, ರಾಮಸೆಣೈ, ಶಿವೇಶ್ವರದ ವಾಸುದೇವ, ಸೋಮಯ್ಯ, ಕಡವಾಡದ ನರಸ ಭಂಡಾರಿ, ಅಂಕೋಲೆ ಗೋಕರ್ಣದ ವೆಂಕಕಮತ್ತಿ, ಹರಿ ಹೆಗಡೆ, ಸೋದೆಯ ತಿಮ್ಮಣ್ಣ ಮಲ್ಯಾ, ವೆಂಕಟನಾಯಕ, ಬಿಳಿಗೆಯ ರಾಮ ಸೊಯಿ, ವಾಸುದೇವ ಕಮತ್ತಿ, ಕೆಳದಿ-ಇಕ್ಕೇರಿಯ ಬಾಬ ಶೆಣೈ, ಗೇರಸೊಪ್ಪೆಯ ಹರಿನಾಯಕ, ಗೋವಿಂದ ಪ್ರಭು ಮುಂತಾದವರು ಶ್ರೀ ಗೋಕರ್ಣ

---

೩. ಸೂರ್ಯನಾಥ ಕಾಮತ, ಸಂಪಾದಕರು : ಉತ್ತರಕನ್ನಡ ಡಿಸ್ಟ್ರಿಕ್ಟ್ ಗೆಝೆಟಿಯರ್, ೧೯೮೫, ಪು. ೧೩೬.
'ಬಿಳಗಿಲ ಅರಸರ ಚರಿತ್ರೆ'ಯ ಹಸ್ತಪ್ರತಿಯ ಝೆರಾಕ್ಸ್ ಪ್ರತಿಯನ್ನು ಪ್ರಸ್ತುತ ವಿಚಾರಸಂಕಿರಣದಲ್ಲಿ ಸಾದರಪಡಿಸಲಾಗಿದೆ.

೪. 'ಕಡತ' ಇಲ್ಲವೆ 'ಕಡಿತ'ವು ಪುಸ್ತಕ ರೂಪದಲ್ಲಿ ಮಡಿಚಿದ ಉದ್ದನೆಯ ದಪ್ಪ ಕಪ್ಪುಬಟ್ಟೆಯಾಗಿದ್ದು, ಇದರ ಮೇಲೆ ಸೀಸದಂಥ ಬಳಪದ ಕಲ್ಲಿನಿಂದ ಬರೆಯಲಾಗುತ್ತಿತ್ತು. ಹೆಚ್ಚಿನ ಮಾಹಿತಿಗಾಗಿ ಲೇಖಕರ 'ಶೃಂಗೇರಿ ಧರ್ಮಸಂಸ್ಥಾನ', ಪ್ರ. ಶೃಂಗೇರಿ ಮಠ, ೧೯೮೩, ಪು. ೧೮ ನೋಡಿರಿ. ಶೃಂಗೇರಿ ಮಠದ ೨೦೫ ಕಡತಗಳಲ್ಲಿ ಸುಮಾರು ೧೫,೦೦೦ ದಾಖಲೆಗಳ ಪ್ರತಿಗಳಿವೆ.

ಕ್ಷೇತ್ರದ ಶ್ರೀ ಮಹಾಬಲೇಶ್ವರ ದೇವರ ಸನ್ನಿಧಿಯಲ್ಲಿ, ಶೃಂಗೇರಿ ನರಸಿಂಹಭಾರತೀ, ಸ್ವರ್ನವಲ್ಲೀಮಠದ ರಾಮಚಂದ್ರ ಸರಸ್ವತೀ, ರಾಮಚಂದ್ರಾಪುರ ಮಠದ ರಘುನಾಥ ಶ್ರೀಪಾದಂಗಳು ಮತ್ತು ಸೋದೆ, ಪಲಿಮಾರ, ಅದಮಾರ, ನಿರಂಬಳ್ಳಿ, ಪೇಜಾವರ, ಪುತ್ತಿಗೆ, ಕಾಣೂರು, ಉಪ್ಪೂರು, ಬಂಡಾರ, ತೀರ್ಥಹಳ್ಳಿ. ಮುಳಬಾಗಿಲ, ಸುಮತೇಂದ್ರ, ಸತ್ಯಪೂರ್ಣ, ಸ್ಕಂದಲಾಚಾರ್ಯ, ನಲ್ಲಾಚಾರ್ಯ, ಭಟ್ಟಾಚಾರ್ಯ ತಿರುಮಲಾಚಾರ್ಯ, ವೀರ ಮಹೇಶ್ವರ ಗುರು ಮಹೇಶ್ವರ ಗುಂಡೇಶ್ವರ ವಿರಕ್ತ ಮಹತ್ತಿನ ಜಂಗಮ ಮಠ, ಮುಂತಾದ ಮಠಗಳಲ್ಲಿ ವಿಶೇಷ ಮಠಮಾನ್ಯಸ್ಥರಾಗಿರುವಂಥ, ಬ್ರಹ್ಮಚಾರಿ, ವಾನಪ್ರಸ್ಥ ಮತ್ತು ಸನ್ಯಾಸಾಶ್ರಮಸ್ಥರಾಗಿರತಕ್ಕ ಸ್ವಾಮಿಗಳಿಗೆ ಬಿನ್ನವತ್ತಳೆಯನ್ನು ಸಮರ್ಪಿಸಿದರು.[೫] ಕುಶಸ್ಥಳಿ ವೈಶ್ಯಕೊಂಕಣಿಗರ ಆಶ್ರಮ ಧರ್ಮಕ್ಕೆ ಸಂಬಧಿಸಿ ಅಂತಿಮ ನಿರ್ಣಯ ನೀಡಲು ಸೋದೆಯ ವೀರಮ್ಮನವರು ಬೆಳಗೆಯ ವೀರಪ್ಪ ಒಡೆಯರು,[೬] ಕೆಳದಿಯ ವೀರಭದ್ರ ನಾಯಕರು ಮತ್ತು ಗೇರುಸೊಪ್ಪೆಯ ಕಾಸಾರು ಕೃಷ್ಣರಾಯ ದೇವರಸ ಒಡೆಯರು ಶೃಂಗೇರಿ ಜಗದ್ಗುರುಗಳನ್ನು ವಿನಂತಿಸಿದರು. ಮಯೂಖ, ಹೇಮಾದ್ರಿ, ಪರಾಶರ, ವಿಜ್ಞಾನೇಶ್ವರ, ನಿರ್ಣಯಸಿಂಧು, ಸಹ್ಯಾದ್ರಿ, ಸ್ಕಂದಪುರಾಣ, ಭೈರವ ಪುರಾಣ, ಮುಂತಾದ ಧರ್ಮಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥಗಳ ಆಧಾರದ ಮೇಲಿಂದ ಕುಶಸ್ಥಳಿ ವೈಶ್ಯ ಕೊಂಕಣಿಗರಿಗೆ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಾಶ್ರಮ, ಆಚಾರ್ಯ ಪಟ್ಟ, ಪೌರೋಹಿತ್ಯ, ವೇದಾಧ್ಯಯನ, ಮಠ-ದೇವಸ್ಥಾನ-ದೇವತಾ ಪೂಜೆ,

---

೫. ಕಡತ (ಕ) ೧೪೧, ದಾಖಲೆ (ದಾ) ೧೨.
ಶಾ ಶ ೧೫೫೧ರಲ್ಲಿ ಶೃಂಗೇರಿ ಪೀಠದ ಜಗದ್ಗುರುಗಳಾಗಿದ್ದವರು ಪ್ರಥಮ ಶ್ರೀ ಸಚ್ಚಿದಾನಂದ ಭಾರತಿಗಳು. ಆದರೆ ಪ್ರಸ್ತುತ ದಾಖಲೆಯಲ್ಲಿ ಶ್ರೀ ನರಸಿಂಹ ಭಾರತೀ ಎಂದು ನಮೂದಿಸಲಾಗಿದೆ ಪ್ರಥಮ ಸಚ್ಚಿದಾನಂದ ಭಾರತಿಗಳ ನಂತರ ಪಟ್ಟಕ್ಕೆ ಬಂದವರು ಆರನೇ ನರಸಿಂಹಭಾರತೀ. ಏನಿದ್ದರೂ, ದಾಖಲೆಯಲ್ಲಿಯ ಐತಿಹಾಸಿಕ ಅಂಶಗಳನ್ನು ಅಲ್ಲಗಳೆಯುವಂತಿಲ್ಲ.

೬. ಶಾ. ಶ. ೧೫೫೧ (ಕ್ರಿ. ಶ. ೧೬೨೯) ರಲ್ಲಿ ಬೀಳಗಿಯ ಅರಸರಾಗಿದ್ದವರು ಬಹುಶಃ ಮುಮ್ಮಡಿ ಘಂಟೆರಾಜ. ವೀರಪ್ಪೊಡೆಯರು ಕ್ರಿ. ಶ. ೧೫೭೦ ರ ಮೊದಲು. ಅಂದರೆ, ಕ್ರಿ. ಶ. ೧೫೭೦ ರಲ್ಲಿ ರಂಗರಾಜರು (ಮುಮ್ಮಡಿ ನರಸಿಂಹ) ಪಟ್ಟಕ್ಕೆ ಬರುವ ಪೂರ್ವದಲ್ಲಿ, ಬಿಳಗಿಯ ಅರಸರಾಗಿದ್ದರು. ದಾಖಲೆಯಲ್ಲಿ ನಮೂದಿಸಿದಂತೆ, ಕ್ರಿ. ಶ. ೧೬೨೯ ರಲ್ಲಿ ವೀರಭದ್ರನಾಯಕರು ಆಗಷ್ಟೇ ಕೆಳದಿ ಸಿಂಹಾಸನವೇರಿದ್ದರು. ಒಟ್ಟಿನಲ್ಲಿ ಕಾಲ ವ್ಯತ್ಯಾಸ ಕಂಡು ಬಂದರೂ, ದಾಖಲೆಯಲ್ಲಿಯ ಐತಿಹಾಸಿಕ ಸಂಗತಿಗಳನ್ನು ತಳ್ಳಿಹಾಕುವಂತಿಲ್ಲ. ಆದರಲ್ಲಿಯೂ ಈ ದಾಖಲೆ, ಅಂದಿನ ಧಾರ್ಮಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳ ಮೇಲೆ ಬೆಳಕು ಚೆಲ್ಲುತ್ತದೆ. ಶಿರಸಿ ತಾಲೂಕಿನ ಸ್ವರ್ನವಲ್ಲಿ ಮಠದಲ್ಲಿಯೂ, ವೈಶ್ಯ ಕೊಂಕಣಿಗರ ಆಶ್ರಮ ಧರ್ಮಕ್ಕೆ ಸಂಬಂಧಿಸಿದ ಇದೇ ದಾಖಲೆ ದೊರಕಿದೆ. ಆದರೆ ಕಾಲದಲ್ಲಿ ವ್ಯತ್ಯಾಸ. ಈ ದಾಖಲೆ ಶಾ.ಶ. ೧೬೧೦ (ಕ್ರಿ.ಶ. ೧೬೮೮) ಕ್ಕೆ ಸೇರಿದ್ದು.

ಬೀದಿ ಮೆರವಣಿಗೆ, ತಳಿಗೆ, ತೋರಣ, ಕಲಶ, ಕನ್ನಡಿ ಇತ್ಯಾದಿ ಸಲ್ಲವೆಂದು ಶೃಂಗೇರಿ ಜಗದ್ಗುರುಗಳು ಅಂತಿಮ ನಿರ್ಣಯ ನೀಡಿದರೆಂದು ತಿಳಿದು ಬರುತ್ತದೆ. ಮೇಲ್ಕಾಣಿಸಿದ ನಿರ್ಣಯವನ್ನು ತಾವು ಒಪ್ಪಿರುವುದಾಗಿ, ಕುಶಸ್ಥರೆ ವೈಶ್ಯ ಕೊಂಕಣಿಗರು ಸಕಲ ಮಠಗಳ ಸ್ವಾಮಿಗಳಿಗೆ ಬಿನ್ನವತ್ತಳೆಗಳನ್ನು ಸಮರ್ಪಿಸಿದಂತೆ ಕಂಡು ಬರುತ್ತದೆ.೭ ಸದರಿ ವಿಷಯಕ್ಕೆ ಸಂಬಂಧಿಸಿ ಕಡತಗಳಲ್ಲಿ ಇನ್ನೂ ಹಲವೆಡೆ ಉಲ್ಲೇಖಗಳಿವೆ.೮ ಕೊಂಕಣಿಗರ ಮನೆಯ ಪುರೋಹಿತಿಕೆಯನ್ನು ಬ್ರಾಹ್ಮಣರೇ ಸಾಗಿಸಬೇಕೆಂದು ಕೆಳದಿಯ ಹಿರಿಯ ವೆಂಕಟಪ್ಪ ನಾಯಕರು (ಕಿ. ಶ ೧೫೮೨-೧೬೨೯) ಹೊಂಬಣ್ಣ ಸೆಟ್ಟಿಯೆಂಬ ಅಧಿಕಾರಿಗೆ ನಿರೂಪ ಹೊರಡಿಸಿದರು. ಕೊಂಕಣಿಗ ಭಟ್ಟಕ್ಕಳಿಗೆ ವೇದಾಧ್ಯಯನ, ಆಚಾರ್ಯಪಟ್ಟ, ಪುರೋಹಿತಿಕೆ ಮತ್ತು ಸನ್ಯಾಸ ಸಲ್ಲದೆಂದೂ ನಿರೂಪದಲ್ಲಿ ಕಾಣಿಸಲಾಗಿದೆ.೯ ಮುಂದೆ ಕೆಳದಿಯ ಶಿವಪ್ಪ ನಾಯಕರ ಕಾಲದಲ್ಲಿಯೂ (ಕಿ. ಶ. ೧೬೪೫-೧೬೬೦) ಇದೇ ಆಜ್ಞೆಯನ್ನು ಮುಂದುವರಿಸಿಕೊಂಡು ಬಂದಿದ್ದು ಮತ್ತೊಂದು ದಾಖಲೆಯಿಂದ ವಿದಿತವಾಗುತ್ತದೆ.೧೦ ದಾಖಲೆಯ ಪಾಠ ಇಂತಿದೆ :

"...ಪಾರ್ಥಿವ ಸಂ। ಚಯಿತ್ರ ಬ ೧೨ ಲೂ। ಶ್ರೀಮತ್ಕೆಳದಿ। ಶಿವಪ್ಪ ನಾಯಕರೂ। ಘಟ್ಟಕೆಳಗಣ। ಘಟ್ಟದ ಮೆಲಣ। ಬ್ರಾಂಹ್ಮರುಗಳಿಗೆ। ಬರಸಿ ಕಳುಹಿದ ಕಾರ್ಯ। ಕೊಂಕಣ ವರ್ಗದ। ಪುರೋಹಿತಿಕೆಯ। ಹಿರೆಕರ್ತರು। ಕಟ್ಟು ಮಾಡಿಸ್ತ। ಪ್ರಮಾಣ। ದಿ ಹಿತವಾದ। ಕರ್ಮಗಳ। ನಡಸುವ ಹಾಗೆ। ಕಟ್ಟು ಮಾಡಿಸಿ ಕಳುಹಿಯಿಧೆವೆ। ಅದೆ ರಿತ್ತಿಯಲ್ಲಿ। ನಡಸುವದಾಗಿ ಯಂದು। ನಿರೂಪ ೧" ವಿಜಯನಗರ ಪತನಾ ನಂತರ ಬಿಳಗಿಯ ಅರಸರು ಕೆಳದಿ ಅರಸರಿಗೆ ಮಾಂಡಲಿಕರಾಗಿದ್ದರಿಂದ ಬಿಳಗಿ ಸಂಸ್ಥಾನದಲ್ಲಿಯೂ ಮೇಲಿನ ಆಜ್ಞೆ ಜಾರಿಯಲ್ಲಿರಲು ಸಾಕು. ಬಿಳಗಿ ಅರಸರಾದ ನಾಲ್ವಡಿ ಘಂಟೆರಾಜ (ಕ್ರಿ. ಶ. ೧೬೪೩-೧೬೫೧) ಮತ್ತು ಪ್ರಥಮ ಶಿವಪ್ಪ (ಕ್ರಿ ಶ, ೧೬೫೫-೧೬೬೭), ಕೆಳದಿ ಶಿವಪ್ಪ ನಾಯಕನ ಸಮಕಾಲೀನರು.

ಶಾ. ಶ. ೧೫೫೫ (ಕ್ರಿ. ಶ. ೧೬೩೩) ರಲ್ಲಿ ಬಾರಕೂರು, ಮಂಗಳೂರು, ಬಗ್ಗವಾಡಿ, ಗೇರಸೊಪ್ಪೆ, ಚಂದಾವರ, ಮಿಡಜೆ (ಮಿರ್ಜಾನ), ಸೋದೆ, ಬಿಳಿಗೆ ಮತ್ತು ಕೆಳದಿ ಸಂಸ್ಥಾನಗಳಲ್ಲಿ ವಾಸವಾಗಿದ್ದ ಕ್ಷತ್ರಿಯ ವಂಶದ ಸಮಸ್ತ ಸೆರ್ವೆಗಾರರು (ಸೇರೆಗಾರರು) ಶೃಂಗೇರಿ ಶ್ರೀ ನರಸಿಂಹ ಭಾರತೀ ಗುರುಕರಮಲಸಂಜಾತರಾದ ಶ್ರೀ ಶಂಕರ ಭಾರತೀ ಸ್ವಾಮಿಗಳಿಗೆ ಬರೆದ ಬಿನ್ನವತ್ತಳೆಯ ಪ್ರತಿಯೊಂದು ಕಡತದಲ್ಲಿ

೭. ಕ. ೧೪೧, ದಾ. ೧೨.
೮. ಕ. ೨೫, ದಾ. ೫೨, ೫೪.
೯. ಕ. ೨೫, ದಾ. ೫೫.
೧೦. ಅದೇ, ದಾ. ೫೬.

ದೊರಕಿದೆ.[೧೧] ಸೇರೆಗಾರರಿಗೆ ಮತ್ತು ಕೊಂಕಣಿಗರಿಗೆ ವಿವಾದ ಬಂದು ಶೃಂಗೇರಿ ಜಗದ್ಗುರು ಪೀಠಕ್ಕೆ ಹೋಗಿ, ಗುರುಗಳ ಪಾದ ದರ್ಶನ ಮಾಡಿ ಎಂದು ಕೆಳದಿಯ ಭದ್ರಪ್ಪ ನಾಯಕರು ನಿರೂಪ ಹೊರಡಿಸಲಾಗಿ, ಅದೇ ಮೇರೆಗೆ ಸೇರೆಗಾರರು ಜಗದ್ಗುರು ಪೀಠಕ್ಕೆ ಹೋಗಿ ಜನಿವಾರ ಧರಿಸಲು ಅಪ್ಪಣೆ ಪಡೆದುಕೊಂಡು, ತೀರ್ಥ ಪ್ರಸಾದ ಮತ್ತು ವಿಭೂತಿ ಪಡೆದು, ಮನೆ ಒಂದಕ್ಕೆ ಪಾದಗಾಣಿಕೆ, ಮಲ್ಲಿಕಾರ್ಜುನ ದೇವರ ಸೇವೆ, ಫಲ ಸಮರ್ಪಣೆ, ಶಾರದಾಮ್ಮನವರ ಪಾದಗಾಣಿಕೆ ಮತ್ತು ಮದುವೆಯ ಅಗ್ರ ತಾಂಬೂಲ ಮುಂತಾದವುಗಳ ಬಗ್ಗೆ ಕಾಲ (ವರ್ಷ) ಒಂದಕ್ಕೆ ಒಟ್ಟೂ ೧½ (ಒಂದೂವರೆ) ಗದ್ಯಾಣಗಳನ್ನು ಸಮರ್ಪಿಸುವದಾಗಿ ಬಿನ್ನವತ್ತಳೆ ಸಮರ್ಪಿಸಿದರು.[೧೨] ಕ್ರಿ. ಶ ೧೬೩೩ ರಲ್ಲಿ ಮುಮ್ಮಡಿ ಘಂಟೆರಾಜರು ಬಹುಶಃ ಬಿಳಗಿಯ ದೊರೆಗಳಾಗಿರಬೇಕು.

ಶೃಂಗೇರಿಯ ಶ್ರೀ ಶಾರದಾಮ್ಮನವರ ಗೋಪುರಕ್ಕೆ ಸ್ವರ್ಣಕಲಶ ಸ್ಥಾಪನೆ ನಿಮಿತ್ತ ಬಿಳಗಿಯ ಅರಸುಗಳಾದ ಬಸವಪ್ಪ ನಾಯಕರು ಶೃಂಗೇರಿ ಮಠದ ಶ್ರೀಮದಭಿನವ ಸಚ್ಚಿದಾನಂದ ಭಾರತಿಗಳಿಗೆ ೨೦೦ ಗದ್ಯಾಣ ಮತ್ತು ಅಭಿವಸ್ತ್ರ ಗಳನ್ನು ಕಳುಹಿದರೆಂದು ಅರಸುಗಳು ಸ್ವಾಮಿಗಳಿಗೆ ಬರೆದ ಬಿನ್ನವತ್ತಳೆಯಿಂದ ಖಚಿತವಾಗುತ್ತದೆ.[೧೩] ಶ್ರೀ ಶಾರದಾಚಂದ್ರಮೌಳೀಶ್ವರ ಸ್ವಾಮಿಯವರ ವಿಭೂತಿ, ಪ್ರಸಾದ ಮತ್ತು ಉಡುಗೊರೆಯನ್ನು ಸ್ವಾಮಿಗಳು ಕಳಿಸಿದ್ದಕ್ಕೆ, ಬಸವಪ್ಪನಾಯಕರು ತಮಗುಂಟಾದ ಹರ್ಷವನ್ನು ವ್ಯಕ್ತಪಡಿಸಿದರು. ಕೆಳದಿಯ ನಾಯಕರಂತೆ ಬಿಳಗಿಯ ಅರಸರೂ ಶೃಂಗೇರಿ ಮಠ ಮತ್ತು ಜಗದ್ಗುರುಗಳನ್ನು ಗೌರವಿಸುತ್ತಿದ್ದರೆಂಬುದು ಸದರಿ ಬಿನ್ನವತ್ತಳೆಯಿಂದ ತಿಳಿದುಬರುತ್ತದೆ.

ಯುವ ಸಂವತ್ಸರ(ಕ್ರಿ.ಶ.ಸು. ೧೭೫೫) ದ ಆಶ್ವಿಜ ಶು. ೧೧ ರಂದು, ಶೃಂಗೇರಿ ಶ್ರೀಮದಭಿನವ ಸಚ್ಚಿದಾನಂದ ಭಾರತಿಗಳು, ಬಿಳಗಿ ಸೋಮಯ್ಯನ ಮಗ

---

೧೧. ಕ. ೧, ದಾ. ೨೮.

೧೨. ಅದೇ
ಕ್ರಿ.ಶ. ೧೬೩೩ ರಲ್ಲಿ ಪ್ರಥಮ ಶ್ರೀ ಸಚ್ಚಿದಾನಂದ ಭಾರತಿಗಳು (ಕ್ರಿ. ಶ. ೧೬೨೨-೬೩) ಶೃಂಗೇರಿ ಜಗದ್ಗುರುಗಳಾಗಿದ್ದರು. ಶಂಕರ ಭಾರತಿಗಳ ಕಾಲ, ಕ್ರಿ.ಶ. ೧೬೪೮-೫೪. ಅದೇ ರೀತಿ, ಕೆಳದಿಯ ಭದ್ರಪ್ಪನಾಯಕರ ಕಾಲ, ಕ್ರಿ ಶ. ೧೬೬೧-೬೩. ಕಾಲದಲ್ಲಿ ವ್ಯತ್ಯಾಸ ಕಂಡರೂ, ದಾಖಲೆಯಲ್ಲಿಯ ಐತಿಹಾಸಿಕ ಸಂಗತಿಗಳನ್ನು ಅಲ್ಲಗಳೆಯುವಂತಿಲ್ಲ.

೧೩. ಕ. ೪೫, ದಾ. ೧೩೫; ಕ. ೧೧೩, ದಾ. ೧೫೩.
ಒಂದೇ ದಾಖಲೆಯನ್ನು ಮೋಲ್ಕಾಣಿಸಿದ ಎರಡು ಕಡತಗಳಲ್ಲಿ ಪ್ರತಿ ಮಾಡಲಾಗಿದೆ. ಪ್ರಥಮ ಶ್ರೀ ಅಭಿನವ ಸಚ್ಚಿದಾನಂದ ಭಾರತಿಗಳ ಪೀಠಾಧಿಪತ್ಯ, ಕ್ರಿ. ಶ. ೭೬೧-೬೭. ಶಾಸನಗಳ ಆಧಾರದಿಂದ ಹೇಳಬೇಕೆಂದರೆ, ಬಿಳಗಿ ಬಸವೇಂದ್ರರ ಕಾಲ. ಕ್ರಿ ಶ. ೧೭೯೨. ಹೀಗಿದ್ದಲ್ಲಿ, ದಾಖಲೆಯಲ್ಲಿ ಉಲ್ಲೇಖಿಸಲಾದ ಬಸವಪ್ಪನಾಯಕರು ಯಾರು ?

ಸುಬ್ಬರಾಯನಿಗೆ ಶೃಂಗೇರಿ ಮಠಕ್ಕೆ ಉತ್ತಾರವಾದ ಹಾಲಾಡಿ ಮಾಗಣೆಯಲ್ಲಿಯ ಕೋಣಿನ ಗ್ರಾಮದ ಉಪ್ಪಿನ ಆರಗದಲ್ಲಿರುವ ಒಂದು ಹೊನ್ನಿನ ಭೂಮಿಯನ್ನು ಪಾಲಿಸಿದರೆಂದು, ಸ್ವಾಮಿಗಳು ಸುಬ್ಬರಾಯನಿಗೆ ಪಾಲಿಸಿದ ನಿರೂಪದಿಂದ ವಿದಿತವಾಗುತ್ತದೆ[೧೪] ಸುಬ್ಬರಾಯನು, ಈ ಭೂಮಿಯನ್ನು, ತನ್ನ ಸಂತಾನ ಪಾರಂಪರ್ಯವಾಗಿ ಅನುಭವಿಸಿಕೊಂಡು ಬರುವಂತೆ ಪಾಲಿಸಲಾಯಿತು.

ಬಿಳಗಿ ಸೀಮೆಯ ಕೊಂಡಲಿ ದೇವಪ್ಪನ ವಿಚಾರ ಕುರಿತು ಕಡತಗಳಲ್ಲಿಯ ಕೆಲವು ದಾಖಲೆಗಳು ಬೆಳಕಿಗೆ ಬಂದಿವೆ.[೧೫] ಅನ್ಯಕುಲದ ಹೆಣ್ಣನ್ನು ವಿವಾಹವಾಗಿ, ನಂತರ ನೆಂಟರಿಷ್ಟರ ವಿರೋಧದಿಂದ ಅವಳನ್ನು ತ್ಯಜಿಸಿ, ದತ್ತು ಮಗನನ್ನು ಸ್ವೀಕರಿಸಿ, ನಂತರ ಶೃಂಗೇರಿ ಜಗದ್ಗುರುಗಳಿಂದ ದತ್ತು ಮಗನು ಸಂಸರ್ಗ ಪ್ರಾಯಶ್ಚಿತ್ತ ಮಾಡಿಕೊಂಡ ವಿವರಗಳನ್ನು ಈ ದಾಖಲೆಗಳಲ್ಲಿ ಉಲ್ಲೇಖಿಸಲಾಗಿದೆ. ಬಿಳಗಿ ಸೀಮೆಯ ಕೊಂಡಲಿ ತಿಮ್ಮರಸಯ್ಯನು, ಮೊದಲು ದುರ್ಗದ ನಿಲಪ್ಪಯ್ಯನ ಮಗಳನ್ನು ಲಗ್ನವಾಗಿ, ಅವಳು ಸತ್ತ ನಂತರ ಗೋಳಕ ಸಂತಾನದ ಪಣೆಯಪ್ಪನ ಮಗಳನ್ನು ಲಗ್ನವಾದ. ನೆಂಟರಿಷ್ಟರ ವಿರೋಧ ಬಂದಾಗ ಅವಳನ್ನು ತ್ಯಜಿಸಿದ. ನಂತರ, ತನ್ನ ತಂಗಿ ಗಂಡ ಶಂಕರಪುರದ ನರಸಯ್ಯನ ಮಗ, ಏಳು ವರ್ಷದ ದೇವಪ್ಪನನ್ನು ದತ್ತು ಮಗನಾಗಿ ಸ್ವೀಕರಿಸಿ. ಅವನಿಗೆ ಉಪನಯನವನ್ನೂ ಮಾಡಿಸಿದ. ತದನಂತರ, ತಿಮ್ಮರಸಯ್ಯ ತನ್ನ ಬಿಟ್ಟ ಹೆಂಡತಿಯೊಂದಿಗೆ ಪುನಃ ಸಂಸಾರ ಪ್ರಾರಂಭಿಸಿದ. ಈ ಮಧ್ಯೆ, ದೇವಪ್ಪನ ವಿವಾಹವೂ ಆಯಿತು. ಕುಟುಂಬದ ಮೇಲಿನ ಅಪವಾದದ ಬಿಸಿ ದೇವಪ್ಪನಿಗೂ ತಾಗಿದ್ದರಿಂದ, ಪೂರ್ವದಲ್ಲಿ ಸಂಸರ್ಗ ನಡೆದ ಬಗ್ಗೆ ಪ್ರಾಯಶ್ಚಿತ್ತ ಮಾಡಿಸಿದರೆ, ಆ ಜನರಲ್ಲಿ ತಾನು ನಡಕೊಳ್ಳದೆ, ನೆಂಟರಲ್ಲಿ ನಡಕೊಳ್ಳುವೆನೆಂದು, ದೇವಪ್ಪನು ಬಿದರೂರಿಗೆ (ಬಿದನೂರು) ಹೋಗಿ, ಅಲ್ಲಿಂದ ಬಿನ್ನವತ್ತಳೆಯನ್ನು ತೆಗೆದುಕೊಂಡು, ಶೃಂಗೇರಿ ಜಗದ್ಗುರು ಪ್ರಥಮ ಶ್ರೀ ಅಭಿನವ ಸಚ್ಚಿದಾನಂದ ಭಾರತಿಗಳಿಗೆ ಸಮರ್ಪಿಸಿದನು.[೧೬] ಸ್ವಾಮಿಗಳು ಧರ್ಮಶಾಸ್ತ್ರವನ್ನು ನೋಡಿಸಿ ಸಂಸರ್ಗದಲ್ಲಿ ನಡಕೊಂಡ ಬಗ್ಗೆ ದೇವಪ್ಪ ಮತ್ತು ಅವನ ಹೆಂಡತಿಗೆ ವಿಧ್ಯುಕ್ತ ಪ್ರಾಯಶ್ಚಿತ್ತವ ಮಾಡಿಸಿ, ತೀರ್ಥ ಪ್ರಸಾದವ ಕೊಡಿಸಿ, ಮುಂದೆ ತಿಮ್ಮಣ್ಣ (ತಿಮ್ಮರಸಯ್ಯ) ಮತ್ತು ಆ ಗೋಳಕ ಸಂತಾನದ ಸಂಬಂಧ ಮಾಡಿದವರ ಸಂಸರ್ಗವ ಮಾಡದೆ, ನೆಂಟರಿಷ್ಟರೊಳಗೆ ಕೂಡಿ ನಡಕೊಳ್ಳುವ ಹಾಗೆ ಕಟ್ಟು ಮಾಡಿಸಿ ಆಶೀರ್ವದಿಸಿದರು. ಶ್ರೀಮದಭಿನವ ಸಚ್ಚಿದಾನಂದ ಭಾರತಿಗಳು ತಮ್ಮ ಈ ನಿರ್ಣಯವನ್ನು

೧೪. ಕ. ೧೨, ದಾ. ೧೦೫.

೧೫. ಕ. ೮೪, ದಾ ೧೧೬, ೧೧೭, ೧೧೮.

೧೬. ಕ. ೮೪, ದಾ. ೧೧೬,

ಜಾರಿಗೆ ತರುವಂತೆ, ತಮ್ಮ ಅತ್ಯಂತ ಪ್ರಿಯ ಶಿಷ್ಯರಾದ ಬಿಳಗೆ ಸ್ಥಳದ ತಿಮ್ಮಣ್ಣ ಜೋಯಿಸ, ವಿಶ್ವೇಶ್ವರ ಜೋಯಿಸ, ನರಸಿಂಹ ಜೋಯಿಸ ಮತ್ತು ಸಿದ್ದಾಪುರದ ಅಣ್ಣಯ್ಯ ಜೋಯಿಸ, ವೆಂಕಟ ಶಾಸ್ತ್ರಿ ಮುಂತಾದ ಆಚಾರ ಭಟ್ಟರಿಗೆ ಅಪ್ಪಣೆ ನೀಡಿದರು.[೧೭]

ಸೋದೆ-ಬಿಳಿಗೆ ಸೀಮೆಯ ಹೈಗರ ರಾಮಯ್ಯ ಎಂಬವನು ಸೋದೆ ಮತ್ತು ಬಿಳಗಿಗೆ ಜವಳಿ ತರಲು ಹೋದ ವಿಷಯಕ್ಕೆ ಸಂಬಂಧಿಸಿ, ಹುಲುಗೋಡ ಪುಟ್ಟ ಮತ್ತು ಬಿಳಗಿಗೆ ಜವಳಿ ತರಲು ಹೋದ ವಿಷಯಕ್ಕೆ ಸಂಬಂಧಿಸಿ, ಹುಲುಗೋಡ ಪುಟ್ಟ ಮತ್ತು ಉಳವೆ ದೇವಪ್ಪನವರು ಶೃಂಗೇರಿ ಮಠಕ್ಕೆ ಕೊಟ್ಟ ಬಿನ್ನವತ್ತಳೆಗಳು ಕಡತದಲ್ಲಿ ಲಭ್ಯವಾಗಿವೆ.[೧೮]

ಒಟ್ಟಿನಲ್ಲಿ, ಬಿಳಗಿಯ ಅರಸುಗಳು ಮತ್ತು ಪ್ರಜೆಗಳು ಶೃಂಗೇರಿ ಮಠವನ್ನು ಮತ್ತು ಜಗದ್ಗುರುಗಳನ್ನು ಅತ್ಯಂತ ಭಕ್ತಿಯಿಂದ ಕಾಣುತ್ತಿದ್ದರೆಂದು ಮೇಲ್ಕಾಣಿಸಿದ ಕೆಲವು ದಾಖಲೆಗಳಿಂದ ಸ್ಪಷ್ಟವಾಗುತ್ತದೆ. ಈ ಸತ್ಪರಂಪರೆಯು ವಿಜಯನಗರ ಕಾಲದಿಂದಲೇ ಪ್ರಾರಂಭವಾಯಿತು. ಕೆಳದಿಯ ನಾಯಕರೂ ಇದನ್ನೇ ಅನುಸರಿಸಿದರು. ಧಾರ್ಮಿಕ ಮತ್ತು ಸಾಮಾಜಿಕ ವಿಷಯಗಳಲ್ಲಿ ಸಂದಿಗ್ಧತೆ ತಲೆದೋರಿದಾಗ, ಅಂದಿನ ಆಳರಸರ ವಿನಂತಿ ಮೇರೆಗೆ ಶೃಂಗೇರಿ ಜಗದ್ಗುರುಗಳು ಧರ್ಮಶಾಸ್ತ್ರಕ್ಕೆ ಸಂಬಂಧಿಸಿದ ಅನೇಕ ಗ್ರಂಥಗಳನ್ನು ಆಧಾರವಾಗಿರಿಸಿಕೊಂಡು ಅಂತಿಮ ನಿರ್ಣಯ ನೀಡುತ್ತಿದ್ದರು. ಜಾತಿಯ ಕಟ್ಟುಪಾಡುಗಳು ಬಿಗಿಯಾಗಿದ್ದವು. ತಪ್ಪಿತಸ್ಥನಿಗೆ ವಿಧ್ಯುಕ್ತವಾಗಿ ಪ್ರಾಯಶ್ಚಿತ್ತ ಮಾಡುವ ರೂಢಿ ಅಂದಿನದಾಗಿತ್ತು. ಇನ್ನಿತರ ಸಂಸ್ಥಾನಗಳಲ್ಲಿದ್ದಂತೆ ಬಿಳಗಿ ಸಂಸ್ಥಾನದಲ್ಲಿಯೂ ಶಿಷ್ಯರ ಆಚಾರ ವಿಚಾರ ನೋಡಿಕೊಳ್ಳಲು ಶೃಂಗೇರಿ ಮಠದ ಆಚಾರ ಭಟ್ಟರು ಇರುತ್ತಿದ್ದರು. ಯಾವುದೇ ಧಾರ್ಮಿಕ ಮತ್ತು ಸಾಮಾಜಿಕ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಸ್ಥಳೀಯ ಮಠಗಳು ಮಹತ್ವದ ಪಾತ್ರ ನಿರ್ವಹಿಸುತ್ತಿದ್ದವೆಂಬುದೂ ದಾಖಲೆಗಳಿಂದ ಸ್ಪಷ್ಟವಾಗುತ್ತದೆ. ಕೆಳದಿ ರಾಜ್ಯದ ನಾಣ್ಯಪದ್ಧತಿಯೇ ಬಿಳಗಿ ರಾಜ್ಯದಲ್ಲೂ ಇದ್ದಂತೆ ತೋರುತ್ತದೆ. ಬಿಳಗಿ ಒಂದು ವ್ಯಾಪಾರೀಕೇಂದ್ರವಾಗಿತ್ತೆಂದು ಪರೋಕ್ಷವಾಗಿ ತಿಳಿದು ಬರುತ್ತದೆ. ಪ್ರಸ್ತುತ ಲೇಖನದಲ್ಲಿ ನಮೂದಿಸಲಾದ ಕೆಲವು ದಾಖಲೆಗಳಲ್ಲಿ ಕಾಲ ವ್ಯತ್ಯಾಸವಿರುವದು ನಿಜವಿದ್ದರೂ, ದಾಖಲೆಗಳಲ್ಲಿ ವಿವರಿಸಲಾದ ಅಂಶಗಳು

---

೧೭. ಅದೇ, ದಾ. ೧೧೮.
೧೮. ಕ. ೬, ದಾ. ೬, ೧೪.

ಐತಿಹಾಸಿಕ ಸತ್ಯ ಎಂಬುದು ಇನ್ನುಳಿದ ಮಠಗಳಲ್ಲಿಯ ದಾಖಲೆಗಳನ್ನು ಪರಿಶೀಲಿಸಿದಾಗ ಖಚಿತವಾಗುತ್ತದೆ. ಪ್ರಸ್ತುತದಲ್ಲಿ ಪ್ರಚುರ ಪಡಿಸಿದ ಕೆಲವು ದಾಖಲೆಗಳು ಬಿಳಗಿ ರಾಜ್ಯದ ಸಮಗ್ರ ಇತಿಹಾಸವನ್ನು ಪುನಃ ರಚಿಸಲು ಅಷ್ಟೊಂದು ಸಹಾಯಕಾರಿಯಲ್ಲ. ಬಿಳಗಿ ಅರಸರ ವಂಶಾವಳಿಯ ಮೇಲೂ ಹೆಚ್ಚಿನ ಬೆಳಕು ಚೆಲ್ಲುವದಿಲ್ಲ. ಆದರೂ ಅಂದಿನ ಬಿಳಗಿ ಪ್ರಜೆಗಳ ಧಾರ್ಮಿಕ ಮತ್ತು ಸಾಮಾಜಿಕ ಜೀವನಗಳನ್ನು ಅರಿಯಲು ಈ ದಾಖಲೆಗಳು ಉಪಯುಕ್ತವಾಗಿವೆ. ಇತಿಹಾಸದ ವಿಶಾಲ ದೃಷ್ಟಿಕೋನಕ್ಕೆ ಈ ದಾಖಲೆಗಳು ಪೂರಕವಾಗಿವೆ. ಈ ದಿಶೆಯಲ್ಲಿ. ಶಾಸನಗಳ ಮತ್ತು ಚಾರಿತ್ರಿಕ ದಾಖಲೆಗಳ ಸಂಗ್ರಹಣೆ ಮತ್ತು ಅವುಗಳ ವಿಶೇಷ ಅಧ್ಯಯನ ಅತ್ಯವಶ್ಯ.

# ಕೆಳದಿಗೆ ಸಂಬಂಧಿಸಿದ ಸ್ವರ್ಣವಲ್ಲೀ ಮಠದ ಚಾರಿತ್ರಿಕ ದಾಖಲೆಗಳು

---

ವಿಜಯನಗರ ಸಮ್ರಾಟರ ಸಾಮಂತರಲ್ಲಿ ಪ್ರಬಲರೆನಿಸಿದ ಕೆಳದಿಯ ನಾಯಕರು ಸಾಮ್ರಾಜ್ಯದ ಪತನಾನಂತರ ಕರ್ನಾಟಕದ ಚಾರಿತ್ರಿಕ ಬೆಳವಣಿಗೆಯಲ್ಲಿ ಮಹತ್ವದ ಪಾತ್ರ ನಿರ್ವಹಿಸಿದರು. ಕೆಳದಿನೃಪರು ಸುಮಾರು ಎರಡೂವರೆ ಶತಮಾನಗಳ ಕಾಲ (ಕ್ರಿ. ಶ. ೧೪೯೯-೧೭೬೩) ಕರ್ನಾಟಕದ ಮಧ್ಯ-ಪಶ್ಚಿಮ ಭಾಗದ ಒಡೆಯರಾಗಿದ್ದರು. ಕೆಳದಿಯ ಅರಸರು ವೀರಶೈವ ಮತಾನುಯಾಯಿಗಳಾಗಿದ್ದರೂ, ಸಕಲ ಮತಧರ್ಮಗಳಿಗೆ ಸೇರಿದ ಮಠಗಳನ್ನು, ಗುರುಗಳನ್ನು ಮತ್ತು ಪ್ರಜೆಗಳನ್ನು ಗೌರವಿಸಿ ಪೋಷಿಸಿದರೆಂಬುದು ಐತಿಹಾಸಿಕ ಸತ್ಯ.

ಉತ್ತರಕನ್ನಡ ಜಿಲ್ಲೆಯ ಶಿರಸಿ ತಾಲೂಕಿನಲ್ಲಿರುವ ಶ್ರೀ ಸ್ವರ್ಣವಲ್ಲೀ ಮಠದ ಪೂರ್ವಚರಿತ್ರೆ ಆದಿಶಂಕರಾಚಾರ್ಯರಷ್ಟೇ ಪುರಾತನವಾದುದು. ಪೂರ್ವದಲ್ಲಿ ಕಾಶಿಯಲ್ಲಿ ಶ್ರೀಮಠ ಸ್ಥಾಪನೆಯಾದ ನಂತರ ಕಾಲಕ್ರಮೇಣ ಉಜ್ಜಯಿನಿ, ಗೋಕರ್ಣ, ಕಡತೋಕೆ, ಸಹಸ್ರಲಿಂಗ ಮತ್ತು ಇಂದಿನ ಸ್ವರ್ಣವಲ್ಲಿಗೆ ಸ್ಥಳಾಂತರಿಸಲ್ಪಟ್ಟಿತು.[೧] ತಮ್ಮ ವಂಶಸ್ಥರಿಗೆಲ್ಲ ಶಿವಸಾಯುಜ್ಯ ಮೋಕ್ಷ ಪದವು ಸ್ಥಿರವಾಗಲೆಂದು ಸೋದೆಯ ಇಮ್ಮಡಿ ಅರಸಪ್ಪ ನಾಯಕನು ಸ್ವರ್ಣವಲ್ಲೀ ಪೀಠದಲ್ಲಿ ೩೪ ನೆಯವರಾದ ಶ್ರೀ ಚಂದ್ರಶೇಖರ ಸರಸ್ವತಿಗಳಿಗೆ ಶಾ. ಶ. ೧೪೭೮ (ಕ್ರಿ. ಶ. ೧೫೫೬) ರಲ್ಲಿ ಶಾಲ್ಮಲೀ ತೀರದ ವಿಶಾಲವಾದ ಸ್ಥಳದಲ್ಲಿ ಮಠ, ಚಂದ್ರಶಾಲೆ, ಶ್ರೀ ಲಕ್ಷ್ಮೀನರಸಿಂಹ, ಚಂದ್ರಮೌಳೀಶ್ವರ ದೇವಾಲಯ, ಶಾರದಾ, ಗಣಪತಿ, ವ್ಯಾಸಾದಿಗಳಿರುವ ಬೇರೆ ಬೇರೆ ಗುಡಿಗಳನ್ನು ಕಟ್ಟಿಸಿ, 'ಶ್ರೀ ಸ್ವರ್ನವಲ್ಲೀ ಮಠ' ಎಂದು ನಾಮಧೇಯವಿಟ್ಟು ಪೂಜೆ, ವಿನಿಯೋಗ ನಿತ್ಯದಲ್ಲಿ ನಡೆಯಲೆಂದು ಸೋದಾ ಗ್ರಾಮಕ್ಕೆ 'ಹೊನ್ನೆಹಳ್ಳಿ ಗ್ರಾಮ' ಎಂದು ಹೆಸರಿಸಿ, ೫೨ ಗ್ರಾಮಗಳನ್ನು ಶ್ರೀಮಠಕ್ಕೆ ಉಂಬಳಿಯಾಗಿ ಕೊಟ್ಟನೆಂದು ಶಾಸನವೊಂದರಿಂದ ತಿಳಿದುಬರುತ್ತದೆ.[೨] ಅಂದಿನಿಂದ

---

೧. ಸ್ವರ್ಣವಲ್ಲೀ ಮಠದ ಗುರುಪರಂಪರೆಯಲ್ಲಿ ೩೮ ನೆಯವರಾದ ಶ್ರೀ ಗಂಗಾಧರೇಂದ್ರ ಸರಸ್ವತಿಗಳು (ಕ್ರಿ. ಶ. ೧೬೪೦-೧೬೫೩) ರಚಿಸಿದ 'ಜ್ಞಾನದೀಪಿಕಾ' ಎಂಬ ಚಾರಿತ್ರಿಕ ಕಾವ್ಯದಲ್ಲಿ ಸ್ವರ್ಣವಲ್ಲೀ ಮಠದ ಪೂರ್ವ ವೃತ್ತಾಂತವಿದೆ.

೨. ಸ್ವ. ದಾ. ೬, ೭. ('ಶ್ರೀ ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನದ ಐತಿಹಾಸಿಕ ದಾಖಲೆಗಳು, ಸಂ. ೧', ಕರ್ನಾಟಕ ರಾಜ್ಯ ಪತ್ರಾಗಾರ, ೧೯೯೭, ಲೇಖಕರು- ಡಾ. ಎ. ಕೆ. ಶಾಸ್ತ್ರಿ).

ಇಂದಿನವರೆಗೂ ಸ್ವರ್ಣವಲ್ಲಿಯಲ್ಲೀ ಮಠವಿದ್ದು ಅದೊಂದು ಮಹಾಸಂಸ್ಥಾನವಾಗಿ ಬೆಳೆದು ಬಂದಿದೆ. ಸೋದೆಯರಸರು, ಹೈದರ, ಟಿಪ್ಪುಸುಲ್ತಾನ, ಬ್ರಿಟಿಷ್ ಆಡಳಿತ ವರ್ಗ ಮತ್ತು ಸಂಸ್ಥಾನದ ಸಕಲ ಪ್ರಜೆಗಳು ಸ್ವರ್ಣವಲ್ಲೀ ಮಠದ ಗುರುಗಳನ್ನು ಮತ್ತು ಅವರ ಮಠವನ್ನು ಗೌರವಿಸಿದರೆಂದು ಶ್ರೀಮಠದಲ್ಲಿ ದೊರೆತ ಚಾರಿತ್ರಿಕ ದಾಖಲೆಗಳಿಂದ ಸ್ಪಷ್ಟವಾಗುತ್ತದೆ.[೩]

ಪ್ರತ್ಯಕ್ಷವಾಗಿ ಸ್ವರ್ಣವಲ್ಲೀ ಮಠ ಸೋದೆ (ಸ್ವಾದಿ) ರಾಜ್ಯದಲ್ಲಿತ್ತಾದರೂ, ಪರೋಕ್ಷವಾಗಿ ಈ ಸ್ಥಳ ಕೆಲವೊಮ್ಮೆ ಸಾಮಂತರಾದ ಕೆಳದಿ ನೃಪರ ನಿಯಂತ್ರಣ ಕ್ಕೊಳಪಟ್ಟಂತೆ ತೋರುತ್ತದೆ. ಸ್ವಾದಿ ಅರಸರಂತೆ ಕೆಳದಿ ನೃಪರೂ ಸ್ವರ್ಣವಲ್ಲೀ ಮಠಕ್ಕೆ ಧರ್ಮಸಾಧನಗಳನ್ನು ನೀಡಿ ಶ್ರೀಗಳವರನ್ನು ಗೌರವಿಸಿದರೆಂದು ಶ್ರೀಮಠದ ದಾಖಲೆಗಳಿಂದ ತಿಳಿದುಬರುತ್ತದೆ.[೪] ಪ್ರಸ್ತುತ ವಿಷಯಕ್ಕೆ ಸಂಬಂಧಿಸಿ. ಲಭಿಸಿದ ಒಟ್ಟೂ ನಾಲ್ಕು ದಾಖಲೆಗಳಲ್ಲಿ ಮೊದಲನೆಯದು ವೆಂಕಟಪ್ಪ ನಾಯಕ, ಎರಡು ಮತ್ತು ಮೂರು ಬಸಪ್ಪ ನಾಯಕ ಮತ್ತು ನಾಲ್ಕನೆಯದು ಚನ್ನಮ್ಮಾಜಿಯ ಕಾಲಕ್ಕೆ ಸೇರಿದವುಗಳು. ದಾಖಲೆಗಳ ಕಿರುಪರಿಚಯ ಇಂತಿದೆ—

ದೊಡ್ಡ ಸಂಕಣ್ಣನಾಯಕರ ಪುತ್ರ ಹಿರಿಯ ವೆಂಕಟಪ್ಪ ನಾಯಕರು (ಕ್ರಿ. ಶ. ೧೫೮೭-೧೬೨೯) ಕೆಳದಿ ಅರಸುಮನೆತನದ ಘನವಂತ ದೊರೆಗಳು. ವಿಜಯನಗರ ಚಕ್ರವರ್ತಿಗಳ ಹಿಡಿತದಿಂದ ಪಾರಾಗಿ ತಮ್ಮ ಮನೆತನದಲ್ಲಿಯೇ ಸ್ವತಂತ್ರ ದೊರೆ ಯೆನಿಸಿದ ಹಿರಿಯ ವೆಂಕಟಪ್ಪ ನಾಯಕರು ಶ್ರೇಷ್ಠ ಕವಿಗಳೂ, ವಿದ್ಯಾಪೋಷಕರೂ ಆಗಿದ್ದರು. ಸರ್ವ ಮತಧರ್ಮಗಳನ್ನು ಸಮಾನವಾಗಿ ಪೋಷಿಸಿದ ಕೀರ್ತಿ ಅವರದು. ಸ್ವರ್ಣವಲ್ಲೀ ಮಠದ ಗುರುಪರಂಪರೆಯಲ್ಲಿ ೩೬ನೆಯವರಾದ ಶ್ರೀ ರಾಮಚಂದ್ರ ಸರಸ್ವತಿಗಳು (ಕ್ರಿ. ಶ ೧೬೨೦-೧೬೪೨) ವೆಂಕಟಪ್ಪ ನಾಯಕರ ಸಮಕಾಲೀನರು. ರಾಮಚಂದ್ರ ಸರಸ್ವತಿಗಳು ಶ್ರೀ ಸರ್ವಜ್ಞೇಂದ್ರ ಸರಸ್ವತಿಗಳ ಕರಕಮಲಸಂಜಾತರು.

ಶಾ. ಶ. ೧೫೪೨, ರೌದ್ರಿ ಸಂವತ್ಸರದ ಚೈತ್ರ ಬ. ೩, ರವಿವಾರದಂದು (೯-೪-೧೬೨೦) ಚಂದಾವರ (ಹೊನ್ನಾವರ ತಾಲೂಕು ಉ. ಕ.) ಹೋಬಳಿಯೊಳ ಗಿನ ಆಗಸೆ-ಮಾಡಗೇರಿ ಗ್ರಾಮದೊಳಗಿನ ಸ್ಥಳವನ್ನು ಪೂರ್ವಮರ್ಯಾದಿಯಂತೆ ಒಪ್ಪಿಕೊಂಡು ೩೩೯ ವರಹ ಮತ್ತು ೯ ಹಣಗಳನ್ನು ಕಾಲಂಪ್ರತಿ (ಪ್ರತಿವರ್ಷ) ಅರಮನೆಗೆ (ಕೆಳದಿ ಸರಕಾರಕ್ಕೆ) ಸಲ್ಲಿಸುತ್ತ, ಧರ್ಮ ನಡೆಸುವಂತೆ ಹೊನ್ನೇಹಳ್ಳಿ ರಾಮಚಂದ್ರ ಸರಸ್ವತಿಗಳಿಗೆ ಕೆಳದಿಯ ವೆಂಕಟಪ್ಪ ನಾಯಕರು ಪಟ್ಟೆ ಬರೆಸಿದರು.[೫]

---

೩. ಅದೇ ಗ್ರಂಥ.

೪. ಸ್ವ. ದಾ. ೧೮, ೨೭, ೨೯, ೩೭.

೫. ಸ್ವ. ದಾ. ೧೮.

ಅರಮನೆಗೆ ನೀಡುವ ಒಟ್ಟೂ ಸಿಸ್ತಿನ ವಿವರವನ್ನು ಪ್ರಸ್ತುತ ಪಟ್ಟೆಯಲ್ಲಿ ವಿವರಿಸಲಾಗಿದೆ. ಗೋಕರ್ಣದ ಮಹಾಬಲೇಶ್ವರ ದೇವರಿಗೆ, ಗುರುಗಳ ಭಿಕ್ಷೆಗೆ, ಮಠಗಳಿಗೆ, ಮಾಡಗೆರಿ ಮೇಗಣ ಮಠದ ಗೋಪಿನಾಥ ದೇವರಿಗೆ, ಕೆಳಮಠದ ನರಸಿಂಹ ದೇವರಿಗೆ ವೇದೇಶ್ವರ ದೇವರಿಗೆ ಮತ್ತು ಅಗಸೆ ಕಾಮೇಶ್ವರ ದೇವರಿಗೆ ಸಂಬಂಧಿಸಿದ ಧರ್ಮದ ವಿವರವೂ ಸದರಿ ಪಟ್ಟೆಪ್ರತಿಯಲ್ಲಿದೆ. ನಷ್ಟಕ್ಕೆ ಬಿಟ್ಟ ಅಕ್ಕಿಯನ್ನೂ ಉಲ್ಲೇಖಿಸಲಾಗಿದೆ. ಕ್ರಿ. ಶ. ೧೬೨೦ ರ ಪೂರ್ವದಲ್ಲಿಯೇ ಅಗಸೆ-ಮಾಡಗೆರಿ ಗ್ರಾಮದೊಳಗಿನ ಸ್ಥಳವು ಸ್ವರ್ಣವಲ್ಲೀ ಮಹಾಸಂಸ್ಥಾನಕ್ಕೆ ಬಹುಶಃ ಅರ್ಧಮಾನ್ಯವಾಗಿ ದೊರಕಿತ್ತೆಂದು ಪ್ರಸ್ತುತ ಪಟ್ಟೆಪ್ರತಿಯಿಂದ ಖಚಿತವಾಗುತ್ತದೆ.

ವೆಂಕಟಪ್ಪ ನಾಯಕರು ಶೃಂಗೇರಿಯ ಪ್ರಥಮ ಶ್ರೀ ಅಭಿನವ ನರಸಿಂಹ ಭಾರತೀ (ಕ್ರಿ. ಶ. ೧೫೯೯-೧೬೨೨) ಸ್ವಾಮಿಗಳಿಗಾಗಿ ಶೃಂಗೇರಿಯಲ್ಲಿಯ ಮಠದ ಕಟ್ಟಡವನ್ನು ವಿಸ್ತರಿಸಿದರು. ಇದಲ್ಲದೆ ಅಗ್ರಹಾರವನ್ನು ನಿರ್ಮಿಸಿ ೫೦ ಪಗೋಡಗಳಿಗಿಂತಲೂ ಹೆಚ್ಚು ಉತ್ಪತ್ತಿಯುಳ್ಳ ಮುಕ್ಕರನಾಡಿನ ಭೂಮಿಯನ್ನು ದಾನಮಾಡಿದರು. ಈ ಸತ್ಕಾರ್ಯಕ್ಕಾಗಿ, ನಾಯಕರಿಗೆ "ಶೃಂಗೇರಿ ಪ್ರತಿಷ್ಠಾಪಕ" ಮತ್ತು "ವಿಶುದ್ಧ ವೈದಿಕಾದ್ವೈತಸಿದ್ಧಾಂತ ಪ್ರತಿಷ್ಠಾಪಕ" ಎಂಬ ಬಿರುದುಗಳೂ ಜಗದ್ಗುರುಗಳಿಂದ ದಯಪಾಲಿಸಲ್ಪಟ್ಟವು.[೬] ಎಂಬೆಲ್ಲ ಸಂಗತಿಗಳನ್ನೂ ಪ್ರಸ್ತುತ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ.

ಮೊದಲೇ ತಿಳಿಸಿದಂತೆ ಕೆಳದಿ ಬಸಪ್ಪ ನಾಯಕರ ಕಾಲಕ್ಕೆ ಸೇರಿದ ಎರಡು ದಾಖಲೆಗಳೂ ಸ್ವರ್ಣವಲ್ಲೀ ಮಠದಲ್ಲಿ ದೊರೆತಿವೆ. ಕೆಳದಿ ಸಂಸ್ಥಾನದ ಬಸಪ್ಪ ನಾಯಕರು ಸೋದೆಯ ಹೊನ್ನೆಹಳ್ಳಿ[೭] ಸಂಸ್ಥಾನದ ಸರ್ವಜ್ಞ (ಸರ್ವಜ್ಞೇಂದ್ರ) ಸರಸ್ವತೀ ಶ್ರೀಪಾದಂಗಳಿಗೆ ಶಾ ಶ. ೧೫೮೧, ವಿಕಾರಿ ಸಂವತ್ಸರ ಮಾಘ ಶು. ೧೫ ಮಂಗಳವಾರದಂದು (೧೭-೧-೧೬೬೦) ಧರ್ಮಶಾಸನದ ಪಟ್ಟೆಯನ್ನು ನೀಡಿದರು. ಧರ್ಮಶಾಸನದ ಪಟ್ಟೆಯ ಕ್ರಮ ಇಂತಿದೆ—

"......ನಾಉೂ ಕಾಣಾಚಿಯಾಗಿ (ಪಿತ್ರಾರ್ಜಿತವಾಗಿ) ಆಳುತ್ತಾಯಿದ್ದ ಚಂದಾವರ ಶಿಮೆ ವಳಗಣ ಅಂವಸವಳಿ ಬಾದೊಳಿ ಗ್ರಾಮ-ಊ ಪ್ರಾಕಾರಭ್ಯ (ಪೂರ್ವದಿಂದ) ನಿಂಮ ಮಠಕ್ಕೆ ನಡದು ಬರುತ್ತಿದ್ದಲ್ಲಿ। ಮಧ್ಯದಲ್ಲು। ಅರಮನೆಗೆ ಕೂಡಿಯಿರುವಲ್ಲಿ। ಯಿೂಗಾ ನಿಉೂ ಬಂದು। ಪ್ರಾಕ್ಕು ಪ್ರಕಾರ್‍ರ ನಡಶಿಕೊಡಬೆಕೆಂತ್ತ ಹೆಳಿ

---

೬. ಡಾ. ಎ. ಕೆ. ಶಾಸ್ತ್ರಿ, 'ಶೃಂಗೇರಿ ಧರ್ಮಸಂಸ್ಥಾನ', ೧೯೮೩, ಪು. ೩೮.

೭. ಹೊನ್ನೆಹಳ್ಳಿ ಗ್ರಾಮದಲ್ಲಿ ಸ್ವರ್ಣವಲ್ಲೀ ಸಂಸ್ಥಾನವಿದ್ದುದರಿಂದ, ಅನೇಕ ಶಾಸನಗಳಲ್ಲಿ 'ಸ್ವರ್ಣವಲ್ಲೀ ಸಂಸ್ಥಾನ' ಎಂಬುದರ ಬದಲಿಗೆ 'ಹೊನ್ನೆಹಳ್ಳಿ ಸಂಸ್ಥಾನ' ಎಂದೇ ನಮೂದಿಸಲಾಗಿದೆ.

ಕೊಂಡದ್ದರಿಂದ ಆ ಗ್ರಾಮವಂನ್ನೂ। ನಿಮಗೆ ಸಹಿರಂಣ್ಯೋದಕ ದಾನ ಧಾರಾ ಪೂರ್ವಕವಾಗಿ ಧರೆಯನೆರದು ಕೊಟೆವಾಗಿ॥ ದೇವರ್‍ರಿಗೆ ಅಭಿಷೆಕ ಪೂಜೆ ನೈವೆದ್ಯ ನಂದಾ ದಿಪ್ಪಿ ಬಗ್ಗ್ಗೆ ಸಹಾ। ಬಿಟ ಗ್ರಾಮವನು ಪೂರ್ವದಲ್ಲಿ ಆಳಿಬಂದ ಆಳಿಕೆ ಪ್ರಮಾಣ। ಭೂಮಿ ಮನೆ। ತ್ರೊಟ ಗದೆ ತ್ತೆಂಗು ಶಿಂಗಾರ ನಿರು ದಾರ್‍ರಿ ನೆಲೆ ಹೊಲ್ಲಾ ಬಿಟ ಬಿಟೆ ಹಕ್ಕಲ್ಲು ಹಳೆಗಾನು ಕಾನು ಕಾಡಾರಂಭ ಮುಂತ್ತಾಗಿ ಯಿದಕ್ಕೆ ಬಂದ ಪಳಕೊಡು ಹೊರನೆಗಡು। ಬಿಟ ಬೆಣ ಅಕ್ಷಿಣೆ ಆಗಾವೆ ಮೂಂತ್ತಾಗಿ ಯೆನು ಉಂಟಾದ್ದನು। ಪೂರ್ವದಾರಭ್ಯ ನಡದು ಬಂದ ಪ್ರಮಾಣ। ಅನುಭವಿಶಿಕೊಂಡು ಶ್ರೀ॥ ॥ನರಶಿಂಪ್ಪ ದೆವರ ಸೆವೆಯಂನು ನಡಶಿಕೊಂಡು। ದೆವರ ಭಿಕ್ಷಾ ಸ್ವಾಸ್ಥಿಯಂನು ಆಗುಮಾಡ್ಡಿಕೊಂಡು। ದೆವರ ಶಿಷ್ಯಪಾರಂಪರೆಯಾಗಿ। ನಂಮ್ಮ ವ(ಂ)ಶ ಪಾರಂಪರೆ ಯಾಗಿ ಆಳಿ ಅನುಭವಿಶಿಕೊಂಡು। ಅ ಚಾದ್ರಾರ್ಕ ಸ್ಥಾಯಿಗಳಾಗಿ ಸರ್ವಬಾಧ ಪರಿ ಹಾರವಾಗಿ ಅನುಭವಿಶಿ ಯಿಹದು ಯಂದು ಬರಶಿಕೊಟ ರಾಯ್ಸದ ಪಟೆ।...”[೮] ಧರ್ಮಶಾಸನದ ಕೊನೆಯಲ್ಲಿ, “ಆದಿತ್ಯ ಚಂದ್ರಾವನಿಲೋ ನಲಶ್ಚ...” ಇತ್ಯಾದಿ ಸಾಕ್ಷಿಗ್ರಂಥಗಳನ್ನು ಉಲ್ಲೇಖಿಸಲಾಗಿದೆ.

ಅದೇ ರೀತಿ, ಬಸಪ್ಪನಾಯಕರು ಹೊನ್ನೆಹಳ್ಳಿ ಮಠದ ಮಾಧವೇಂದ್ರ ಸರಸ್ವತೀ ಶ್ರೀಪಾದಂಗಳಿಗೆ, ಶಾ ಶ. ೧೫೯೦, ಕೀಲಕ ಸಂ, ಚೈತ್ರ ಶು. ೫, ಶನಿವಾರ (೭-೩-೧೬೬೮)ದಂದು, ಚಂದಾವರ ಸೀಮೆಯೊಳಗಿನ ಅಗಸೆ–ಮಾಡಗೆರೆ ಗ್ರಾಮ ವನ್ನು ಮೂಲಗುತ್ತಿಗೆ ಕರಾರು ಮಾಡಿ ರಾಯಸದ ಪಟ್ಟೆಯನ್ನು ನೀಡಿದರೆಂದು ತಿಳಿದುಬರುತ್ತದೆ.[೯] ಅಗಸೆ-ಮಾಡಗೆರೆ ಗ್ರಾಮವು ಪೂರ್ವದಲ್ಲಿ ಸ್ವರ್ಣವಲ್ಲೀ ಮಠಕ್ಕೆ ಮೂಲ ಗುತ್ತಿಗೆಯಾಗಿತ್ತೆಂದೂ, ಪುನಃ ಅದು ಕೆಳದಿಗೆ ಸೇರಿತೆಂದೂ, ಪುನಃ ಮಠದವರ ವಿನಂತಿ ಮೇರೆಗೆ ಸದರಿ ಸ್ಥಳವನ್ನು ಸ್ವರ್ಣವಲ್ಲೀ ಮಠಕ್ಕೆ ಮೂಲ ಗುತ್ತಿಗೆ ಕರಾರಿನನ್ವಯ ನೀಡಲಾಯಿತೆಂದೂ ರಾಯಸದ ಪಟ್ಟೆಯಿಂದ ವಿದಿತವಾಗುತ್ತದೆ.

ಮೇಲ್ಕಾಣಿಸಿದ, ಕ್ರಮವಾಗಿ, ಕ್ರಿ ಶ ೧೬೬೦ ಮತ್ತು ಕ್ರಿ.ಶ. ೧೬೬೮ ರ ಧರ್ಮಶಾಸನಗಳ ಪಟ್ಟೆಪ್ರತಿಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಿದಾಗ, ಪಟ್ಟೆಪ್ರತಿಗಳಲ್ಲಿ ಉಲ್ಲೇಖಿಸಿದ ಕಾಲ, ಈಗಾಗಲೇ ನಿಗದಿಪಡಿಸಿದ ಮೊದಲನೆಯ ಬಸಪ್ಪನಾಯಕರ ಕಾಲ (ಕ್ರಿ.ಶ. ೧೬೯೭–೧೭೧೪) ಕ್ಕೆ ಸರಿಹೊಂದುವದಿಲ್ಲ. ಆದರೆ ದಾಖಲೆಗಳಲ್ಲಿ ನಮೂದಿಸಲಾದ ಶ್ರೀ ಸರ್ವಜ್ಞೇಂದ್ರ ಸರಸ್ವತಿಗಳು (ಪೀಠದಲ್ಲಿ ೪೧ ನೆಯವರು, ಕ್ರಿ. ಶ. ೧೬೫೬–೧೬೬೮) ಮತ್ತು ಶ್ರೀ ಮಾಧವೇಂದ್ರ ಸರಸ್ವತಿ ಗಳು (ಪೀಠದಲ್ಲಿ ೪೨ ನೆಯವರು, ಕ್ರಿ.ಶ. ೧೬೬೮–೧೬೭೩) ಸ್ವರ್ಣವಲ್ಲೀ ಮಠದ

---

೮. ಸ್ವ. ದಾ. ೬೭.

೯. ಸ್ವ. ದಾ. ೨೯.

ಪೀಠದಲ್ಲಿ ವಿರಾಜಮಾನರಾಗಿದ್ದರೆಂಬುದು ಮಠದ ಇನ್ನುಳಿದ ದಾಖಲೆಗಳಿಂದಲೂ ಸ್ಪಷ್ಟವಾಗುತ್ತದೆ. ಈ ಅವಧಿಯಲ್ಲಿ, ಕೆಳದಿಯಲ್ಲಿ, ಕ್ರಮವಾಗಿ ಮೊದಲನೆಯ ಸೋಮಶೇಖರನಾಯಕ (ಕ್ರಿ ಶ. ೧೬೬೧-೧೬೭೭), ಅವನ ಪತ್ನಿ ರಾಣಿ ಚೆನ್ನಮ್ಮಾಜಿ (ಕ್ರಿ ಶ. ೧೬೬೧-೧೬೯೭). ಮತ್ತು ಚೆನ್ನಮ್ಮಾಜಿಯ ನಂತರ ಅವಳ ಪುತ್ರ, ಬಸಪ್ಪ(ಬಸವಪ್ಪ)ನಾಯಕ (ಕ್ರಿ. ಶ. ೧೬೯೭-೧೭೧೪), ರಾಜ್ಯಭಾರ ಮಾಡಿದರು. ಅಂದರೆ ಇದರರ್ಥ, ಬಸಪ್ಪನಾಯಕರು ಕ್ರಿ. ಶ. ೧೬೯೭ ರಲ್ಲಿ ಪಟ್ಟಕ್ಕೆ ಬಂದರೂ, ೧೬೬೦ ರ ದಶಕದಲ್ಲಿ ಯುವರಾಜರಾಗಿದ್ದು, ಮೇಲ್ಕಾಣಿಸಿದ ಧರ್ಮಶಾಸನಗಳನ್ನು ನೀಡಿರಲು ಸಾಕು. ಅಥವಾ ಶಾಸನದ ಪ್ರತಿ ಮಾಡುವಾಗ ಹೆಸರನ್ನು ತಪ್ಪಾಗಿ ಉಲ್ಲೇಖಿಸುವ ಸಾಧ್ಯತೆಯನ್ನೂ ಅಲ್ಲಗಳೆಯುವಂತಿಲ್ಲ. ಅಥವಾ ಈಗಾಗಲೇ ನಿಗದಿಪಡಿಸಿದ ಕೆಳದಿ ನಾಯಕರ ಕಾಲದ ಪುನಃಪರಿಶೀಲನೆ ಅಗತ್ಯ. ಏನಿದ್ದರೂ, ದಾನಪಟ್ಟೆಗಳಲ್ಲಿಯ ಮಿಕ್ಕೆಲ್ಲ ಅಂಶಗಳು ಸತ್ಯ ಎಂಬುದು ಸ್ವರ್ಣವಲ್ಲೀ ಸಂಸ್ಥಾನದ ಇತರ ದಾಖಲೆಗಳಿಂದ ಸ್ಪಷ್ಟವಾಗುತ್ತದೆ. ಬಸವಪ್ಪ ನಾಯಕರು ವಿಶ್ವಕೋಶಕೃತಿಯೆನಿಸಿದ 'ಶಿವತತ್ವರತ್ನಾಕರ'ವನ್ನು ಸಂಸ್ಕೃತದಲ್ಲಿ ರಚಿಸಿದ್ದನ್ನು ಗಮನಿಸಬಹುದಾಗಿದೆ.

ಅಡಕಳ್ಳಿ ನರಸಿಂಹ ದೇವರಿಗೆ ಉತ್ತಾರವಾದ (ಉಂಬಳಿಯಾದ, ದಾನವಾದ) ಸ್ವಾಸ್ಥಿಗೆ ಸಂಬಂಧಿಸಿ, ಕೆಳದಿ ಚೆನ್ನಮ್ಮಾಜಿಯವರು (ಕ್ರಿ. ಶ. ೧೬೬೧-೧೬೯೭) ಶಾ.ಶ. ೧೬೦೬, ರಕ್ತಾಕ್ಷಿ ಸಂವತ್ಸರದ ಆಶ್ವಿಜ ಬ. ೧೨, ಶನಿವಾರ (೨೫-೧೦-೧೬೮೪)ದಂದು ಬಸ್ರೈಯಗೆ ಬರೆಸಿ ಕಳುಹಿದ ಕಾರ್ಯ (ನಿರೂಪ) ಇಂತಿದೆ- "...ಹೊಂನೆಹಳಿ ಮಠದ ಸ್ವಾಮಿಗಳವರ ಬಗೆಯವರ್‍ರು। ಹೂಜೂರ್‍ರಿಗೆ ಬಂದು। ಹುಲ್ಲಿಕಂಣ ಕರೂರ ಶಿಮೆ ವಳಗೆ ತ್ತಂಮ ಮಠದ ಹವಾಲೆಯಾಗಿದ್ದ ಅಡಕಳಿ ನಾರಶಿಹ್ವ್ಯ ದೆವರ್‍ರಿಗೆ ಆ ಗ್ರಾಮದಿಂದ ಉತ್ತಾರವಾದ ಸ್ವಾಸ್ಥಿಗೆ ಯೊತ್ತಲಾಗಿ ಅಳತ್ತೆ ಮಾಡಿ ಗ ೧೦ ವರಹಾಂನ್ನು ಗ ।।೦।।।= ಹೊಂನೂ ಮುಘಾಗೂ ಬೆಳೆಯು। ಹೆಚು ಮಾಡಿ ಆ ಬಗೆ ಹಣ ಬರಬೆಕೆಂದ್ದು। ಕಳುಹಿದಾರೆ ಮೊದಲ್ಲು। ಸ್ವಾಸ್ಥಿಗೆ ಹುಟುವಳಿಯಿಲ್ಲ ಆ ಬಗೆಯಲ್ಲಿ। ಕೆಲ್ಲವು ಹಣವ ನಿಲಾ ಬರಕೊಂಡು ಯಿಧಾರೆ ಹೆಚಿಗೆ ಹಣವನು ಉತ್ತಾರಕೊಟು। ನಿಲ್ಲದ ಹಣವನು ಬಿಟು। ಪಾಲ್ಲಿಶಿ ಕೊಳಬೆಕೆಂದು ಹೇಳಿ ಕೊಂಡ ಸಂಮಂಧಾ। ಹೆಚಿಗೆ ಬಗೆಯಲ್ಲೂ ಬರಬೆಕೆಂದು। ಮಾಡಿದ ಗ ೧೦ ।।೦।।।= ಹತ್ತು ವರಹಾಂನ್ನು ಹೊಂನು ಮುಘಾಗು ಬೆಳೆಯಂನ್ನು ಆ ದೆವರ ದೆವತ್ತಾವೆಚ್ಚಕ್ಕೆ ಶಿವಾರ್ಪಿತ್ತವಾಗಿ ಬಿಟು ಯಿ ಬಗೆಯಲ್ಲಿ ಯಿ ನಿಲ್ಲಕೆ ಬಾಹಾ ನಿಲ್ಲದ ಹಣವನ್ನು ವಿಂಗಡದಲ್ಲಿ ಬಿಟು ಚಿಟಿಗೆ ತ್ತಿದ್ದಿಕೊಂಬ ಹಾಗೆ ಮಾಡಿಯಿಧೆವೆ ಯಿ ಬಗ್ಯೆ ಹಣ ಬರಬೆಕೆಂದ್ದು। ಅವರ ಕೆಳಲಾಗದು।..." ಸ್ವರ್ಣವಲ್ಲಿ ಮಠದ ಹವಾಲೆಯಾಗಿದ್ದ, ಅಡಕಳ್ಳಿ ನರಸಿಂಹ ದೇವರಿಗೆ ಉತ್ತಾರವಾಗಿದ್ದ ಭೂಮಿಗೆ ಸಂಬಂಧಿಸಿ ಹೆಚ್ಚಿನ

ಹಣವನ್ನು ಪಡೆಯದಂತೆ ರಾಣಿ ಚೆನ್ನಮ್ಮಾಜಿಯು ಬಸ್ಸೈಯನೆಂಬ ಅಧಿಕಾರಿಗೆ ಆಜ್ಞಾಪಿಸಿದಳೆಂದು ದಾಖಲೆಯಿಂದ ಖಚಿತವಾಗುತ್ತದೆ. ಸ್ವರ್ಣವಲ್ಲೀ ಪೀಠದಲ್ಲಿ ೪೪ನೆಯವರಾದ ಶ್ರೀರಾಮಚಂದ್ರಸರಸ್ವತಿಗಳು (ಕ್ರಿ.ಶ. ೧೬೭೮–೧೭೧೨) ಅಂದು ಸ್ವಾಮಿಗಳಾಗಿದ್ದರು.

ಸ್ವರ್ಣವಲ್ಲೀ ಸಂಸ್ಥಾನದಲ್ಲಿ ಧರ್ಮವು ನಡೆಯಲೋಸುಗ, ಕೆಳದಿ ನೃಪರು ಮಠಕ್ಕೆ ಭೂದಾನ ಮಾಡಿ, ಕೆಲವು ಸಂದರ್ಭಗಳಲ್ಲಿ ಭೂಮಿಗೆ ಸಂಬಂಧಿಸಿದ ತೊಡಕುಗಳನ್ನು ಸರಿಪಡಿಸಿ, ಸ್ವರ್ಣವಲ್ಲೀ ಮಠದ ಸ್ವಾಮಿಗಳನ್ನು ಗೌರವಿಸುತ್ತಿದ್ದರೆಂಬುದು ದೊರೆತ ನಾಲ್ಕೇ ದಾಖಲೆಗಳಿಂದ ಸ್ಪಷ್ಟವಾಗುತ್ತದೆ.




# ದಿವಾನ ಪೂರ್ಣಯ್ಯ ಮತ್ತು ಶೃಂಗೇರಿ ಮಠ

ಸುಮಾರು ಹನ್ನೆರಡುನೂರು ವರ್ಷಗಳ ಹಿಂದೆ ಆದಿ ಶಂಕರರು ಕರ್ನಾಟಕದ ಶೃಂಗೇರಿಯಲ್ಲಿ ಅದ್ವೈತ ಮಠವನ್ನು ಸ್ಥಾಪಿಸಿದರು. ಬಹು ಪುರಾತನ ಕಾಲದಿಂದ ಶೃಂಗೇರಿ 'ದಕ್ಷಿಣದ ವಾರಣಾಸಿ' ಎಂದು ಪ್ರಸಿದ್ಧಿಗೆ ಬಂದಿತು. ವಿಜಯನಗರದ ಸಮ್ರಾಟರು, ಕೆಳದಿಯ ನಾಯಕರು, ಮರಾಠಾ ಮತ್ತು ಮುಸಲ್ಮಾನ ದೊರೆಗಳು, ಮೈಸೂರಿನ ಒಡೆಯರು, ಬ್ರಿಟಿಷ್ ಕಮಿಷನರ್‌ರು ಮತ್ತು ಅನೇಕ ಸಂಸ್ಥಾನಿಕರು ಕಾಲಕಾಲಕ್ಕೆ ಶೃಂಗೇರಿ ಮಠಕ್ಕೆ ಭೂದಾನ ಮಾಡಿ, ರಾಜಾಶ್ರಯ ನೀಡಿದ್ದರಿಂದ, ಅದೊಂದು 'ಧರ್ಮಸಂಸ್ಥಾನ'ವಾಗಿ ರೂಪುಗೊಂಡಿತು.[೧] ಹೈದರಲಿಯು ಸ್ವಸಾಮರ್ಥ್ಯದಿಂದ ಕ್ರಿ. ಶ ೧೭೬೧ ರಲ್ಲಿ ತನ್ನ ಅಧಿಕಾರವನ್ನು ಮೈಸೂರಿನಲ್ಲಿ ಪ್ರಾರಂಭಿಸುವದಕ್ಕಿಂತ ಮುಂಚೆಯೇ ಮೈಸೂರಿನ ಇಮ್ಮಡಿ ಕೃಷ್ಣರಾಜ ಒಡೆಯರು ಶೃಂಗೇರಿ ಮಠದ ದ್ವಿತೀಯ ಶ್ರೀ ಸಚ್ಚಿದಾನಂದ ಭಾರತೀ ಸ್ವಾಮಿಗಳೊಂದಿಗೆ[೨] ನಿಕಟ ಸಂಬಂಧವಿರಿಸಿಕೊಂಡಿದ್ದರು. ಹೈದರಲಿ ಮತ್ತು ಟೀಪುಸುಲ್ತಾನರೂ ಕೂಡ ಶೃಂಗೇರಿಯ ಜಗದ್ಗುರು, ತೃತೀಯ ಶ್ರೀ ಸಚ್ಚಿದಾನಂದ ಭಾರತಿಗಳನ್ನು ಗೌರವಿಸುತ್ತಿದ್ದರೆಂಬುದು ಮಠವಲ್ಲಿಯ ಅನೇಕ ದಾಖಲೆಗಳಿಂದ ಸ್ಪಷ್ಟವಾಗುತ್ತದೆ.[೩] ಟೀಪುಸುಲ್ತಾನನ ಪತನದ ನಂತರ ಮೈಸೂರಿನಲ್ಲಿ ಒಡೆಯರ ಅರಸೊತ್ತಿಗೆಯು ಪುನಃ ಪ್ರಾರಂಭವಾಯಿತು. ಮುಮ್ಮಡಿ ಕೃಷ್ಣರಾಜ ಒಡೆಯರು (ಕ್ರಿ.ಶ. ೧೭೯೬-೧೮೬೮) ಇನ್ನೂ ಚಿಕ್ಕವರಾಗಿದ್ದರಿಂದ ಹೈದರ ಮತ್ತು ಟೀಪುರವರ ಆಡಳಿತದಲ್ಲಿ ಸೇವೆ ಸಲ್ಲಿಸಿದ ಪೂರ್ಣಯ್ಯನವರು ರಾಜಪ್ರತಿನಿಧಿಯಾದರು (ಕ್ರಿ ಶ. ೧೭೯೯-೧೮೧೧). ಪೂರ್ಣಯ್ಯನವರು ತೃತೀಯ ಶ್ರೀ ಸಚ್ಚಿದಾನಂದ ಭಾರತಿಗಳ ತಪೋಮಹಿಮೆ ಮತ್ತು ವಿದ್ವತ್ತುಗಳನ್ನು ಮನಗಂಡು, ಶೃಂಗೇರಿಯ ಅದ್ವೈತ ಮಠವನ್ನು ಭಕ್ತಿಯಿಂದ ಗೌರವಿಸುತ್ತಿದ್ದರು.

---

೧. ಹೆಚ್ಚಿನ ಮಾಹಿತಿಗಾಗಿ ಲೇಖಕರ 'ಎ ಹಿಸ್ಟೋರಿ ಆಫ್ ಶೃಂಗೇರಿ', ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೮೨ ಮತ್ತು 'ಶೃಂಗೇರಿ ಧರ್ಮಸಂಸ್ಥಾನ', ಶೃಂಗೇರಿ ಮಠ, ೧೯೮೩. ನೋಡಿರಿ.

೨. ಶೃಂಗೇರಿ ಜಗದ್ಗುರು ಪೀಠದಲ್ಲಿ ೨೭ ನೆಯವರಾದ ದ್ವಿತೀಯ ಶ್ರೀ ಸಚ್ಚಿದಾನಂದ ಭಾರತಿಗಳ ಪೀಠಾಧಿಪತ್ಯ, ಕ್ರಿ ಶ. ೧೭೦೫-೧೭೪೧.

೩. ಲೇಖಕರ ಪೂರ್ವೋಲ್ಲೇಖಿತ ಗ್ರಂಥಗಳನ್ನು ಓದಿರಿ.

ಶೃಂಗೇರಿ ಮಠಕ್ಕೆ ಸಂಬಂಧಿಸಿದ ದಿವಾನ ಪೂರ್ಣಯ್ಯನವರ ೩೮ ದಾಖಲೆಗಳು ಶೃಂಗೇರಿ ಮಠದಲ್ಲಿ ದೊರಕಿವೆ.[೪] ಇವುಗಳಲ್ಲಿ ಕ್ರಿ. ಶ ೧೭೯೪ ರ ೩ ದಾಖಲೆಗಳು ಟೀಪುನ ಕಾಲಕ್ಕೆ ಸೇರಿದವುಗಳು. ಇನ್ನುಳಿದ ೩೫ ದಾಖಲೆಗಳು ಕ್ರಿ. ಶ. ೧೮೦೧–೧೮೧೧ ರ ಅವಧಿಯವುಗಳು. ಶಾರದಾಮ್ಮನವರ ನವರಾತ್ರಿ ಉತ್ಸವ ಮತ್ತು ಗುರುಗಳ ಚಾತುರ್ಮಾಸದ ನಿಮಿತ್ತ ಉಡುಗೊರೆ, ಬೆಟ್ಟದ ಮಲ್ಲಿಕಾರ್ಜುನ ಸ್ವಾಮಿಗೆ ಪ್ರಾರ್ಥನೆ ಮಾಡಿದ್ದರಿಂದ ಮಳೆ, ಮಂತ್ರಾಕ್ಷತೆ ತಲುಪಿದ ಸಮಾಚಾರ, ಶ್ರೀಗಳವರ ದರುಶನ ಪಡೆಯುವ ಅಪೇಕ್ಷೆ, ಗುರುಗಳ ಯಾತ್ರಾಕಾಲದಲ್ಲಿ ಪೂರ್ವ ಮರ್ಯಾದೆ ಪ್ರಕಾರ ಸಕಲ ವ್ಯವಸ್ಥೆ, ಶೃಂಗೇರಿ ಸೀಮೆ ರೈತರಿಂದ ಮಠಕ್ಕೆ ಸರಿಯಾಗಿ ಕಂದಾಯ ಸಲ್ಲಿಸುವ ವ್ಯವಸ್ಥೆ, ಸಂಗಮ ಮತ್ತು ಶಿವಗಂಗೆ ಮಠಗಳ ವ್ಯವಹಾರ, ಮಾರ್ಕರ ಜಾತಿ ಧರ್ಮ, ಕಾಣಿಕೆ, ಶಿಷ್ಯರ ಆಚಾರ ವಿಚಾರ, ಶ್ರೀಗಳವರು ಮೈಸೂರಿಗೆ ದಯಮಾಡಿಸುವ ವಿಷಯ, ಅನಾವೃಷ್ಟಿ, ಶೃಂಗೇರಿ ಮಠಕ್ಕೆ ಅಗ್ರ ತಾಂಬೂಲ, ಹರಿಹರಪುರದ ಸ್ವಾಮಿಗಳು ಅಡ್ಡಪಲ್ಲಕ್ಕಿಗೆ ಅನರ್ಹ, ಶ್ರೀಮಠದ ಲೆಕ್ಕಪತ್ರ, ಪುತ್ತಿಗೆ ಮಠದವರು ಪ್ರವರ್ತಿಸಿದ ಅಕ್ರಮವನ್ನು ಸರಿಪಡಿಸುವದು, ತೀರ್ಥಹಳ್ಳಿ ಹೈಗರ ಮಠದ ಸಮಾಚಾರ ಇತ್ಯಾದಿ ವಿಷಯಗಳ ಮೇಲೆ ಪ್ರಸ್ತುತ ದಾಖಲೆಗಳು ಬೆಳಕು ಬೀರುತ್ತವೆ.

ಜಗದ್ಗುರು ಪೀಠದಲ್ಲಿ ಮೂವತ್ತನೆಯವರಾದ ತೃತೀಯ ಶ್ರೀ ಸಚ್ಚಿದಾನಂದ ಭಾರತಿಗಳು (ಪೀಠಾಧಿಪತ್ಯ : ಕ್ರಿ.ಶ. ೧೭೭೦–೧೮೧೪) ದಿವಾನ ಪೂರ್ಣಯ್ಯನವರ ಸಮಕಾಲೀನರು. ಶ್ರೀ ಶಾರದಾಮ್ಮನವರ ನವರಾತ್ರಿ ಉತ್ಸವ ಮತ್ತು ಗುರುಗಳ ಚಾತುರ್ಮಾಸದ ನಿಮಿತ್ತ ಧೋತ್ರದ ಜೋಡಿ ಕಳಿಸಿರುವದಾಗಿ ಮತ್ತು ಶೃಂಗೇರಿಯ ಬೆಟ್ಟದ ಮಲ್ಲಿಕಾರ್ಜುನ ಸ್ವಾಮಿಗೆ ಪ್ರಾರ್ಥನೆ ಸಲ್ಲಿಸಿದ್ದರಿಂದ ಮಳೆ ಬಂದಿರುವದಾಗಿ ಪೂರ್ಣಯ್ಯನವರು ಗುರುಗಳಿಗೆ ಕ್ರಿ. ಶ. ೧೭೯೪ ರಲ್ಲಿ ಬರೆದ ಪತ್ರದಿಂದ ತಿಳಿದು ಬರುತ್ತದೆ[೫] ಗುರುಗಳು ಶಿವಮೊಗ್ಗ ಪ್ರಾಂತ್ಯಕ್ಕೆ ಬಂದಾಗ ತನಗೆ ಗುರುಗಳ ದರುಶನ ಪಡೆಯಬೇಕೆಂಬ ಅಪೇಕ್ಷೆ ಇರುವದಾಗಿಯೂ ಪೂರ್ಣಯ್ಯನವರು ತಿಳಿಸಿದರು.

---

೪. i 'ಶೃಂಗೇರಿ ಶ್ರೀಮಠೀಯ ಪ್ರಾಕ್ತನ ಲೇಖಮಾಲಾ ಸಂಗ್ರಹ' (ಶೃ. ಶ್ರೀ. ಪ್ರಾ. ಲೇ. ಸ.) ಮೈಸೂರು ೧೯೩೭, ದಾ. (ದಾಖಲೆಗಳು) : ೯೨–೧೦೮.

ii ಆನ್ಯುಅಲ್ ರಿಪೋರ್ಟ್ ಆಫ್ ದಿ ಮೈಸೂರು ಆರ್ಕಿಯಾಲಾಜಿಕಲ್ ಡಿಪಾರ್ಟಮೆಂಟ್ (ಎಂ. ಎ. ಆರ್.) ೧೯೧೬.

iii ಎ. ಕೆ. ಶಸ್ತ್ರಿ 'ಎ ಕ್ಯಾಟಲಾಗ್ ಆಫ್ ದಿ ರೆಕಾರ್ಡ್ಸ್ ಇನ್ ದಿ ಶೃಂಗೇರಿ ಮಠ' (ಎಸ್. ಆರ್.), ಪಾರ್ಟ-I, ಅಧ್ಯಾಯ VII. ದಾ ೧–೩೩ ಮತ್ತು ಪಾರ್ಟ-II, ಅಧ್ಯಾಯ V. ದಾ : ೧-೧೭ (ಎರಡನೇ ಭಾಗದಲ್ಲಿರುವ ಈ ದಾಖಲೆಗಳು ಶೃ. ಶ್ರೀ. ಪ್ರಾ. ಲೇ. ಸ. ದಲ್ಲಿ ಪ್ರಕಟವಾಗಿವೆ.)

೫. ಎಸ್. ಆರ್. I, ಅಧ್ಯಾಯ VII, ದಾ. ೧

ಶ್ರೀ ಶಾರದಾಮ್ಮನವರ ನವರಾತ್ರಿ ಮಹೋತ್ಸವದಲ್ಲಿ ಬ್ರಾಹ್ಮಣ ಸಂತರ್ಪಣೆ, ರಥೋತ್ಸವ ಸಾಂಗವಾಗಿ ನಡೆದು, ನರಸಿಂಹ ಶಾಸ್ತ್ರಿಗಳ ಮುಖಾಂತರ ಕಳುಹಿದ ಮಂತ್ರಾಕ್ಷತೆ ಮತ್ತು ಶ್ರೀಮುಖ ತಲುಪಿರುವದಾಗಿ ದಿವಾನರು ಗುರುಗಳಿಗೆ ೧೭೯೪ ರಲ್ಲಿ ಬರೆದರು.೬

ಸ್ವಾಮಿಗಳವರು ತಿರುಪತಿಗೆ ದೇವರ ದರ್ಶನದ ನಿಮಿತ್ತವಾಗಿ ಶೃಂಗೇರಿ ಯಿಂದ ಸಾಗಿ ಬಂದಿರುವದರಿಂದ, ನಿಮ್ಮ ನಿಮ್ಮ ಗಡಿಗಳಲ್ಲಿ, ಪೂರ್ವದ ಮರ್ಯಾದೆ ಪ್ರಕಾರ ಸಕಲ ವ್ಯವಸ್ಥೆಗಳನ್ನು ಮಾಡಿ, ಸ್ವಾಮಿಗಳು ಬಂದ ವಿವರಕ್ಕೆ ತನಗೆ ಬರೆಸಿ ಕಳುಹಿಸಬೇಕಾಗಿ ಪೂರ್ಣಯ್ಯನವರು ೧೮೦೨ ರಲ್ಲಿ ಅರಮನೆ ಸೀಮೆ ಗಡಿಗಳ ಅಮಲ್ದಾರ ಮತ್ತು ಕಿಲ್ಲೆದಾರರಿಗೆ ಆಜ್ಞಾಪಿಸಿದರು.೭

ಶೃಂಗೇರಿ ಸೀಮೆ ರೈತರು ಕಂದಾಯದ ಹಣವನ್ನು ಕೊಡದೇ ಇರುವದರಿಂದ ಸರಿಯಾದ ಕಾನೂನು ಮಾಡಲಾಗಿದೆ. ರೈತರಿಂದ ಬಾಕಿ ಬರುವ ಹಣವನ್ನು ಬರಮಾಡಿಕೊಳ್ಳಬೇಕು. ಗಂಧದ ಕ್ರಯದ ಹಣವನ್ನು ಮಠಕ್ಕೆ ಕೊಡಿಸಿಕೊಡುವ ಹಾಗೆ ನಗರದ ಸುಬೇದಾರ ರಾಮರಾಯರಿಗೆ ಪರವಾನೆ ಕಳುಹಿಸಲಾಗಿದೆ. ತುಂಟ ಜನರನ್ನು ಅಂಕಿತದಲ್ಲಿಡುವಂತೆ ಕೊಪ್ಪದ ಕಿಲ್ಲೆದಾರ ಮತ್ತು ಅಮಲ್ದಾರರಿಗೆ ಪರವಾನೆ ಯನ್ನು ಕಳುಹಿಸಲಾಗಿದೆ. ಕಟ್ಟಳೆ ಮೇರೆಗೆ ಬರತಕ್ಕ ಹಣ, ಹೊನ್ನುಗಳನ್ನು ತರಿಸಿ ಕೊಂಡು, ಸ್ವಾಮಿಗಳ ಅಪ್ಪಣೆ ಪ್ರಕಾರ ದೇವತಾ ಸೇವೆ ಮುಂತಾದ ಧರ್ಮಗಳನ್ನು ನಡೆಸಬೇಕಾಗಿ ದಿವಾನರು ಶೃಂಗೇರಿ ಮಠದ ಪಾರುಪತ್ಯಗಾರ ನರಸಿಂಹ ಶಾಸ್ತ್ರಿಗಳಿಗೆ ೧೮೦೨ ರಲ್ಲಿ ಬರೆದರು.೮

ರಾಜ್ಯಕ್ಕೆ ಅನಾವೃಷ್ಟಿ ಮುಂತಾದ ದೋಷಗಳು ಪ್ರಾಪ್ತವಾಗಿ, ಎಲ್ಲ ಬ್ರಾಹ್ಮಣರೂ ಕೂಡಿ, ಸ್ನಾನ, ಜಪ ಮುಂತಾದ ಸತ್ಕರ್ಮವನ್ನು ಮಾಡಿ, ಅನಾವೃಷ್ಟಿ ದೋಷ ಪರಿಹಾರವಾಗಿ, ಸುವೃಷ್ಟಿ ಆಗಿ, ಜನರು, ದನಕರು ಸಹ ಸೌಖ್ಯದಲ್ಲಿ ಹೇಗಿರಬೇಕೋ ಆ ಪ್ರಕಾರ ಸುವೃಷ್ಟಿ ಆಗುವ ಹಾಗೆ ಮಾಡಿಸಬೇಕು ಎಂದು ದಿವಾನರು ಸ್ವಾಮಿಗಳನ್ನು ೧೮೦೪ ರಲ್ಲಿ ಪ್ರಾರ್ಥಿಸಿಕೊಂಡರು.೯

ಪೂರ್ವಾರಭ್ಯ ನಡೆದು ಬಂದ ಪ್ರಕಾರ, ಶ್ರೀಮಠಕ್ಕೆ ಬರುವಂಥ ದವಸ, ಜವಳಿ ಮುಂತಾದ ಜಿನಸುಗಳಿಗೆ ಸುಂಕ ಕೇಳದೆ ಬಿಡಬೇಕು ಎಂಬುದಾಗಿ ಸುಂಕದ

---

೬. ಎಸ್. ಆರ್. I, ಅಧ್ಯಾಯ VII. ದಾ. ೩

೭. ಎಸ್. ಆರ್. I, ಅಧ್ಯಾಯ VII, ದಾ. ೪

೮. ಎಸ್. ಆರ್. I. ಅಧ್ಯಾಯ VII, ದಾ, ೫

೯. ಎಸ್, ಆರ್. II. ಅಧ್ಯಾಯ V. ದಾ. ೨ ಮತ್ತು ಶೃ. ಶ್ರೀ. ಪ್ರಾ. ಲೇ. ಸ. ೯

ರಾಮರಾಯರಿಗೆ ತಾಕೀತು ಕಳಿಸಿರುವದಾಗಿ ಮತ್ತು ಕೆಲವು ಜನರು ಶ್ರೀಮಠಕ್ಕೆ ಬರುವಂಥ ಜಿನಸು ಎಂಬುದಾಗಿ ಸುಳ್ಳು ಹೇಳುತ್ತ ತಮ್ಮ ತಮ್ಮ ಮನೆಗಳಿಗೆ ತರಿಸಿಕೊಳ್ಳುತ್ತಾರಾದ ಕಾರಣ, ಆ ಪ್ರಕಾರ ಮಠದ ಹೆಸರು ಹೇಳಿಕೊಂಡು ಜಿನಸುಗಳನ್ನು ತೆಗೆದುಕೊಂಡು ಬಾರದ ಹಾಗೆ ತಾವು ಕಟ್ಟಳೆ ಮಾಡಿಸಿರುವದಾಗಿ ಪೂರ್ಣಯ್ಯನವರು ೧೮೦೬ ರಲ್ಲಿ ಸ್ವಾಮಿಗಳಿಗೆ ತಿಳಿಸಿದರು.[೧೦]

ಪೂರ್ಣಯ್ಯನವರು ಶೃಂಗೇರಿ ಮಠದ ಹಿರಿಮೆಯನ್ನು ಸದಾಕಾಲ ಎತ್ತಿ ಹಿಡಿದರೆನ್ನಲು ಕೆಲವು ದಾಖಲೆಗಳು ಸಾಕ್ಷಿಯಾಗಿವೆ. ಮದುವೆ, ಮುಂಜಿ, ಶುಭ-ಶೋಭನಗಳಲ್ಲಿ ಮೊದಲ ತಾಂಬೂಲವನ್ನು ಶೃಂಗೇರಿ ಮಠಕ್ಕೆ ಕೊಟ್ಟು, ಎರಡನೆಯ ತಾಂಬೂಲವನ್ನು ಶಿವಗಂಗೆ ಮಠದವರಿಗೆ ಕೊಡುವಂತೆ ಮತ್ತು ಆಚಾರ ವ್ಯವಹಾರ, ಪ್ರಾಯಶ್ಚಿತ, ಏನಿದ್ದರೂ ಪೂರ್ವಾರಭ್ಯ ನಡೆದು ಬಂದ ಮೇರೆಗೆ ನೋಡಿಕೊಳ್ಳುವಂತೆ ಪೂರ್ಣಯ್ಯನವರು ೧೮೦೭ ರಲ್ಲಿ ಸುಬೇದಾರ ಚಿರಂಜೀವಿ ಮಧ್ವರಾಯರಿಗೆ ಆಜ್ಞಾಪಿಸಿದರು.[೧೧] ಹರಿಹರಪುರದ ಮಠದವರು ಪೂರ್ವಾರಭ್ಯ ಇಲ್ಲದ ಅಡ್ಡಪಲ್ಲಕ್ಕಿ ಹತ್ತಿ ಬಿರುದುಗಳನ್ನು ಏರಿಸಿಕೊಳ್ಳದಂತೆ ಜೋರಾಗಿ ತಾಕೀತು ಮಾಡುವ ಹಾಗೆ ಕೊಪ್ಪದ ಹೋಬಳಿ ಅಮಲ್ದಾರರಿಗೆ ತಾವು ಪರವಾನೆ ಕಳಿಸಿರುವದಾಗಿ ದಿವಾನರು ಶ್ರೀ ಸಚ್ಚಿದಾನಂದ ಭಾರತಿಗಳಿಗೆ ೧೮೦೭ ರಲ್ಲಿ ಅರುಹಿದರು.[೧೨] ಪೂರ್ವಾರಭ್ಯ ಶೃಂಗೇರಿ ಮಠದ ಅಧೀನದಲ್ಲಿರುವ ತೀರ್ಥಹಳ್ಳಿ ಹೈಗ ಮಠದ ಯತೀಶ್ವರರು ಮುಕ್ತರಾಗಲು, ಅಲ್ಲಿ ಅವರ ಶಿಷ್ಯರು ಬಾಲ್ಯದೆಶೆಯಲ್ಲಿರುವಾಗ, ಪುತ್ತಿಗೆ ಮಠದವರು ಪ್ರವರ್ತಿಸಿದ ಅಕ್ರಮವನ್ನು ಸರಿಪಡಿಸಬೇಕಾಗಿ ಪೂರ್ಣಯ್ಯನವರು ಕವಲೆ ದುರ್ಗದ ಅಮಿಲ ಶಂಕರಯ್ಯನವರಿಗೆ ಆಜ್ಞಾಪಿಸಿದರು.[೧೩]

ಜಾತಿ ಧರ್ಮವನ್ನು ಕಟ್ಟುನಿಟ್ಟಾಗಿ ಪಾಲಿಸಲಾಗುತ್ತಿತ್ತೆಂಬುದಕ್ಕೆ ಒಂದು ಉದಾಹರಣೆ ನೀಡಬಹುದು. ಮಾರ್ಕರು ಪೂರ್ವಾರಭ್ಯ ನಡೆದು ಬಂದ ತಮ್ಮ ಜಾತಿಧರ್ಮದ ನಡತೆಗಳನ್ನು ಬಿಟ್ಟು, ಬ್ರಾಹ್ಮರು ನಡೆಯುವಂಥ ನಡತೆಗಳನ್ನೇ ನಡೆಯುತ್ತಾರಾದ ಕಾರಣ, ಈ ಜನ ಯಾವತ್ತೂ ಶೃಂಗೇರಿ ಮಠದ ಶಿಷ್ಯರಿರುವದರಿಂದ ತಮ್ಮ ಜಾತಿ ಧರ್ಮದಲ್ಲಿ ನಡೆಯುವದೇ ಹೊರತು ಬ್ರಾಹ್ಮರ ನಡತೆಗಳ ನಡೆಯದ ಹಾಗೆ ಮಾಡುವದು ಮತ್ತು ಹೆಚ್ಚು ನಡತೆ ಯಾರು ನಡೆಯುತ್ತಾರೋ ಅಂಥವರನ್ನು ಪಹರೆ ಹಾಕಿ ಹಜೂರರಿಗೆ ಕಳುಹಿಸಬೇಕು ಎಂದು ಪೂರ್ಣಯ್ಯನವರು

---

೧೦. ಎಸ್. ಆರ್. II, ಅಧ್ಯಾಯ V, ದಾ. ೩ ಮತ್ತು ಶೃ. ಶ್ರೀ. ಪ್ರಾ. ಲೇ. ಸ. ೯೪

೧೧. ಎಸ್. ಆರ್. II, ಅಧ್ಯಾಯ V, ದಾ. ೬ ಮತ್ತು ಶೃ. ಶ್ರೀ. ಪ್ರಾ. ಲೇ. ಸ. ೯೭

೧೨. ಎಸ್. ಆರ್. II, ಅಧ್ಯಾಯ V, ದಾ. ೮ ಮತ್ತು ಶೃ. ಶ್ರೀ. ಪ್ರಾ. ಲೇ. ಸ. ೧೦೬

೧೩. ಎಸ್. ಆರ್. II, ಅಧ್ಯಾಯ V, ದಾ. ೧೮ ಮತ್ತು ಶೃ. ಶ್ರೀ. ಪ್ರಾ. ಲೇ. ಸ. ೧೦೬

೧೮೦೭ ರಲ್ಲಿ. ಮೈಸೂರು, ತಾಯೂರು, ಹರದನಹಳ್ಳಿ, ಯಳಂದೂರು, ಗುಂಡಲು, ತೆರಕಣಾಂಬಿ ಮುಂತಾದ ಅರಮನೆ ಸೀಮೆ ಗಡಿಗಳ ಕಿಲ್ಲೆದಾರ ಮತ್ತು ಅಮಲ್ದಾರರಿಗೆ ಆಜ್ಞಾಪಿಸಿದರು.[೧೪]

ಸಂಗಮದವರು ಮತ್ತು ಶಿವಗಂಗೆ ಮಠದವರು ಏಕಸ್ಥರಾಗಿ, ರಾಜಭಯ ವಿಲ್ಲದೆ, ಕುದುರೆ ಕಟ್ಟಿಕೊಂಡು ಮಧ್ಯಮಾರ್ಗದಲ್ಲಿ ಅಡ್ಡಿ ಮಾಡಿ ದುರ್ವ್ಯವಹಾರ ಮಾಡಬೇಕೆಂಬ ಯೋಚನೆಯನ್ನು ಬಂದು ಮಾಡಿರುವದರಿಂದ, ಶೃಂಗೇರಿ ಸ್ವಾಮಿ ಗಳು ಬೆಂಗಳೂರಿಗೆ ಮತ್ತು ಶ್ರೀರಂಗ ಪಟ್ಟಣಕ್ಕೆ ಸುಖದಿಂದ ಚಿತ್ತೈಸಬೇಕಾಗಿ ೧೮೦೬ ರಲ್ಲಿ ದಿವಾನರು ಶ್ರೀ ಸಚ್ಚಿದಾನಂದ ಭಾರತಿಗಳಿಗೆ ಬಿನ್ನವತ್ತಳೆ ಕಳುಹಿದರು.[೧೫]

೧೮೦೫ ರಲ್ಲಿ ಸ್ವಾಮಿಗಳು ಮದ್ರಾಸಿಗೆ ಪ್ರಯಾಣ ಮಾಡಿದಾಗ, ಅಲ್ಲಿ ಗವರ್ನರ್‌ರು ಸ್ವಾಮಿಗಳ ದರ್ಶನ ಪಡೆದರು. ಪ್ರಯಾಣದ ಸಕಲ ವ್ಯವಸ್ಥೆಯನ್ನು ಪೂರ್ಣಯ್ಯನವರು ಮಾಡಿದರು. ಮದ್ರಾಸಿನಿಂದ ಮರು ಪ್ರಯಾಣಕ್ಕೆ ಸಂಬಂಧಿಸಿ ಗವರ್ನರ್‌ರು, ಗುರುಗಳಿಗೆ ಸಕಲ ವ್ಯವಸ್ಥೆ ಮತ್ತು ರಕ್ಷಣೆ ನೀಡುವಂತೆ, ರಹದಾರಿ ಹೊರಡಿಸಿದರು.[೧೬] ಗುರುಗಳು ಮದ್ರಾಸಿನಿಂದ ತಿರುಪತಿ, ಕಂಚಿ, ಕಾಳಹಸ್ತಿ, ಮದುರೆ, ರಾಮೇಶ್ವರ, ತ್ರಿವೇಂದ್ರಮ್, ಶ್ರೀರಂಗಪಟ್ಟಣ ಮತ್ತು ಬೆಂಗಳೂರು ಸಂದರ್ಶಿಸಿ ಶೃಂಗೇರಿಗೆ ಬಂದರು.

ಸ್ವಾಮಿಗಳವರು ಮೈಸೂರಿಗೆ ದಯಮಾಡಿಸುವದರಿಂದ ನಿಮ್ಮ ನಿಮ್ಮ ತಾಲೂಕಿನ ಸರಹದ್ದಿಗೆ ಬಂದಲ್ಲಿ, ನೀವು, ಶಿರಸ್ತೆದಾರರು, ಗ್ರಾಮದ ಮಹಾಜನಗಳು, ವರ್ತಕರು, ತಾಳ, ಮೇಳ, ಬಜಂತ್ರಿ ಮುಂತಾಗಿ ಕರೆದುಕೊಂಡು ಹೋಗಿ, ಎದುರು ಗೊಂಡು, ಕರೆದುಕೊಂಡು ಬಂದು ಒಳ್ಳೇ ಸ್ಥಳದಲ್ಲಿ ಇರಿಸಿ, ಪೂರ್ವದ ಮೇರೆಗೆ ಮರ್ಯಾದೆಯಿಂದ ನಡಕೊಂಡು ಬರಬೇಕು ಮತ್ತು ರಾತ್ರಿ ಕಾಲದಲ್ಲಿ ಕಳ್ಳರ ಉಪದ್ರ ಇಲ್ಲದಂತೆ ಬಂದೋಬಸ್ತ ಮಾಡಿಸಬೇಕು ಎಂದು ಪೂರ್ಣಯ್ಯನವರು ಅರಮನೆ ಸೀಮೆ ಗಡಿಗಳ ಅಮಲ್ದಾರ, ಕಿಲ್ಲೆದಾರ, ಜಾಗಿರದಾರ ಮುಂತಾದವರಿಗೆ ನಿರೂಪ ಹೊರಡಿಸಿದರು.[೧೭]

ಶೃಂಗೇರಿ ವಿದ್ಯಾಶಂಕರ ದೇವಸ್ಥಾನದ ಗಚ್ಚು–ಗಾರೆ ಶಿಥಿಲವಾಗಿರುವದರಿಂದ, ಗಚ್ಚಿನ ಕೆಲಸಕ್ಕೆ ಬೇಕಾದ ಆಳುಕಾಳು, ಮಜೂರಿ, ಸುಣ್ಣ ಮತ್ತು ಬೇಕಾದ

---

೧೪. ಎಸ್. ಆರ್. I, ಅಧ್ಯಾಯ VII, ದಾ. ೧೧

೧೫. ಎಸ್. ಆರ್. I, ಅಧ್ಯಾಯ VII, ದಾ. ೮

೧೬. ಶೃ. ಶ್ರೀ. ಪ್ರಾ. ಲೇ. ಸ. ೯೫

೧೭. ಎಸ್. ಆರ್. ಭಾಗ I, ಅಧ್ಯಾಯ VII. ೧೯

ಸಾಮಾನುಗಳನ್ನು ಒಡಗಿಸಿಕೊಡಬೇಕೆಂದು ದಿವಾನರು ಕೊಪ್ಪದ ಅಮಲ್ದಾರ ಮಧ್ವರಾಯರಿಗೆ ೧೮೦೭ ರಲ್ಲಿ ಆಜ್ಞಾಪಿಸಿದರು.[೧೮]

ಶೃಂಗೇರಿ ಮಠಕ್ಕೆ ಅನಾದಿಕಾಲದಾರಭ್ಯ ಶೃಂಗೇರಿ ಗ್ರಾಮಗಳು ತಮ್ಮ ಸ್ವಾಧೀನಕ್ಕೆ ಇನಾಮು ನಡೆದು ಬಂದಿರುವದರಿಂದ, ಸದರಿ ಗ್ರಾಮುಗಳಲ್ಲಿ ತಾವು ವೃತ್ತಿಗಳ ನಿಬಂಧನೆ ಮಾಡಿ, ಗ್ರಾಮುವನ್ನು ಮಹಾಜನರು, ಬ್ರಾಹ್ಮಣರು ಮುಂತಾದವರಿಗೆ ಕೊಟ್ಟಿರುವಿರಿ. ಆ ಜನರು ಒಂದು ವೇಳೆ ತಮ್ಮ ಅಪ್ಪಣೆ ಪ್ರಕಾರ ಶುಶ್ರೂಷೆ ಮಾಡಿ ನಡೆಯದೆ ತಕರಾರು ಮಾಡಿದಲ್ಲಿ, ಸದರಿ ಇನಾಮು ಇರುವ ಗ್ರಾಮಗಳನ್ನು ಅಂಥವರಿಗೆ ನಡೆಸುವ ಅವಶ್ಯವಿಲ್ಲ ಎಂದು ಪೂರ್ಣಯ್ಯನವರು ೧೮೧೦ ರಲ್ಲಿ ಸ್ವಾಮಿಗಳಿಗೆ ತಿಳಿಸಿದರು.[೧೯]

ಸೀಮೆಯ ಬಂದೋಬಸ್ತಿನ ಬಗ್ಗೆ ಮಠದಲ್ಲಿ ಇರಬೇಕು. ಸೀಮೆಯ ಸಾಗುಸಂತು, ಮತ್ತು ಬಾಕಿ ಬರತಕ್ಕ ಹಣವನ್ನು ನಿರ್ದಾಕ್ಷಿಣ್ಯದಿಂದ ಬರಮಾಡಿಕೊಂಡು, ಶ್ರೀಮಠದ ಕೆಲಸಕ್ಕೆ ಅನುಕೂಲವಾಗುವಂತೆ ಮಾಡಿಸಬೇಕು. ಶ್ರೀಮಠದ ಖರ್ಚು-ವೆಚ್ಚವನ್ನು ಶ್ರೀಗಳವರ ಆಜ್ಞೆ ಮೇರೆಗೆ ಮಾಡಬೇಕೆಂದು ಶೃಂಗೇರಿ ಮಠದ ಸುಬೇದಾರ ಮಲ್ಲಪ್ಪಯನವರಿಗೆ ಪೂರ್ಣಯ್ಯನವರು ೧೮೧೦ ರಲ್ಲಿ ಆಜ್ಞಾಪಿಸಿದರು.[೨೦]

ಮೈಸೂರಿನ ದಿವಾನ ಪೂರ್ಣಯ್ಯನವರು ಶೃಂಗೇರಿ ಜಗದ್ಗುರುಗಳಾದ ತೃತೀಯ ಶ್ರೀ ಸಚ್ಚಿದಾನಂದ ಭಾರತೀ ಸ್ವಾಮಿಗಳನ್ನು ಮತ್ತು ಅವರ ಮಠವನ್ನು ಗೌರವಿಸುತ್ತಿದ್ದರೆಂಬುದು ಮೇಲ್ಕಾಣಿಸಿದ ಪೂರ್ಣಯ್ಯನವರ ಕಾಗದಗಳಿಂದ ಸ್ಪಷ್ಟವಾಗುತ್ತದೆ. ಹೆಚ್ಚಿನ ಬಿರುದು-ಬಾವಲಿಗಳಿಗೆ ಶೃಂಗೇರಿ ಮಠವೊಂದೇ ಅರ್ಹ ಎಂಬುದನ್ನು ಪೂರ್ಣಯ್ಯನವರು ಇತರ ಮಠಗಳಿಗೆ ತಿಳಿಸಿದರು. ಮಠಕ್ಕೆ ರೈತರಿಂದ ಸಲ್ಲಬೇಕಾದ ಕಂದಾಯ, ಶಿಷ್ಯರ ಆಚಾರ ವಿಚಾರ, ವಿದ್ಯಾಶಂಕರ ದೇವಾಲಯದ ದುರಸ್ತಿ ಕೆಲಸ, ಜಾತಿ-ಧರ್ಮ ವಿಚಾರ, ಗುರುಗಳ ಯಾತ್ರೆ, ಮೊದಲಾದ ಶ್ರೀಮಠಕ್ಕೆ ಸಂಬಂಧಿಸಿದ ಸಕಲ ವಿಷಯಗಳಲ್ಲೂ ಪೂರ್ಣಯ್ಯನವರು ವಿಶೇಷ ಆಸಕ್ತಿವಹಿಸುತ್ತಿದ್ದರು. ಪೂರ್ಣಯ್ಯನವರು ಗುರುಗಳಿಗೆ ಮತ್ತು ಇನ್ನಿತರ ಅಧಿಕಾರಿಗಳಿಗೆ ಬರೆದ ಪತ್ರಗಳು ಕನ್ನಡದಲ್ಲಿವೆ. ದಾಖಲೆಗಳು ಗುರುಗಳ ಸಕಲ ಬಿರುದಾವಳಿಗಳಿಂದ ಪ್ರಾರಂಭವಾಗಿ, 'ಬಿಂನಹ' ಎಂಬ ಶಬ್ದದಿಂದ ಮುಕ್ತಾಯವಾಗುತ್ತವೆ.

---

೧೮. ಎಸ್. ಆರ್. ಭಾಗ I, ಅಧ್ಯಾಯ VII, ೧೫

೧೯. ಎಸ್. ಆರ್. ಭಾಗ II, ಅಧ್ಯಾಯ V, ೧೪

೨೦. ಎಸ್. ಆರ್. ಭಾಗ I, ಅಧ್ಯಾಯ VII, ೨೨

ಕೆಲವೊಂದು ದಾಖಲೆಗಳ ಕೊನೆಯಲ್ಲಿ 'ರುಜು ಶ್ರೀ' ಎಂದು ಉಲ್ಲೇಖಿಸಲಾಗಿದೆ. ಜಗದ್ಗುರುಗಳು ಪೂರ್ಣಯ್ಯನವರಿಗೆ ಬರೆದ ಪತ್ರಗಳು ಮಠದಲ್ಲಿ ದೊರಕಿಲ್ಲ. ಕಾಲ ಸರಿದಂತೆ, ಮಠದಲ್ಲಿಯ ಸಹಸ್ರಾರು ದಾಖಲೆಗಳು ಕಳೆದು ಹೋಗಿವೆ, ಇಲ್ಲವೆ ನಶಿಸಿವೆ.[೨೧] ಮೈಸೂರಿನಲ್ಲಿ, ಮುಂದೆ ಅರಸೊತ್ತಿಗೆಯ ಜವಾಬ್ದಾರಿ ವಹಿಸಿಕೊಂಡ ಮುಮ್ಮಡಿ ಕೃಷ್ಣರಾಜ ಒಡೆಯರೂ ಶೃಂಗೇರಿ ಜಗದ್ಗುರುಗಳನ್ನು ಮತ್ತು ಅವರ ಮಠವನ್ನು ಅತ್ಯಂತ ಭಕ್ತಿಯಿಂದ ಕಂಡರೆಂದು ಚರಿತ್ರೆಯಿಂದ ತಿಳಿದು ಬರುತ್ತದೆ.

---

೨೧. ಶೃಂಗೇರಿ ಮಠದ ಕಡತಗಳನ್ನು, ಮೈಸೂರಿನ ಅರಮನೆಯ ಮತ್ತು ಯಳಂದೂರಿನ ದಾಖಲೆಗಳನ್ನು ಪರಿಶೀಲಿಸಿದರೆ ಪ್ರಸ್ತುತ ವಿಷಯಕ್ಕೆ ಸಂಬಂಧಿಸಿ ಇನ್ನೂ ಹೆಚ್ಚಿನ ಮಾಹಿತಿ ದೊರೆಯಬಹುದು.

# ಶೃಂಗೇರಿ

ನಮಿಸುವೆನು ಶಿರಬಾಗಿ ನಾ ನಿನಗೆ ಜಗದಂಬೆ
ಕರುಣಿಸೆನ್ನನು ಶೃಂಗಗಿರಿ ಶಾರದಾಂಬೆ

ತಪವನಾಚರಿಸಿದರು ಋಷ್ಯಶೃಂಗರು ಇಲ್ಲಿ
ತಂಗಿದರು ಮುಂದೆಲ್ಲ ಮುನಿವರ್ಯರಿಲ್ಲಿ

ಸರಸ್ವತಿಯ ಶಂಕರರು ಸ್ಥಾಪಿಸಿದರಿಲ್ಲಿ
ವಾಗ್ದೇವಿ ಶಾರದೆಯು ನೆಲೆಸಿದಳು ಇಲ್ಲಿ

ಸರ್ವಜ್ಞ ಪೀಠವನ್ನಾರೋಹಿಸಿದ ಶಂಕರರು
ಧರ್ಮಜಾಗೃತಿಗೊಳಿಸಿ ಐಕ್ಯತೆಗೆ ಶ್ರಮಿಸಿದರು

ದಕ್ಷಿಣಕೆ ಶೃಂಗೇರಿ, ಬದರಿ ಉತ್ತರದಲ್ಲಿ
ಪಶ್ಚಿಮಕೆ ದ್ವಾರಕಾ, ಜಗನ್ನಾಥ ಪೂರ್ವದಲಿ

ಆದಿಶಂಕರರಿಂದ ಶುರುವಾಯ್ತು ಪರಂಪರೆಯು
ಅವಿಚ್ಛಿನ್ನ ಸಾಗಿಹುದು ಗುರುಪರಂಪರೆಯು

ವಿದ್ಯಾತೀರ್ಥ ಭಾರತೀತೀರ್ಥ ತಪೋಭೂಮಿಯಲ್ಲಿ
ಯೋಗ ಸಾಮ್ರಾಜ್ಯವನ್ನಾಳಿದರು ವಿದ್ಯಾರಣ್ಯರಿಲ್ಲಿ

ಸ್ವಾಮಿ ವಿದ್ಯಾರಣ್ಯ ನೀಡಿದರು ಪಂಚಲೋಹದ ಮೂರ್ತಿ
ಭಾರತದಲ್ಲೆಲ್ಲ ಪಸರಿಸಿತು ಶಾರದಾಂಬೆಯು ಕೀರ್ತಿ

ನಮಿಸಿದರು ಜಗದ್ಗುರುಗಳಿಗೆ ಸಮ್ರಾಟರೆಲ್ಲ
ಅನುಗ್ರಹಿಸಿದರು ಕೃಪೆಯನ್ನು ಜಗದ್ಗುರುಗಳೆ

ವಿಜಯನಗರ ಕೆಳದಿ ಮೈಸೂರು ಅರಸುಗಳು
ಭೂದಾನ ಮಾಡಿದರು ಭಾರತದ ದೊರೆಗಳು

ಶೃಂಗೇರಿ ಮಠ ಬೆಳೆದು ಉಚ್ಛ್ರಾಯವಾಯ್ತು
"ಧರ್ಮಸಂಸ್ಥಾನ"ದ ಕೀರ್ತಿ ಅದರದಾಯ್ತು

ಸಾಹಿತ್ಯ ಶಿಲ್ಪಕಲೆಗಳಾಕರವು ಶೃಂಗಗಿರಿ
ಧರ್ಮ ಮಾರ್ಗದ ದಾರಿ ತೋರಿಸುವ ಶೃಂಗೇರಿ

ಯಥೋಕ್ತ ಬಿರುದಾಂಕಿತ ಜಗದ್ಗುರುವರ್ಯರು
ಭಕ್ತಿಕರ್ಮಜ್ಞಾನ ಮಾರ್ಗಗಳಧ್ವರ್ಯರು

"ಬ್ರಹ್ಮವೊಂದೇ ಸತ್ಯ ಈ ಜಗವು ಮಿಥ್ಯ"
ಅದ್ವೈತ ಸಿದ್ಧಾಂತ ಜಗದಲ್ಲಿ ಸತ್ಯ

# ಆದರ್ಶ ಪ್ರಾಧ್ಯಾಪಕ

ಎ. ಕೆ. ಶಾಸ್ತ್ರಿಯವರು ೧೯೬೪ ರಲ್ಲಿ ಎಂ. ಎಂ. ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯದಲ್ಲಿ ಇತಿಹಾಸದ ಉಪನ್ಯಾಸಕರಾಗಿ ಸೇರಿದಾಗಿನಿಂದ ಇಂದಿನವರೆಗೆ (೧೯೯೮) ಅವರು ಬೇರೆ ಬೇರೆ ಸ್ಥಾನಗಳನ್ನಲಂಕರಿಸಿ ಸಂಸ್ಥೆಗೆ ಅಪಾರವಾದ ಸೇವೆ ಸಲ್ಲಿಸಿದ್ದಾರೆ. ವಿಶ್ವವಿದ್ಯಾಲಯದ ಪ್ರಸಿದ್ಧ ಆಟಗಾರರಾಗಿ, ಅಥ್ಲೆಟಿಕ್ ತರಬೇತಿ ಶಿಬಿರದಲ್ಲಿ ರಾಜ್ಯಕ್ಕೆ ಪ್ರಥಮ ಸ್ಥಾನ ಪಡೆದು, ಎನ್. ಸಿ. ಸಿ. ನೌಕಾದಳದ ಅಧಿಕಾರಿಗಳಾಗಿ, ಶ್ರೇಷ್ಠ ವಾಗ್ಮಿಗಳಾಗಿ, ಕವಿಗಳಾಗಿ, ಸಮಾಜ ಸೇವಕರಾಗಿ, ಪ್ರತಿಭಾವಂತ ಆದರ್ಶ ಪ್ರಾಧ್ಯಾಪಕರಾಗಿ, ಪ್ರಸಿದ್ಧ ಇತಿಹಾಸ ಸಂಶೋಧಕರಾಗಿ ರಾಜ್ಯ ಮತ್ತು ರಾಷ್ಟ್ರಮಟ್ಟದ ಇತಿಹಾಸ ಸಮ್ಮೇಳನಗಳಲ್ಲಿ ವಿದ್ವತ್ಪೂರ್ಣ ಪ್ರಭಾವಶಾಲಿ ಉಪನ್ಯಾಸಗಳನ್ನು ನೀಡಿ ಪ್ರಖ್ಯಾತರಾಗಿದ್ದಾರೆ. ೧೯೯೭ ರ ಅಕ್ಟೋಬರ ತಿಂಗಳಿನಲ್ಲಿ ಸ್ವರ್ಣವಲ್ಲೀ ಮಠದ ಶ್ರೀ ಶ್ರೀ ಗಂಗಾಧರೇಂದ್ರ ಸರಸ್ವತೀ ಸ್ವಾಮಿಗಳವರ ಆಶ್ರಯದಲ್ಲಿ ಶಿರಸಿಯಲ್ಲಿ ನಡೆದ ಕರ್ನಾಟಕ ಇತಿಹಾಸ ಅಕಾಡೆಮಿಯ ೧೧ನೆಯ ಸಮ್ಮೇಳನದಲ್ಲಿ ಡಾ. ಎ. ಕೆ. ಶಾಸ್ತ್ರಿಯವರು ಪ್ರಧಾನ ಕಾರ್ಯದರ್ಶಿಗಳಾಗಿ ಕಾರ್ಯ ನಿರ್ವಹಿಸಿ, ವಿದ್ವತ್ಪೂರ್ಣ ಉಪನ್ಯಾಸ ನೀಡಿ, ಸಕಲ ವಿದ್ವಾಂಸರಿಂದ ಮೆಚ್ಚುಗೆ ಪಡೆದು, ಸ್ವರ್ಣವಲ್ಲೀ ಮಹಾಸಂಸ್ಥಾನಕ್ಕೆ ಸಂಬಂಧಿಸಿದ ಐತಿಹಾಸಿಕ ಗ್ರಂಥಗಳನ್ನು ರಚಿಸಿದ್ದಕ್ಕಾಗಿ, ಶ್ರೀಗಳವರಿಂದ ಸನ್ಮಾನಿಸಲ್ಪಟ್ಟಿದ್ದಾರೆ. ಇತಿಹಾಸಕ್ಕೆ ಸಂಬಂಧಿಸಿದ ಅನೇಕ ಸಂಶೋಧನಾತ್ಮಕ ಗ್ರಂಥಗಳನ್ನು ಮತ್ತು ಲೇಖನಗಳನ್ನು ಬರೆದ ಶಾಸ್ತ್ರಿಯವರು ಕಳೆದ ಮೂರು ದಶಕಗಳಿಂದ ನನ್ನೊಂದಿಗೆ ಮತ್ತು ಮಾಡರ್ನ್ ಎಜ್ಯುಕೇಶನ್ ಸೊಸೈಟಿಯ ವ್ಯವಸ್ಥಾಪಕ ಮಂಡಲಿಯ ಸದಸ್ಯರೊಂದಿಗೆ ಸಂಸ್ಥೆಗೆ ಸಂಬಂಧಿಸಿದ ಶೈಕ್ಷಣಿಕ ಮತ್ತು ಇನ್ನಿತರ ರಚನಾತ್ಮಕ ಕಾರ್ಯಗಳಲ್ಲಿ ಸಹಕರಿಸಿದ್ದಾರೆ. ಶೃಂಗೇರಿ ಮಠದ ವಸ್ತುನಿಷ್ಠವಾದ ಚರಿತ್ರೆಯನ್ನು ಬೆಳಕಿಗೆ ತಂದ ಕೀರ್ತಿ ಇವರದಾಗಿದೆ. ನಿವೃತ್ತಿ ಜೀವನದಲ್ಲಿ ಡಾ. ಎ. ಕೆ. ಶಾಸ್ತ್ರಿಯವರಿಗೆ ಒಳ್ಳೆಯ ಆರೋಗ್ಯ, ಸುಖ ಮತ್ತು ಶಾಂತಿ ನೀಡಲೆಂದು ಪರಮಾತ್ಮನಲ್ಲಿ ಪ್ರಾರ್ಥಿಸುವೆ.

**ವಿ. ಎಸ್. ಸೋಂದೆ**
ಅಧ್ಯಕ್ಷರು, ಎಂ.ಇ. ಸೊಸೈಟಿ
ಶಿರಸಿ (ಉ.ಕ.)

# ಪರಮಾಪ್ತ ಮಿತ್ರ

ನನ್ನ ಪರಮಾಪ್ತ ಮಿತ್ರ ಡಾ. ಎ. ಕೆ. ಶಾಸ್ತ್ರಿಗಳಿಗೆ ದಿನಾಂಕ ೨೭-೩-೧೯೯೮ ರಂದು ಅಭಿನಂದನಾ ಸಮಾರಂಭದೊಂದಿಗೆ ಅಭಿನಂದನಾ ಗ್ರಂಥ ಹೊರತರಲಿರುವುದು ಕೇಳಿ ಹಿಡಿಸಲಾರದಷ್ಟು ಆನಂದವಾಯಿತು. ಅವರಿಗೆ ನನ್ನ ಅಭಿನಂದನೆಗಳು.

ಡಾ. ಶಾಸ್ತ್ರಿಗಳು ಸರಳ ಹಾಗೂ ಸೌಜನ್ಯ ಸ್ವಭಾವದವರು; ಇತಿಹಾಸ ಸಂಶೋಧನೆಯಲ್ಲಿ ಆಸಕ್ತಿಯನ್ನು ಬೆಳೆಸಿಕೊಂಡ ಪ್ರಾಮಾಣಿಕ ಘನವಿದ್ವಾಂಸರು. ಮಹಾನ್ ಯೋಗಿವರ್ಯ ಶ್ರೀ ಶ್ರೀಧರ ಸ್ವಾಮಿಗಳವರಿಗೆ ಇವರ ತಂದೆಯೇ ಪಾಠ ಹೇಳಿದವರು (ಪೂರ್ವಾಶ್ರಮದಲ್ಲಿ). ಇಂತಹ ಪರಂಪರೆಯುಳ್ಳ ಡಾ. ಶಾಸ್ತ್ರಿಗಳಿಗೆ ಸಹಜವಾಗಿಯೇ ಪ್ರಾಚೀನ ಕಡತಗಳಲ್ಲಿರುವ ನೂತನ ಇತಿಹಾಸ ಕುರಿತು ನನ್ನಲ್ಲಿ ಕನ್ನಡ ಮೋಡಿ ಲಿಪಿ ಕಲಿಯುವಂತಾಯಿತು. ಇದರ ಫಲವಾಗಿಯೇ ಡಾ. ಶಾಸ್ತ್ರಿಗಳಿಗೆ ಶೃಂಗೇರಿಯ ಮಠದ ಚಾರಿತ್ರಿಕ ದಾಖಲೆಗಳು ಆಕರವನ್ನಾಗಿ ಮಾಡಿ ಕೃತಿ ರಚನೆಗೆ ಅಪೂರ್ವ ಕೊಡುಗೆಯಾಯಿತು. ಪೂಜ್ಯ ಶ್ರೀ ವಿದ್ಯಾತೀರ್ಥಸ್ವಾಮಿಗಳ ಅನುಗ್ರಹ, ಪ್ರೊ. ಜಿ. ಎಸ್. ದೀಕ್ಷಿತರ ಹಾಗೂ ಡಾ. ದೇಶಿಕಾಚಾರ್‌ರವರ ಸಹಕಾರವೂ ಈ ದಿಸೆಯಲ್ಲಿ ಮರೆಯುವಂತಿಲ್ಲ. ಶ್ರೀ ಶೃಂಗೇರಿ ಹಾಗೂ ಸ್ವರ್ಣವಲ್ಲಿ ಮಠಗಳ ಚಾರಿತ್ರಿಕ ದಾಖಲೆ ಪರಿಶೋಧನೆಯಲ್ಲಿ ಬೆಳಕು ಕಂಡ ಡಾ. ಶಾಸ್ತ್ರಿಗಳ ಕೃತಿಗಳು ಮುಂದಿನ ಸಂಶೋಧನೆಗೆ ಅಪೂರ್ವ ಆಕರಗಳು. ಡಾ. ಶಾಸ್ತ್ರಿಗಳಿಂದ ಇನ್ನೂ ಹೆಚ್ಚಿನ ಸಂಶೋಧನಾತ್ಮಕ ಕೃತಿಗಳು ಹೊರಬರಲೆಂದು ಹಾರೈಸುವೆನು.

**ಕೆಳದಿ ಗುಂಡಾಜೋಯಿಸ್**
ಕೆಳದಿ ವಸ್ತು ಸಂಗ್ರಹಾಲಯ ಮತ್ತು ಸಂಶೋಧನಾ ಕೇಂದ್ರ, ಕೆಳದಿ

# ಆತ್ಮೀಯ ಗೆಳೆಯ ವಿದ್ವಾಂಸ

ಗೆಳೆಯರೂ ವಿದ್ವಾಂಸರೂ ಆದ ಡಾ. ಎ. ಕೆ. ಶಾಸ್ತ್ರಿ ಅವರು ನನ್ನ ವರ್ಗ ಮಿತ್ರರು. ನಾನು ಎಂ.ಎ. ಯಲ್ಲಿ ಓದುತ್ತಿದ್ದಾಗ ಅವರು ನನ್ನ ಜ್ಯೂನಿಯರ್ ಸಹಪಾಠಿ. ನಮಗೆ ಆಗ ಜಂಟಿ ವರ್ಗಗಳಾಗುತ್ತಿದ್ದವು. ಒಳ್ಳೆಯ ಕ್ರೀಡಾಪಟು ಆದ ಡಾ. ಶಾಸ್ತ್ರಿಯವರು ನಮ್ಮ ಗುರುಗಳಾಗಿದ್ದ ಡಾ. ಸಾಲತೊರೆ ಮತ್ತು ಡಾ. ದೀಕ್ಷಿತರ ಮಾರ್ಗದರ್ಶನದಲ್ಲಿ ವಿದ್ವತ್ತಿನ ಬೆನ್ನು ಹಿಡಿದರು. ಶೃಂಗೇರಿ ಮಠದ ದಾಖಲೆಗಳು ಸಾರ್ವಜನಿಕರಿಗೆ ಸಿಗುವಂತೆ ಆದುದು ಅವರ ಗಣ್ಯಸಾಧನೆ. ಇಂಥ ಕಾಗದಪತ್ರಗಳ ಅನ್ವೇಷಣೆಯನ್ನು ಸತತವಾಗಿ ಮುಂದುವರಿಸಿದರು. ಸೋಂದಾ ಸ್ವರ್ಣವಲ್ಲಿ ಮಠದ ದಾಖಲೆಗಳನ್ನು ಬೆಳಕಿಗೆ ತಂದರು.

ಕಾಗದ ಪತ್ರಗಳನ್ನು (ಆರ್ಕಿವಲ್ ಮೆಟಿರಿಯಲ್) ಬಳಸಿ ಡಾಕ್ಟರೇಟ್ ಪಡೆದ ನಮ್ಮ ತಲೆಮಾರಿನವರಲ್ಲಿ ಡಾ. ಕೆ. ಜಿ ವಸಂತಮಾಧವ ಮತ್ತು ಡಾ. ಶಾಸ್ತ್ರಿ ಉಲ್ಲೇಖನೀಯರು. ಇವರುಗಳು ರಾಜ್ಯ ಪತ್ರಾಗಾರದ ಉಪನಿರ್ದೇಶಕ ಹುದ್ದೆಗೆ ಯತ್ನಿಸಿದಾಗ ಅವರ ಆಯ್ಕೆ ಆಗದ್ದು ಒಂದು ವಿಪರ್ಯಾಸ. ಇದರಿಂದ ನಷ್ಟ ಆದದ್ದು ಪತ್ರಾಗಾರ ಇಲಾಖೆಗೆ, ಇವರಿಗಲ್ಲ.

ಇವರ ವಿದ್ವತ್ತಿಗೆ ಅವರ ಪರಿಸರದ ಜನರಿಂದ ಆರಂಭದಲ್ಲಿ ಬೆಂಬಲ ಸಿಗಲಿಲ್ಲ. ಆದರೆ ಈಗ ಜನ ಅವರನ್ನು ಗುರುತಿಸಿದ್ದಾರೆ; ಗೌರವಿಸಿದ್ದಾರೆ. ಈಗ ಪೂರ್ಣಕಾಲ ಸಂಶೋಧಕರಾಗಲು ಅವರ ನಿವೃತ್ತ ಜೀವನ ಅವರಿಗೆ ಅವಕಾಶ ಒದಗಿಸಲಿದೆ. ಅದು ಸದುಪಯೋಗವಾಗಲಿ. ಅವರಿಂದ ನಾಡಿನ ಇತಿಹಾಸಕ್ಕೆ ಇನ್ನೂ ಹೆಚ್ಚಿನ ಕೊಡುಗೆ ಸಲ್ಲಲಿ.

ಡಾ ಶಾಸ್ತ್ರಿಯವರ ಸೌಭಾಗ್ಯವತಿ ಸೌಜನ್ಯಶೀಲೆ, ಆತಿಥ್ಯಕ್ಕೆ ಹೆಸರಾದವರು. ಈ ಕುಟುಂಬಕ್ಕೆ ಇವರ ನಿವೃತ್ತ ಜೀವನದಲ್ಲಿ ನೆಮ್ಮದಿ ಪಡೆಯಲೆಂದು ಹಾರೈಸುವೆ.

**ಡಾ. ಸೂರ್ಯನಾಥ ಕಾಮತ್**
ಇತಿಹಾಸ ಪ್ರಾಧ್ಯಾಪಕರು,
ಬೆಂಗಳೂರು ವಿಶ್ವವಿದ್ಯಾಲಯ

## ಸಂಶೋಧಕ ಮಿತ್ರ

ಟೊಣ್ಣೆಮನೆ ಶಾಸ್ತ್ರಿಯವರ ಪರಿಚಯವಾದದ್ದು ೧೯೫೯ ರಲ್ಲಿ. ಇವರು ಮೊದಲು ಉತ್ತಮ ಆಟಗಾರರಾಗಿ ಬೆಳಕಿಗೆ ಬಂದರು. ಇವರ ಚಟುವಟಿಕೆಯು ತುಂಬಾ ಆಕರ್ಷಣೀಯವಾಗಿತ್ತು.

೧೯೬೧ ರಲ್ಲಿ ಶಾಸ್ತ್ರಿಯವರು ಕರ್ನಾಟಕ ವಿಶ್ವವಿದ್ಯಾಲಯದ ಇತಿಹಾಸ ವಿಭಾಗದ ಎಂ.ಎ. ತರಗತಿಗೆ ಸೇರಿ ೧೯೬೩ ರಲ್ಲಿ ಉತ್ತಮ ಶ್ರೇಣಿಯಲ್ಲಿ ಪಾಸಾದರು. ಇತಿಹಾಸದ ಅಧ್ಯಯನದಲ್ಲಿ ಫ್ರಾನ್ಸಿನ ಮಹಾ ಕ್ರಾಂತಿ ಇವರಿಗೆ ತುಂಬಾ ಮೆಚ್ಚುಗೆ ಯನ್ನುಂಟು ಮಾಡಿತ್ತು. ೧೯೬೪ ರಿಂದ ಇವತ್ತಿನವರೆಗೆ ಶಾಸ್ತ್ರಿಯವರು ಶಿರಸಿ ಕಾಲೇಜಿನಲ್ಲಿ ಉತ್ತಮ ಪ್ರಾಧ್ಯಾಪಕ ಮತ್ತು ಸಂಶೋಧಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಶಾಸ್ತ್ರಿಯುವರ ಸಂಶೋಧನೆ ಭಾರತದ ಇತಿಹಾಸ ಅಧ್ಯಯನದಲ್ಲಿ ಒಂದು ಹೊಸ ದಾರಿ ಯನ್ನು ಮಾಡಿಕೊಟ್ಟಿದೆ. ಇವರ ಸಂಶೋಧನಾ ವೈಖರಿ ಭಾರತೀಯ ಇತಿಹಾಸ ಸಂಶೋಧಕರ ಮೆಚ್ಚುಗೆ ಗಳಿಸಿಕೊಂಡಿದೆ.

ಶ್ರೀ ಎ. ಕೆ. ಶಾಸ್ತ್ರಿಯವರು ೧೯೭೦ ರ ದಶಕದಲ್ಲಿ ಸಂಶೋಧನಾ ಕ್ಷೇತ್ರದಲ್ಲಿ ಭಾಗವಹಿಸಿ ಮುಂದೆ ಇದರಲ್ಲಿ ಅತ್ಯಂತ ಹೆಸರು ಪಡೆದರು. ಇವರ ಸಂಶೋಧನಾ ವಿಷಯ A History of Sringeri ಈ ಗ್ರಂಥಕ್ಕೆ ೧೯೭೬ ರಲ್ಲಿ ಕರ್ನಾಟಕ ವಿಶ್ವ ವಿದ್ಯಾಲಯದಿಂದ ಪಿಎಚ್ ಡಿ. ಪದವಿ ಬಂತು. ಆದರೆ ಇವರ ಸಂಶೋಧನಾ ಕೆಲಸ ಇಲ್ಲಿಗೆ ನಿಲ್ಲಲಿಲ್ಲ. ಸಂಶೋಧನೆ, ಸಂಶೋಧನದ ವಿಷಯ ಮಂಡನೆ ಮತ್ತು ಇವುಗಳ ಪ್ರತಿಪಾದನೆಯನ್ನು ಇತಿಹಾಸ ಸಮ್ಮೇಳನಗಳಲ್ಲಿ ಶ್ರೀಯುತರು ಮಂಡಿಸಿ ವಿದ್ವಾಂಸರ ಗೌರವಕ್ಕೆ ಪಾತ್ರರಾದರು. ಇವರು ಸಂಶೋಧನೆಯಲ್ಲಿ ನಡೆಸಿದ ಮುಖ್ಯ ಕೆಲಸ ಅಪ್ರಕಟಿತ ದಾಖಲೆಗಳಾದ ಕಡಿತ (ಕಡತ) ಮತ್ತು ಕಾಗದ ಪತ್ರಗಳನ್ನು ಬೆಳಕಿಗೆ ತಂದದ್ದು. ಡಾ. ಶಾಸ್ತ್ರಿಗಳ ಪ್ರಮುಖ ಉಪಯುಕ್ತ ಸಂಶೋಧನಾ ಗ್ರಂಥಗಳಾವು ವೆಂದರೆ ಶೃಂಗೇರಿ ಧರ್ಮಸಂಸ್ಥಾನ (೧೯೮೩), ಶಿರಸಿ ತಾಲೂಕಿನ ಇತಿಹಾಸ (೧೯೮೮) A Catalogue of the Records of the Sringeri Mutt (ಬೆಂಗಳೂರು ೧೯೯೬), ಮಂಜುಗುಣಿ ಕ್ಷೇತ್ರದ ಚಾರಿತ್ರಿಕ ದಾಖಲೆಗಳು (೧೯೯೭) ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನದ ಐತಿಹಾಸಿಕ ದಾಖಲೆಗಳು (೧೯೯೭), ಸ್ವರ್ಣವಲ್ಲಿ ಮಹಾಸಂಸ್ಥಾನದ ಚರಿತ್ರೆ (೧೯೯೭) ಇದರೊಂದಿಗೆ ಕೆಲವು ಸಂಶೋಧನಾ ಲೇಖನಗಳನ್ನು ಭಾರತೀಯ ನಿಯತಕಾಲಿಕ ಪತ್ರಿಕೆಯಲ್ಲಿ ಬರೆದು ಪ್ರಕಟಿಸಿದ್ದಾರೆ. ಇದಲ್ಲದೇ Karnataka Historical Review xxvi ಸಂಚಿಕೆಯನ್ನು ಉತ್ತಮ ರೀತಿಯಲ್ಲಿ ಸಂಪಾದಿಸಿ ಪ್ರಕಟಿಸಿದ್ದಾರೆ.

ಡಾ. ಶಾಸ್ತ್ರಿಯವರು ಇತಿಹಾಸ ಸಂಶೋಧನೆಗೆ ನೀಡಿದ ಮುಖ್ಯ ಕೊಡುಗೆ ಕಡತ ಮತ್ತು ದಾಖಲೆ ಪತ್ರಗಳ ತಪಾಸಣೆ, ಸಂಗ್ರಹ, ಸಂಪಾದನೆ ಮತ್ತು ಇವುಗಳ ಅಧ್ಯಯನ. ಇದರಿಂದಾಗಿ ಆಧುನಿಕ ಆದಿಭಾಗದ ಕರ್ನಾಟಕ ಇತಿಹಾಸಕ್ಕೆ ಹೊಸ ಇತಿಹಾಸ ಸಾಮಗ್ರಿಗಳು ಬೆಳಕಿಗೆ ಬಂದಿವೆ. ವಿಷಯ ನಿರೂಪಣೆಯಲ್ಲಿ ಸ್ಪಷ್ಟತೆ ಮತ್ತು ಸರಳತೆ ಇವರ ಸಂಶೋಧನೆಯ ಗುಣವಾಗಿದೆ.

ಡಾ. ಶಾಸ್ತ್ರಿಯವರು ತಮ್ಮ ಕ್ಷೇತ್ರವನ್ನು ಇತಿಹಾಸ ಸಂಶೋಧನೆಗೆ ಸೀಮಿತ ಗೊಳಿಸದೆ ಕೆಲವು ಚುಟುಕು ಕಾವ್ಯಗಳನ್ನು ಬರೆದಿದ್ದಾರೆ. ಇವುಗಳಲ್ಲಿ ಇವರ ಸರಸ ವ್ಯಕ್ತಿತ್ವವು ಬೆಳಕಿಗೆ ಬಂದಿದೆ.

ಡಾ. ಶಾಸ್ತ್ರಿಯವರು ಉತ್ತರ ಪತ್ರಿಕೆಗಳ ಉತ್ತಮ ಮೌಲ್ಯಮಾಪಕರಾಗಿ ಹೆಸರು ಪಡೆದಿದ್ದಾರೆ. ೧೯೭೨ ರಲ್ಲಿ ನನಗೆ ಇವರೊಂದಿಗೆ ಕೂಡಿಕೊಂಡು ಪದವಿ ಪೂರ್ವತರಗತಿಗಳ ಉತ್ತರ ಪತ್ರಿಕೆಗಳನ್ನು ಮೌಲ್ಯಮಾಪನ ಮಾಡುವ ಅವಕಾಶ ಬಂದಿತ್ತು. ಪ್ರೊ. ಹೊನ್ನೆಯವರ ನೇತೃತ್ವದಲ್ಲಿ ನಾವಿಬ್ಬರೂ ಉತ್ತರ ಪತ್ರಿಕೆಗಳ ಮೌಲ್ಯಮಾಪಕರಾಗಿ ಕೆಲಸ ಮಾಡಿದ್ದೇವೆ. ಡಾ. ಶಾಸ್ತ್ರಿಯವರು ಈ ಸಂದರ್ಭದಲ್ಲಿ ಹೆಚ್ಚಿನ ಮೌಲ್ಯಮಾಪಕರಿಗೆ ಉತ್ತಮ ಮಟ್ಟದ ಗೆಳೆಯರಾಗಿ ತೋರಿಬಂದರು,

ಡಾ. ಶಾಸ್ತ್ರಿಯವರು ಸರಳ ಮನೋವೃತ್ತಿಯವರು. ಉತ್ತಮ ಮಟ್ಟದ ಸ್ನೇಹಿತರು. ಹಾಸ್ಯ ಪ್ರವೃತ್ತಿಯವರು. ಸಂಶೋಧಕರಿಗೆ ಇವರು ಸಹಕಾರ ನೀಡುವವರಾಗಿದ್ದಾರೆ. ಇದಲ್ಲದೇ ಇವರು ಮಾನವೀಯ ಮಟ್ಟದ ಉದಾರ ಹೃದಯಿಗಳಾಗಿದ್ದಾರೆ. ಆದರೆ ಸಂದರ್ಭ ನೋಡಿ ಕಠಿಣ ಧೋರಣೆಯನ್ನು ಅನುಸರಿಸುವಲ್ಲಿ ಡಾ. ಶಾಸ್ತ್ರಿಯವರು ಹಿಂದೆ ಬೀಳುವುದಿಲ್ಲ.

ಇವರ ಅಧ್ಯಾಪಕ ಜೀವನ ನಿವೃತ್ತಿ ಹಂತಕ್ಕೆ ಬಂದಿದೆ. ಇದರಿಂದ ವಿದ್ಯಾರ್ಥಿ ವೃಂದಕ್ಕೆ ತುಂಬಲಾರದ ನಷ್ಟ. ಇವರ ನಿವೃತ್ತಿ ಜೀವನ ಸುಗಮವಾಗಿ ಮತ್ತು ಉತ್ಸಾಹ ರೀತಿಯಲ್ಲಿ ನಡೆಯಲೆಂದು ಹಾರೈಸುವೆ. ಇದರೊಂದಿಗೆ ಸಂಶೋಧನೆಯೂ ಪ್ರಗತಿಪಥದಲ್ಲಿ ನಡೆಯಲೆಂದು ಹಾರೈಸುವೆ.

**ಕೆ. ಜಿ. ವಸಂತಮಾಧವ**
ಹಿರಿಯ ಇತಿಹಾಸ ಸಂಶೋಧಕರು
ಹಳೆಯಂಗಡಿ

## ತತ್ವನಿಷ್ಠ ಚೇತನ

ನನ್ನ ಆತ್ಮೀಯ ಗೆಳೆಯರಾದ ಡಾ. ಎ. ಕೆ. ಶಾಸ್ತ್ರಿಯವರನ್ನು ಶಿರ್ಸಿಯ ಜನತೆ ಮಾರ್ಚ ೨೭ ರಂದು ಸನ್ಮಾನಿಸುವರೆಂದು ತಿಳಿದು ನನಗೆ ಬಹಳ ಸಂತೋಷ ವಾಯಿತು. ಅವರು ಪ್ರಾರಂಭದಲ್ಲಿ ಕಷ್ಟಪರಿಸ್ಥಿತಿಯನ್ನು ಎದುರಿಸಿ ತನ್ನ ಗುರಿಯನ್ನು ಮುಟ್ಟಬೇಕು ಎನ್ನುವ ಛಲದಿಂದ ಸತತ ಪರಿಶ್ರಮದಿಂದ ಉನ್ನತ ಶಿಕ್ಷಣವನ್ನು ಪಡೆದು ತನ್ನ ಪ್ರೀತಿಯ ಶಿಕ್ಷಣ ಕ್ಷೇತ್ರವನ್ನು ಪ್ರವೇಶಿಸಿ ವಿದ್ಯಾರ್ಥಿಗಳ ಅಭಿಮಾನಕ್ಕೆ, ಆದರಕ್ಕೆ ಪಾತ್ರರಾಗಿದ್ದಾರೆ. ಬೋಧಿಸುವಾಗ ಅದರಲ್ಲಿಯೇ ತಲ್ಲೀನರಾಗಿ ವಿದ್ಯಾರ್ಥಿಗಳ ಮನವನ್ನು ತಟ್ಟಿ ಬುದ್ಧಿಯನ್ನು ಪ್ರಚೋದಿಸಿ ಅವರನ್ನು ಆಕರ್ಷಿಸುವ ಗುಣ ಅವರಲ್ಲಿದೆ. ಅವರು ವಿದ್ಯಾರ್ಥಿಗಳನ್ನು ಪಠ್ಯೇತರ ಚಟುವಟಿಕೆಗಳಲ್ಲಿಯೂ ಕೂಡ ಪ್ರೋತ್ಸಾಹಿಸಿ ಹುರಿದುಂಬಿಸುವಂಥವರು. ಒಟ್ಟಿನಲ್ಲಿ ಹೇಳುವದಾದರೆ ಅವರು ವಿದ್ಯಾರ್ಥಿಗಳನ್ನು ಪ್ರೀತಿಸುತ್ತಾರೆ. ಹಾಗೂ ವಿದ್ಯಾರ್ಥಿಗಳು ಅವರನ್ನು ಗೌರವಿಸುತ್ತಾರೆ. ಅವರು ಆದರ್ಶ ಶಿಕ್ಷಕರು, ಶಿಸ್ತು ಪರಿಪಾಲಿಸುವವರು, ಸಮಯ ಪ್ರಜ್ಞೆಯುಳ್ಳವರು, ಸರಳರು, ಸಜ್ಜನರು, ಸಹೃದಯಿಗಳು, ನಿರ್ವಂಚನೆಯಿಂದ ಕಾರ್ಯ ಮಾಡುವವರು, ಕಷ್ಟಸಹಿಷ್ಣುಗಳು, ತತ್ವನಿಷ್ಠರು, ವೈವಿಧ್ಯಮಯ ಅನುಭವಗಳನ್ನು ಹೊಂದಿ ಪಕ್ವ ವ್ಯಕ್ತಿತ್ವವನ್ನು ಪಡೆದವರು, ಅವರು ಚಿಕಿತ್ಸಕ ಬುದ್ಧಿಯುಳ್ಳವರು, ಇತಿಹಾಸ ತಜ್ಞರು, ಅನೇಕ

ಸಂಶೋಧನಾ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಇತಿಹಾಸಕ್ಕೆ ಸಂಬಂಧಪಟ್ಟ ೨೦ ಪುಸ್ತಕಗಳನ್ನು ೬೦ ಸಂಶೋಧನಾತ್ಮಕ ಪ್ರಬಂಧಗಳನ್ನು ಪ್ರಕಟಿಸಿದವರು. ಇಂತಹ ಪ್ರತಿಭಾವಂತ ವ್ಯಕ್ತಿಯನ್ನು ಸಮಾಜವು ಗುರುತಿಸಿ ಸನ್ಮಾನಿಸುತ್ತಿರುವದು ಸ್ತುತ್ಯಾರ್ಹ.

**ಜಿ. ವಿ. ಭಟ್ಟ, ಕೊಂಕೇರಿ**
ನಿವೃತ್ತ ಪ್ರಾಚಾರ್ಯರು
ದಿವೇಕರ ಕಾಮರ್ಸ ಕಾಲೇಜು, ಕಾರವಾರ

## ಇತಿಹಾಸ ಕೋವಿದ

ಜಾನ್ ಡ್ರಿ. ಕವಾಟರನು ತನ್ನ 'ಪ್ರಾರ್ಥನೆ' ಎಂಬ ಪದ್ಯದಲ್ಲಿ ಒಂದು ಮಾತು ಹೇಳುತ್ತಾನೆ : 'ನಾವು ಸಂಕಲ್ಪ ಮಾಡಿದ, ಇಚ್ಛಿಸಿದ ಕಾರ್ಯವನ್ನೆಸಗುವ ಮನೋಬಲವನ್ನು, ಶಕ್ತಿಯನ್ನು ಕೊಡು; ಡಾ. ಅನಂತ ಕೃಷ್ಣಶಾಸ್ತ್ರಿ, ಟೊಣ್ಣೆ ಮನೆಯವರನ್ನು ವಿದ್ಯಾರ್ಥಿದೆಸೆಯಿಂದ ಓರ್ವ ಮಿತ್ರನ ಕಣ್ಣುಗಳಿಂದ ನೋಡುತ್ತ ಬಂದಿದ್ದೇನೆ. ಪರಿಸರ ಹಾಗೂ ಪರಿಸ್ಥಿತಿ ವ್ಯತಿರಿಕ್ತವಾದಾಗ್ಯೂ ತನ್ನ ಛಲವನ್ನು ಬಿಡದೆ, ಸಾಧಿಸುವ ಕಾರ್ಯವನ್ನು ಅರ್ಜುನನಂತೆ ತದೇಕ ಚಿತ್ತದಿಂದ ಸಾಧಿಸಿ ತೋರಿಸುವ ಹಾಗೂ ತೋರಿಸಿದ ಆದರ್ಶ ವ್ಯಕ್ತಿ ಡಾ. ಎ. ಕೆ. ಶಾಸ್ತ್ರಿಯವರು. ಕಾಲೇಜು ವಿದ್ಯಾರ್ಥಿಯಾಗಿರುವಾಗ ಬಡತನದ ಶೃಂಖಲೆಗಳನ್ನು ಮೀರಿ ಓದು ಮುಂದುವರಿಸುವ ಸಲುವಾಗಿ, ಓರ್ವ ಶ್ರೇಷ್ಠ ಆಟಗಾರನಾಗಿ ಸಹಾಯಧನ ಪಡೆದು, ಅಲ್ಲಿಯೂ ಯುನಿವರ್ಸಿಟಿ 'ಬ್ಲೂ' ಆಗಿ, ಕಾಲದ ಮಳಲ ಮೇಲೆ ಹೆಜ್ಜೆಯ ಗುರುತು ಮೂಡಿಸಿದವರು ಶಾಸ್ತ್ರಿಯವರು. ಓರ್ವ ಶ್ರೇಷ್ಠ ಅಧ್ಯಾಪಕನಾಗಿ, ತನ್ನ ಕೊಡುಗೆಯನ್ನು ಸಾರಸ್ವತ ಲೋಕಕ್ಕೆ ಕೊಟ್ಟು, ಸಮಾಜದ ಋಣವನ್ನು ತೀರಿಸಿದವರು ಶಾಸ್ತ್ರಿಯವರು. He is a perfectionist. ಮಾಡಿದ ಕೆಲಸ ಚೊಕ್ಕಟ ಹಾಗೂ ಪರಿಪೂರ್ಣವಾಗಬೇಕು. He never forgets to dot the i's and cross the i's. ಒಂದು ದೃಷ್ಟಿಯಿಂದ ಅವರದು ಸಾರ್ಥಕ ಜೀವನ. ಅವರ ಸಾಧನೆಯ ಮಾರ್ಗದಲ್ಲಿ ದೇಹ ಅಷ್ಟೊಂದು ಸಹಕಾರಿಯಾಗದಿದ್ದರೂ, ಕೇವಲ ಸಂಕಲ್ಪಶಕ್ತಿ ಹಾಗೂ ಮನೋಬಲದಿಂದ ಸಾಧನೆಗೈದ ಡಾ. ಎ. ಕೆ. ಶಾಸ್ತ್ರಿಯವರ ಅನುಕರಣೀಯ ಬಾಳು ಮುಂದಿನ ಪೀಳಿಗೆಯವರಿಗೆ ದಾರಿದೀಪ.

**ಪರಮೇಶ್ವರ ಹೆಗಡೆ**
ನಿವೃತ್ತ ಇಂಗ್ಲೀಷ್ ಪ್ರಾಧ್ಯಾಪಕರು
ಎಂ.ಎಂ. ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯ, ಶಿರಸಿ

# ಸತತ ಪರಿಶ್ರಮಿ, ಸಾತ್ವಿಕ ಪ್ರಾಜ್ಞರು

ಆತ್ಮೀಯ ಸ್ನೇಹಿತರಾದ ಡಾ. ಅನಂತ ಕೃಷ್ಣ ಶಾಸ್ತ್ರಿ ಟೋಣ್ಣೆಮನೆ ಅವರು ಕರ್ನಾಟಕದ ಒಬ್ಬ ಪ್ರಮುಖ ಇತಿಹಾಸಕಾರರಾಗಿ ರಾರಾಜಿಸುತ್ತಿದ್ದಾರೆಂಬುದು ನಮಗೆಲ್ಲ ಹೆಮ್ಮೆಯ ಸಂಗತಿ. ಶಿರಸಿಯ ಕಾಲೇಜಿನಲ್ಲಿ ಜನಪ್ರಿಯ, ಗೌರವಾನ್ವಿತ ಪ್ರಾಧ್ಯಾಪಕರಾಗಿ ದೀರ್ಘ ಸಮಯ ಸೇವೆ ಸಲ್ಲಿಸಿ, ಇದೀಗ ನಿವೃತ್ತರಾಗಲಿರುವ ಅವರು ಪ್ರಸಿದ್ಧ ಧಾರ್ಮಿಕ ಶಾಸ್ತ್ರಾಧ್ಯಯನ ಪರಂಪರೆಯ ಸಂಪ್ರದಾಯಸ್ಥ ಮನೆತನದವರು. ಉತ್ತರಕನ್ನಡ ಜಿಲ್ಲೆಯಲ್ಲಿ ಅನೇಕ ವರ್ಷಗಳ ಹಿಂದೆ ಸಾಮಾಜಿಕ ಸುಧಾರಣೆಗಳನ್ನು ಕುರಿತು ಬಿರುಸಿನ ವಾಗ್ವಾದಗಳು ಏರ್ಪಡುತ್ತಿದ್ದ ಸಮಯದಲ್ಲಿ ಖ್ಯಾತ ಸುಧಾರಣಾವಾದಿ ಅಕ್ಕದಾಸ ಭಟ್ಟರು ಮತ್ತು ಡಾ. ಎ. ಕೆ. ಶಾಸ್ತ್ರಿಗಳ ತಂದೆಯವರ ನಡುವೆ ಆಗಾಗ ಗಂಭೀರ, ರೋಚಕ ಚಕಮಕಿಗಳು ನಡೆಯುತ್ತಿದ್ದವು. ಚಿಕ್ಕಂದಿನ ಈ ಧಾರ್ಮಿಕ ಸಂಸ್ಕಾರವೂ, ಡಾ. ಶಾಸ್ತ್ರಿ ಅವರು ವಿಶೇಷವಾಗಿ ಮಠಮಾನ್ಯಗಳ ಚರಿತ್ರೆಗಳನ್ನು ಬರೆಯಲು ಪ್ರೇರಣೆ ನೀಡಿತೆಂದು ತೋರುತ್ತದೆ. ಐತಿಹಾಸಿಕ ಮಹತ್ವದ ಆದಿಶಂಕರಾಚಾರ್ಯ ಪರಂಪರೆಯ ಶೃಂಗೇರಿ ಧರ್ಮಸಂಸ್ಥಾನದಲ್ಲಿ ನಿರ್ಲಕ್ಷಿತವಾಗಿದ್ದ ಕಡತಗಳ ರಾಶಿಗಳನ್ನು ಬೆಳಕಿಗೆ ತಂದು, ಕೂಲಂಕಷವಾಗಿ ಅಧ್ಯಯನ ಮಾಡಿ ಶ್ರೀಮಠದ ಶತಮಾನಗಳ ಇತಿಹಾಸವನ್ನು ಕುರಿತು ದೇಶದ ಹಿರಿಯ, ಶ್ರೇಷ್ಠ ಚರಿತ್ರಕಾರರಾದ ಡಾ. ಜಿ. ಎಸ್. ದೀಕ್ಷಿತ್ ಅವರ ಮಾರ್ಗದರ್ಶನದಲ್ಲಿ ಮಹಾಪ್ರಬಂಧವನ್ನು ರಚಿಸಿ, ವಿದ್ವತ್ ಪ್ರಪಂಚದ ಮೆಚ್ಚಿಗೆ ಗಳಿಸಿದರು. ಅಂಥ ಕೃತಿಗಳಲ್ಲಿ ದಕ್ಷಿಣ ಭಾರತದಲ್ಲೆಲ್ಲ ಇದೇ ಮೊದಲನೆಯದಾಗಿದ್ದು, ಆದರ್ಶಪ್ರಾಯವಾಗಿದೆ. ಅದರಂತೆಯೇ, ಆದಿಶಂಕರಾಚಾರ್ಯ ಪರಂಪರೆಯ ಇನ್ನೊಂದು ದೊಡ್ಡ ಸಂಸ್ಥೆಯಾದ ಶ್ರೀ ಸೋಂದಾ ಸ್ವರ್ಣವಲ್ಲೀ ಸಂಸ್ಥಾನದ ಹಿನ್ನೆಲೆಯ ಬಗ್ಗೆಯೂ ಗ್ರಂಥಗಳನ್ನು ರಚಿಸಿದ್ದಾರೆ. ಹೀಗೆ, ಧಾರ್ಮಿಕ ಗುರುಪೀಠಗಳ ವಿಷಯದಲ್ಲಿ ವಿಧ್ಯುಕ್ತವಾಗಿ, ಗಹನವಾಗಿ ಸಂಶೋಧನೆಯನ್ನು ಮಾಡಿ ಮುಂಚೂಣಿಯ ಕಾರ್ಯ ಮಾಡಿದ ಸ್ಮರಣೀಯ ಶ್ರೇಯಸ್ಸು ಡಾ. ಶಾಸ್ತ್ರಿ ಅವರಿಗೆ ಸಲ್ಲುತ್ತದೆ. ಮಠಮಾನ್ಯಗಳ ವಿಷಯದಲ್ಲಿ ಅನೇಕ ಸಲ ತಂತಿಯ ಮೇಲೆ ನಡೆಯುತ್ತ ಸಮತೋಲನದ ಕಸರತ್ತು ಮಾಡಬೇಕಾಗುತ್ತದೆ. ಇದನ್ನು ಅವರು ಯಶಸ್ವಿಯಾಗಿ ಮಾಡಿ ಗೆದ್ದಿದ್ದಾರೆ.

ಅವರು ಕಠಿಣ, ಸತತ ಪರಿಶ್ರಮಿ. ಬರೆಯುವಾಗ ಮತ್ತೆ ಮತ್ತೆ ಕರಡು ಪ್ರತಿಗಳನ್ನು ತಯಾರಿಸಿ, ತಿದ್ದಿ ತಿದ್ದಿ ಬಳಿಕ ಅಂತಿಮ ಪ್ರತಿಯನ್ನು ತಯಾರಿಸುವವರಲ್ಲ. ಸಾಕಷ್ಟು ಚಿಂತನ ಮನನ ಮಾಡಿ ಬರೆಯಲು ಒಮ್ಮೆ ಕುಳಿತರೆಂದರೆ, ವೇಗದಿಂದ ಮುಂದೆ ಸಾಗುತ್ತಾರೆ. ಅದೇ ಅಂತಿಮ ಪ್ರತಿ. ಅವರು ನಿರರ್ಗಳ ಭಾಷಣಕಾರರೂ ಅಹುದು. ಅಧ್ಯಯನ, ಅಧ್ಯಾಪನ, ಸಂಶೋಧನೆಗೆ ತಮ್ಮನ್ನು ತಾವೇ ಅರ್ಪಿಸಿಕೊಂಡ ಕರ್ಮಯೋಗಿ. ದೊಡ್ಡ ಹುದ್ದೆಗಳನ್ನು ಪಡೆಯಲು

ಪ್ರಯತ್ನಿಸಬೇಕೆಂಬ ಮಹತ್ವಾಕಾಂಕ್ಷೆವುಳ್ಳವರಲ್ಲ. ಕೈಗೊಂಡ ಕಾರ್ಯವನ್ನು ಪಟ್ಟು ಹಿಡಿದು ಸಮಯಕ್ಕೆ ಸರಿಯಾಗಿ ಪೂರೈಸುವ ದೃಢಸಂಕಲ್ಪದ ವಿರಳ ವ್ಯಕ್ತಿ ಅವರು. ಅವರ ಸಮಯಪ್ರಜ್ಞೆ ಮೆಚ್ಚತಕ್ಕದ್ದು. ಅನೇಕ ವಿದ್ವತ್ ಕಾರ್ಯಗಳಲ್ಲಿ ತೊಡಗಿಸಿಕೊಂಡಿರುವ ಪಂಡಿತರು ಪೂರ್ವನಿರ್ಧಾರಿತ ಕಾಲಮಿತಿಯನ್ನು ಪಾಲಿಸುವುದು ಎಷ್ಟು ಕಷ್ಟಸಾಧ್ಯವೆಂಬುದನ್ನು ಬಲ್ಲರು. ಕರ್ನಾಟಕ ಇತಿಹಾಸ ಅಕಾಡೆಮಿ ಬೆಂಗಳೂರು, ಮತ್ತು ಕರ್ನಾಟಕ ಹಿಸ್ಟಾರಿಕಲ್ ರಿಸರ್ಚ್ ಸೊಸಾಯಿಟಿ, ಧಾರವಾಡ, ಈ ಸಂಸ್ಥೆಗಳ ಕಾರ್ಯಕಲಾಪಗಳಲ್ಲೂ ಡಾ. ಶಾಸ್ತ್ರಿ ಅವರು ಭಾಗ ವಹಿಸುತ್ತಿದ್ದಾರೆ. ಅಧಿಕಾರಕ್ಕಾಗಲಿ, ಹುದ್ದೆಗಾಗಲಿ ಪೈಪೋಟಿ ಮಾಡದೆ, ಯಾರ ಬಗ್ಗೆಯೂ ಮತ್ಸರ ಮಾಡದ, ವಿಶಾಲ ಮನಸ್ಸಿನ, ಸಾತ್ವಿಕ, ಸರಳ ಸ್ವಭಾವದ, ಪ್ರಾಮಾಣಿಕ ಪ್ರಾಜ್ಞರಿವರು.

ಎಷ್ಟೇ ಅಡೆತಡೆಗಳು ಬಂದರೂ ಕಾರ್ಯಕ್ರಮಕ್ಕೆ ಅನುಸಾರವಾಗಿ ಅವರು ಕಾರ್ಯವನ್ನು ಮಾಡುವವರಾಗಿದ್ದಾರೆ. ಒಮ್ಮೆ ಶಿರಸಿಯಿಂದ ಸೋದೆಗೆ ಅವರೂ, ನಾನೂ ಹೋಗುವುದಿತ್ತು. ವಿಪರೀತ ಮಳೆ, ಸಾರ್ವಜನಿಕ ವಾಹನಗಳು ಸಿಗಲಿಲ್ಲ. ಪೂರ್ವ-ನಿರ್ಧಾರಿತ ಕಾರ್ಯವನ್ನು ಕೈಬಿಡುವ ಪ್ರಸಂಗ ಬಂದಿತ್ತು. ಆದರೆ ಅವರ ದ್ವಿಚಕ್ರ ವಾಹನದಲ್ಲಿ ಧೋ-ಧೋ ಮಳೆಯಲ್ಲಿಯೇ ಅಲ್ಲಿಗೆ ಪಯಣಿಸಿ, ಸಮಯಕ್ಕೆ ಸರಿಯಾಗಿಯೇ ಕಾರ್ಯ ಪೂರೈಸಿದೆವು. ಕರ್ನಾಟಕ ಇತಿಹಾಸ ಅಕಾಡೆಮಿಯ ೧೯೯೭ ರ ಕರ್ನಾಟಕ ಅಧಿವೇಶನವನ್ನು ಶ್ರೀ ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನದ ಆಶ್ರಯದಲ್ಲಿ ಶಿರಸಿ ಮತ್ತು ಸೋಂದಾದಲ್ಲಿ ನಡೆಸಬೇಕೆಂದು ನಿರ್ಧಾರವಾದಂತೆ, ಅದನ್ನು ಸಫಲವಾಗಿ ಸಂಘಟಿಸಿ, ಎಲ್ಲರ ಮೆಚ್ಚಿಗೆಗೆ ಪಾತ್ರವಾಗುವಂತೆ ಮಾಡಲು ಪ್ರೊಫೆಸರ್ ಶಾಸ್ತ್ರಿಯವರು ಇತರರೊಡನೆ ಹಗಲಿರುಳೂ ಪರಿಶ್ರಮಿಸಿದರು. ಜೀವನದಲ್ಲಿ ಅನೇಕ ಸ್ಮರಣೀಯ ಕಾರ್ಯಗಳನ್ನು ಮಾಡಿದ ಧನ್ಯತೆ ಅವರಿಗೆ ಲಭಿಸಿದೆ. ಅವರಿಗೆ ಸಂತೃಪ್ತಿ ಇದೆ. ಅವರದು ಚಿಕ್ಕ, ಚೊಕ್ಕ, ಆದರ್ಶ ಸಂಸಾರ. ಅವರೂ, ಅವರ ಧರ್ಮಪತ್ನಿಯವರೂ ತಮ್ಮ ಮಧ್ಯಮವರ್ಗದ ಸ್ವನಿವಾಸವನ್ನು ಸುವ್ಯವಸ್ಥಿತವಾಗಿ, ಅಚ್ಚುಕಟ್ಟಾಗಿ ಇಟ್ಟುಕೊಂಡಿರುವ ಮಾದರಿಯನ್ನು ನೋಡುವುದೂ ಸಂತೋಷಕರ. ವಿದ್ಯಾ-ವಿಚಾರ-ಆಚಾರ-ಸಂಪನ್ನರಾಗಿ, ಆದರ್ಶಗಳನ್ನು ಪಾಲಿಸುತ್ತ, ಉನ್ನತ ಉದಾಹರಣೆಯನ್ನು ನೀಡಿರುವ ಡಾ. ಶಾಸ್ತ್ರಿಗಳವರು ಪ್ರಾಧ್ಯಾಪಕ ವೃತ್ತಿಯಿಂದ ನಿವೃತ್ತರಾಗುತ್ತಿರುವ ಈ ಸಂದರ್ಭದಲ್ಲಿ ಅವರಿಗೂ, ಅವರ ಪರಿವಾರಕ್ಕೂ ಮನಸಾರೆ ಶುಭಾಕಾಂಕ್ಷೆಗಳನ್ನು ಕೋರುತ್ತ, ಅವರ ನಿವೃತ್ತ ಜೀವನ ಎಲ್ಲ ರೀತಿಗಳಲ್ಲಿ ಹರ್ಷದಾಯಕವಾಗಿ, ಅವರಿಂದ ಇನ್ನೂ ಹೆಚ್ಚಿನ ವಿದ್ವತ್ ಕಾರ್ಯಗಳು ನೆರವೇರಲೆಂದು ಹಾರೈಸೋಣ.

**ಕೆ. ಅಭಿಶಂಕರ್**
ಬೆಂಗಳೂರು

## ಸಜ್ಜನಿಕೆಯ ಸಾಕಾರಮೂರ್ತಿ

ಪ್ರೊ. ಎ. ಕೆ. ಶಾಸ್ತ್ರಿಯವರು ಸರಳ-ಸಜ್ಜನಿಕೆಯ ಸಾಕಾರಮೂರ್ತಿ. ಜ್ಞಾನ ಮತ್ತು ಸಂಶೋಧನ ಪ್ರವೃತ್ತಿಗಳೆರಡರ ಸಂಗಮ. ಅವರ ಸಂಶೋಧನೆಯ ಕೆಲವು ಕೃತಿಗಳು ಮುಂದಿನ ಸಂಶೋಧಕರಿಗೂ ಮಾರ್ಗದರ್ಶಿಯಾಗಬಲ್ಲವು. ಶ್ರದ್ಧೆ ಮತ್ತು ಸತತ ಪರಿಶ್ರಮದಿಂದ ದೊಡ್ಡ ಸಾಧಕನಾಗಬಹುದೆಂಬುದಕ್ಕೆ ಆವ ರೊಬ್ಬ ಉತ್ತಮ ನಿದರ್ಶನ. ಎಳೆಯರು ಅವರ ಮಾರ್ಗದರ್ಶನದಲ್ಲಿ ಸಂಶೋಧನ ಕಾರ್ಯ ಕೈಗೊಂಡಲ್ಲಿ ಜಿಲ್ಲೆ ರಾಜ್ಯಕ್ಕೆ ಬಹಳ ಉಪಕಾರವಾದೀತು. ಸಾಧಕರಾದ ಅವರನ್ನು ಗುರುತಿಸಿ ಗೌರವಿಸುವುದು ನಮ್ಮನ್ನು ನಾವು ಗೌರವಿಸಿಕೊಂಡಂತೆ.

**ಎಂ. ಆರ್. ವಿಷ್ಣುಮೂರ್ತಿ**
ನಿವೃತ್ತ ಪ್ರಾಚಾರ್ಯರು
ಎಂ.ಎಂ. ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯ, ಶಿರಸಿ

## ಛಲವಾದಿ ಡಾ. ಎ. ಕೆ. ಎಸ್.

ನಾನು ೨೦ ಜೂನ ೧೯೬೬ ರಂದು ಈ ಮಹಾವಿದ್ಯಾಲಯವನ್ನು ಸೇರುವಾಗ ನನ್ನ ಪರಿಚಯವಿಲ್ಲದಿದ್ದರೂ ಆತ್ಮೀಯ ಸ್ವಾಗತವಿತ್ತವರಲ್ಲೊಬ್ಬರು ಎ. ಕೆ. ಎಸ್ ಅವರು. ಪಠ್ಯೇತರ ಚಟುವಟಿಕೆಗಳಲ್ಲಿ ಆಗಿನ ವಿದ್ಯಾರ್ಥಿಗಳೊಂದಿಗೆ ಬೆರೆತು ತರಬೇತಿ ಕೊಡುವುದರ ಜೊತೆಗೆ ಹುರಿದುಂಬಿಸುವ ರೀತಿ ಶ್ಲಾಘನೀಯ. ಸತತ ಪ್ರಯತ್ನದಿಂದ ಯಾವುದೇ ರಂಗದಲ್ಲಾಗಲೀ ಗಣನೀಯ ಸಾಧನೆ ಮಾಡಬಹುದೆಂದು ತೋರಿಸಿಕೊಟ್ಟವರು ಎ. ಕೆ. ಎಸ್. ಏಕೆಂದರೆ ವಿದ್ಯಾರ್ಥಿ ದೆಸೆಯಲ್ಲಿ ಆರ್ಥಿಕ ಸಬಲತೆಯಿಲ್ಲದಿದ್ದರೂ ಅಭ್ಯಾಸದ ಜೊತೆಗೆ ಕ್ರೀಡಾವಿಭಾಗದಲ್ಲೂ ರಾಜ್ಯಮಟ್ಟದ ಪ್ರಾವೀಣ್ಯತೆ ತೋರಿದ್ದಾರೆ.

ಸನ್ನಿವೇಶ– ೧೯೭೧ ಜನೆವರಿಯಲ್ಲಿ ನಮ್ಮ ಸಿಬ್ಬಂದಿವರ್ಗ ಹಾಗೂ ಶಿರಸಿ ವಕೀಲರ ಮಧ್ಯೆ ಮಹಾವಿದ್ಯಾಲಯದ ಮೈದಾನದಲ್ಲಿ ಕ್ರಿಕೆಟ್ ಪಂದ್ಯ, ಎ. ಕೆ. ಎಸ್. ಪ್ರಮುಖ 'ಆಲ್‌ರೌಂಡರ್', ನಾನು ಕಾಯ್ದಿಟ್ಟ ಆಟಗಾರ. ಪಂದ್ಯ ದಲ್ಲಿ ಎ. ಕೆ. ಎಸ್. ರವರದು ಗಣನೀಯ ಪ್ರದರ್ಶನ. ಆದರೆ ಅವರು 'ಅಡ್ಡ ದಾಂಡು' ಬೀಸುತ್ತಿದ್ದರೆಂದು ನನ್ನ ಆಗಿನ ಅನಿಸಿಕೆ. ಸುಮಾರು ೧೯೭೨–೭೩ ರಲ್ಲಿ ನಾನು ಕ್ರಿಕೆಟ್ ಕೋಚಿಂಗ್ ಪಡೆದು ಪುಸ್ತಕಗಳನ್ನೋದಿ ತಂಡದೊಳಗೆ ಪ್ರವೇಶ ಪಡೆದಾಗ, ಎ. ಕೆ. ಎಸ್. ನನ್ನ ಸತತ 'ಬ್ಯಾಟಿಂಗ್'ನ್ನು ಆಶ್ಚರ್ಯದಿಂದ ವೀಕ್ಷಿಸು

ತ್ತಿದ್ದರು. ಒಂದು ದಿನ 'ಶಂಕರರಾವ್ ನಿಮ್ಮ ಬ್ಯಾಟ್ ಸ್ಟ್ರೇಟ್ ಬರುತ್ತಿದೆಯಲ್ಲಾ' ಎಂದು ಕೇಳಿಯೇಬಿಟ್ಟರು. ನಂತರ, ತಾವು ಸತತ ಪ್ರಯತ್ನದಿಂದ ಸ್ಟ್ರೇಟ್ ಬ್ಯಾಟ್ ರೂಢಿಸಿಕೊಂಡರು.

ಇದಕ್ಕೆಲ್ಲಕ್ಕೂ ಮಿಗಿಲಾಗಿ ಶ್ರೇಷ್ಠ ಮಟ್ಟದ ಸಂಶೋಧಕರಾಗಿ ಹೆಸರು ಪಡೆದು ರಾಷ್ಟ್ರಮಟ್ಟದ ಕಾನ್‌ಫರನ್ಸ್‌ಗಳಲ್ಲಿ ಅಧ್ಯಕ್ಷರಾಗಿ ಕೆಲಸ ಮಾಡಿದ್ದಾರೆ.

ಈ ಸಂದರ್ಭದಲ್ಲಿ ದೇವರು ಅವರಿಗೆ ಮತ್ತು ಅವರ ಕುಟುಂಬಕ್ಕೆ ಆಯುರಾರೋಗ್ಯ ದಯಪಾಲಿಸಿ ಶಾಂತಿಯನ್ನು ಕರುಣಿಸಲಿ ಎಂದು ಹೃತ್ಪೂರ್ವಕವಾಗಿ ಪ್ರಾರ್ಥಿಸುತ್ತೇನೆ.

**ಪಿ. ಶಂಕರರಾವ್**
ಪ್ರಾಚಾರ್ಯರು
ಎಂ.ಎಂ. ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯ, ಶಿರಸಿ

# ಅಪರೂಪದ ವ್ಯಕ್ತಿ

ಡಾ. ಎ. ಕೆ. ಶಾಸ್ತ್ರಿಯವರು ತಮ್ಮ ಸುದೀರ್ಘ ತೃಪ್ತಿಕರ ಶೈಕ್ಷಣಿಕ ಸೇವೆಯ ನಂತರ ನಿವೃತ್ತರಾದ ಸಂದರ್ಭದಲ್ಲಿ ಅವರ ವಿವಿಧ ಸೇವೆಯನ್ನು ನೆನಪಿಸಿಕೊಳ್ಳುವ ಈ ಸವಿನೆನಪಿನ ಅಭಿನಂದನ ಗ್ರಂಥವೊಂದನ್ನು ಹೊರತರುತ್ತಿರುವದು ಅಭಿನಂದನೀಯ.

ಡಾ. ಎ. ಕೆ. ಶಾಸ್ತ್ರಿಯವರನ್ನು ೧೯೭೮ ರಲ್ಲಿ ಪ್ರಥಮ ಬಾರಿ ಭೇಟ್ಟಿಯಾದಾಗ ಅವರ ಸರಳ, ಸ್ನೇಹಪರ, ಜ್ಞಾನಪೂರ್ಣ ವ್ಯಕ್ತಿತ್ವವನ್ನು ಕಂಡು, ಅವರ ಬಗ್ಗೆ ಗೌರವ ಮತ್ತು ಪೂಜ್ಯ ಭಾವನೆ ನನ್ನಲ್ಲಿ ಒಡಮೂಡಿತು. ಇದು ಅವರ ಅಗಾಧ ವ್ಯಕ್ತಿತ್ವವನ್ನು ಪ್ರತಿಬಿಂಬಿಸುತ್ತದೆ. ಅವರು ಶಿಕ್ಷಕರಾಗಿ, ಕ್ರೀಡಾಪಟುವಾಗಿ, ಕ್ರೀಡಾಭಿಮಾನಿಗಳಾಗಿ, ಕವಿಯಾಗಿ ಗಣ್ಯ ಇತಿಹಾಸ ಸಂಶೋಧಕರಾಗಿ ಹೆಚ್ಚಿನದಾಗಿ, ಸ್ವರ್ಣವಲ್ಲಿ, ಶೃಂಗೇರಿ ಮಠದ ಇತಿಹಾಸ, ಕದಂಬರ ಬಗ್ಗೆ ಜನರಿಗೆ ಮಾಹಿತಿಯನ್ನು ಒದಗಿಸುವಲ್ಲಿ ತಮ್ಮ ಪ್ರತಿಭೆ, ಶ್ರಮ, ಸಮಯವನ್ನು ಸಮುದಾಯದ ಚಟುವಟಿಕೆಯಲ್ಲಿ ತೊಡಗಿಸಿಕೊಂಡು ಸಮಾಜದ ಎಲ್ಲ ವರ್ಗಗಳ ಪ್ರೀತಿಗೆ, ವಿಶ್ವಾಸಕ್ಕೆ ಕೃತಜ್ಞತೆಗಳಿಗೆ ಪಾತ್ರರಾದ ಅಪರೂಪದ ವ್ಯಕ್ತಿ.

ಅವರ ಈ ನಿರಂತರ ಕಾರ್ಯದಲ್ಲಿ ಅವರಿಗೆ ಆಯುರಾರೋಗ್ಯ ಭಗವಂತ ದಯಪಾಲಿಸಲಿ ಎಂದು ಬಯಸುತ್ತೇನೆ.

**ಜೆ. ಆರ್. ತೆಲಗೇರಿ**
ಪ್ರಾಚಾರ್ಯರು
ಎಮ್.ಇ.ಎಸ್. ಕಾನೂನು ಮಹಾವಿದ್ಯಾಲಯ, ಶಿರಸಿ

# ಅನುಕರಣೀಯ ಆದರ್ಶ

ಸತತ ಪರಿಶ್ರಮ ಹಾಗೂ ಬುದ್ಧಿಮತ್ತೆ ಇವುಗಳ ಆರೋಗ್ಯಪೂರ್ಣ ಸಮ್ಮಿಳನವು ಒಬ್ಬ ವ್ಯಕ್ತಿಯ ಸಾಧನೆಯಲ್ಲಿ ಯಾವ ರೀತಿ ಮಹತ್ವದ ಪಾತ್ರವನ್ನು ನಿರ್ವಹಿಸುತ್ತದೆ ಎಂಬುದಕ್ಕೆ ಡಾ. ಎ. ಕೆ ಶಾಸ್ತ್ರಿ ಇವರಿಗಿಂತ ಹೆಚ್ಚು ಉತ್ತಮ ಉದಾಹರಣೆ ಸಿಗುವದು ತುಂಬ ವಿರಳ. ಕಳೆದ ಸುಮಾರು ೩೫ ವರ್ಷಗಳಿಂದ ಅಧ್ಯಯನ ಹಾಗೂ ಅಧ್ಯಾಪನ ಎರಡನ್ನೂ ಸಮರ್ಥವಾಗಿ ನಿರ್ವಹಿಸುತ್ತ ಪ್ರಚಾರದ ಮೋಹಕ್ಕೆ ಒಳಗಾಗದೇ ಕೆಲಸ ಮಾಡುತ್ತ ಬಂದ ವ್ಯಕ್ತಿ ಡಾ. ಶಾಸ್ತ್ರಿಯವರು. ಅವರ ನೇರ ವಿದ್ಯಾರ್ಥಿಯಾಗಿ ಹಾಗೂ ಸಹೋದ್ಯೋಗಿಯಾಗಿ ನಾನು ಅವರಲ್ಲಿ ಅನೇಕ ಅನುಕರಣೀಯ ಗುಣಗಳನ್ನು ಕಂಡುಕೊಂಡಿದ್ದೇನೆ. ಇತಿಹಾಸವನ್ನು ಬೋಧಿಸುವಾಗ, ಐತಿಹಾಸಿಕ ಘಟನೆಗಳನ್ನು ವಿವರಿಸುವಾಗ ಹಾಗೂ ಐತಿಹಾಸಿಕ ವ್ಯಕ್ತಿಗಳನ್ನು ಬಣ್ಣಿಸುವಾಗ ಅವರು ಮೈಮರೆಯುತ್ತಾರೆ, ವಿಷಯದಲ್ಲಿ ತಲ್ಲೀನರಾಗುತ್ತಾರೆ. ಓದುಗರಿಗೆ ಹಾಗೂ ಶ್ರೋತೃಗಳಿಗೆ ಪೂರ್ಣಪ್ರಮಾಣದ ಮಾಹಿತಿ ಹಾಗೂ ಜ್ಞಾನವನ್ನು ನೀಡುವದೇ ಅವರ ಉದ್ದೇಶ. ಅದರಲ್ಲಿ ಲೋಪವಿಲ್ಲ, ವಂಚನೆಯಿಲ್ಲ. A great teacher inspires ಎಂಬ ಉಕ್ತಿಯು ಅವರಿಗೆ ಸಂಪೂರ್ಣವಾಗಿ ಅನ್ವಯಿಸುತ್ತದೆ.

ಇನ್ನು ಅವರು ತಮ್ಮ ಅಧ್ಯಯನ ಹಾಗೂ ಅಧ್ಯಾಪನ ವಿಷಯವಾದ 'ಇತಿಹಾಸ'ಕ್ಕೆ ನೀಡಿದ ಕೊಡುಗೆ ಅರ್ಥಪೂರ್ಣವಾಗಿಯೂ, ಅಪಾರವಾಗಿಯೂ ಇದೆ. ಆ ಕ್ಷೇತ್ರದಲ್ಲಿ ಅವರ ಸಂಶೋಧನೆಯು ಅನೇಕರಿಗೆ, ಅನೇಕ ರೀತಿಯಲ್ಲಿ ಮಾರ್ಗದರ್ಶಿಯಾಗಿದೆ. ಅವರ ಸಂಶೋಧನಾ ಮಹಾಗ್ರಂಥವು 'ಇತಿಹಾಸ' ವಿಷಯವನ್ನೇ ಶ್ರೀಮಂತಗೊಳಿಸಿದೆ ಎಂದರೆ ಅತಿಶಯೋಕ್ತಿಯಾಗಲಾರದು.

ಅವರಲ್ಲಿಯ ಬಾಹ್ಯ ಹಾಗೂ ಆಂತರಿಕ ಅಚ್ಚುಕಟ್ಟುತನ ಮತ್ತು ಶಿಸ್ತು ಮೆಚ್ಚುವಂತಹವುಗಳಾಗಿವೆ. ಇವು ಆ ವ್ಯಕ್ತಿತ್ವದ ಅವಿಭಾಜ್ಯ ಅಂಶಗಳಾಗಿವೆ. ಮಾನವೀಯ ಮೌಲ್ಯಗಳನ್ನು ಉನ್ನತಸ್ತರದಲ್ಲಿ ಒಳಗೊಂಡಿರುವ ಅವರ ವ್ಯಕ್ತಿತ್ವವು ಎಲ್ಲರನ್ನೂ ಆಕರ್ಷಿಸುವಂತಹದು. ಆದರ್ಶ ಶಿಕ್ಷಕ, ಉತ್ತಮ ಸಂಶೋಧಕ, ಶಿಕ್ಷಣ ಕ್ಷೇತ್ರದ ಆಸ್ತಿ ಹಾಗೂ ಸ್ನೇಹಜೀವಿಯಾದ ಡಾ. ಎ. ಕೆ. ಶಾಸ್ತ್ರಿಯವರು ವೃತ್ತಿಯಿಂದ ನಿವೃತ್ತಿ ಹೊಂದಿದರೂ ಪ್ರವೃತ್ತಿಯಿಂದ ನಿವೃತ್ತಿ ಹೊಂದುವಂತಹ ವ್ಯಕ್ತಿಯಲ್ಲವೆಂದು ನಿರ್ದಿಷ್ಟವಾಗಿ ಹೇಳಬಹುದು. ಅಂಥವರಿಂದ ಶಿಕ್ಷಣ ಕ್ಷೇತ್ರಕ್ಕೆ, ಸಂಶೋಧನಾ ವಲಯಕ್ಕೆ, ಹಾಗೂ ಸಮಾಜಕ್ಕೆ ಇನ್ನೂ ಹೆಚ್ಚಿನ ಕೊಡುಗೆ ಬರಲಿ ಎಂದು ಅವರ ವಿದ್ಯಾರ್ಥಿಯಾದ ನಾನು ದೇವರಲ್ಲಿ ಪ್ರಾರ್ಥಿಸುತ್ತ ಅವರಿಗೆ ಆ ಭಗವಂತನು ದೀರ್ಘ ಆಯುರಾರೋಗ್ಯವನ್ನು ನೀಡಲಿ ಎಂದು ಹಾರೈಸುತ್ತೇನೆ.

**ಎಸ್. ಪಿ. ಹೆಗಡೆ,** ಪ್ರಾಚಾರ್ಯರು
ಎಂ.ಇ.ಎಸ್. ವಾಣಿಜ್ಯ ಮಹಾವಿದ್ಯಾಲಯ, ಶಿರಸಿ

# ಕಾರ್ಯಪ್ರವೃತ್ತ ಸಂಶೋಧಕ

ಸರಳತೆ, ಸಜ್ಜನಿಕೆ, ಪರಿಶುದ್ಧತೆ, ಪರಿಶ್ರಮ, ಸಾತ್ವಿಕತೆ ಹಾಗೂ ಸಂಶೋಧನೆ ಇವುಗಳಿಗೆ ಇನ್ನೊಂದು ಹೆಸರು ಡಾ. ಎ. ಕೆ. ಶಾಸ್ತ್ರಿ. ಎಲೆಮರೆಯ ಕಾಯಿಯಂತೆ ಕೆಲಸ ನಿರ್ವಹಿಸುವ ಇವರು ಸದಾ ಕಾರ್ಯಪ್ರವೃತ್ತರು. ಸಹೋದ್ಯೋಗಿಯಾಗಿ ನನ್ನನ್ನು ಬಹಳ ಆತ್ಮೀಯತೆಯಿಂದ ಕಂಡಿರುವ ಶಾಸ್ತ್ರಿಯವರು ಉತ್ತಮ ಸಂಘಟನಾಕಾರರುಎಂದು ಹೇಳಲು ಅವರು ಇತ್ತೀಚೆಗೆ ಸ್ವರ್ಣವಲ್ಲಿ ಮಠದ ಆಶ್ರಯದಲ್ಲಿ ಶಿರಸಿಯಲ್ಲಿ ಸಂಘಟಿಸಿದ ಇತಿಹಾಸ ಸಮ್ಮೇಳನದ ಯಶಸ್ಸೇ ಸಾಕ್ಷಿ. ಇವರು ಶತಾಯುಷಿಗಳಾಗಿ ಬಾಳಿ ಸಮಾಜಕ್ಕೆ, ಶಿಕ್ಷಣರಂಗಕ್ಕೆ ಇನ್ನೂ ಹೆಚ್ಚಿನ ಸೇವೆ ಇವರಿಂದ ಲಭಿಸಲಿ ಎಂದು ಶ್ರೀ ದೇವರಲ್ಲಿ ಪ್ರಾರ್ಥಿಸುತ್ತೇನೆ.

**ಟಿ. ಎಸ್. ಹಳೆಮನಿ**
ಇತಿಹಾಸ ಉಪನ್ಯಾಸಕರು,
ಎಂ.ಎಂ. ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯ, ಶಿರಸಿ




# ಡಾ. ಎ. ಕೆ. ಶಾಸ್ತ್ರಿ ಜೀವನ ಸಾಧನೆ

೧) ಜನನ : ೧೭-೩-೧೯೪೦, ರವಿವಾರ

೨) ಜನ್ಮಸ್ಥಳ : ಶಿರಸಿ (ಉ.ಕ.)

೩) ತಂದೆ : ಕೃಷ್ಣಶಾಸ್ತ್ರಿ ಟೊಣ್ಣೇಮನೆ. ಸಂಸ್ಕೃತದಲ್ಲಿ ವ್ಯಾಕರಣ ಶಿರೋಮಣಿ ಪರೀಕ್ಷೆಯಲ್ಲಿ ಮೈಸೂರಿನಲ್ಲಿ ಪ್ರಥಮ ಸ್ಥಾನ. ೧೯೨೦ ಮತ್ತು ೧೯೩೦ರ ದಶಕಗಳಲ್ಲಿ ಕೆನರಾ ಜಿಲ್ಲೆಯ ಶ್ರೇಷ್ಠ ವಿದ್ವಾಂಸ, ಪ್ರಸಿದ್ಧ ವಾಕ್‌ಪಟು. ಮುಕ್ತರಾದ ಭಗವಾನ ಶ್ರೀಧರಸ್ವಾಮಿಗಳು ಶೀಗೆಹಳ್ಳಿ ಮಠದಲ್ಲಿರುವಾಗ, ಅವರಿಗೆ ವಿದ್ಯಾಗುರುಗಳಾದವರು ಕೃಷ್ಣಶಾಸ್ತ್ರಿಗಳು. ಸ್ವಾತಂತ್ರ್ಯಯೋಧ. ೧೯೪೨ರಲ್ಲಿ ತಮ್ಮ ೫೦ನೆಯ ವಯಸ್ಸಿನಲ್ಲಿ ಮರಣ.

೪) ತಾಯಿ : ಭವಾನಿ. ಬನವಾಸಿ ರಸ್ತೆಯ ಪಕ್ಕದಲ್ಲಿ ಶಿರಸಿಯ ಸಮೀಪವಿರುವ ಹಳದೋಟ, ಅವಳ ತವರು ಮನೆ. ಭವಾನಿಯ ಹಿರಿಯ ಮಗಳು ಸೀತೆ (ಮೃತಳಾಗಿದ್ದಾಳೆ), ಎರಡನೆಯ ಮಗಳು ಮೃಡಾನಿ (ಪತಿ ಗೋಪಾಲ ಭಟ್ಟರು, ಮಕ್ಕಳು ಮತ್ತು ಮೊಮ್ಮಕ್ಕಳೊಂದಿಗೆ ಬೆಂಗಳೂರಿನಲ್ಲಿ ನೆಲೆಸಿದ್ದಾಳೆ) ಮತ್ತು ಮೂರನೆಯವನೆ ಎ. ಕೆ. ಶಾಸ್ತ್ರಿ (ಅನಂತ ಕೃಷ್ಣ ಶಾಸ್ತ್ರಿ). ಪತಿಯ ಮರಣದ ನಂತರ ಕಡು ಬಡತನದಲ್ಲಿ ಮಕ್ಕಳನ್ನು ಸಾಕಿ, ಉತ್ತಮ ಶಿಕ್ಷಣ ನೀಡಿದ ಸಾಧ್ವಿಮಣಿ ಭವಾನಿ. ಸ್ವಾಭಿಮಾನ ಮತ್ತು ಛಲದಿಂದ ದುಡಿದು ಮಕ್ಕಳನ್ನು ಪೋಷಿಸಿ, ಬದುಕಲು ದಾರಿ ತೋರಿಸಿ, ೫೬ನೆಯ ವಯಸ್ಸಿನಲ್ಲಿ ಮೃತಳಾದ ಧೀಮಂತ ಮಹಿಳೆ. ತಾನು ಶಿಕ್ಷಣ ಪಡೆಯದಿದ್ದರೂ ಶಿಕ್ಷಣದಲ್ಲಿ ಅಪಾರ ಶ್ರದ್ಧೆ ಇರಿಸಿಕೊಂಡವಳು ಭವಾನಿ.

೫) ಪ್ರಾಥಮಿಕ ಶಿಕ್ಷಣ : ಶಿರಸಿ ಮತ್ತು ಧಾರವಾಡದಲ್ಲಿ.

೬) ಮಾಧ್ಯಮಿಕ ಶಿಕ್ಷಣ : ಧಾರವಾಡದ ಕೆ.ಇ. ಬೋರ್ಡ್ಸ್ ಮಾಧ್ಯಮಿಕ ಶಾಲೆ.

೭) ಕಾಲೇಜು ಶಿಕ್ಷಣ : ಧಾರವಾಡದ ಅಂದಿನ ಪ್ರತಿಷ್ಠಿತ ಕರ್ನಾಟಕ ಕಾಲೇಜು, (೧೯೫೭-೧೯೬೧).

೮) ಎಂ.ಎ. : ಕರ್ನಾಟಕ ವಿಶ್ವವಿದ್ಯಾಲಯ, ೧೯೬೩, ಇತಿಹಾಸ. (ಎಂ.ಎ. ಓದುವಾಗ ಕನ್ನಡ ಸಂಶೋಧನಾ ಸಂಸ್ಥೆಯ ಶಿಷ್ಯವೇತನ).

೯) ಪಿಎಚ್ ಡಿ. 'ಎ ಹಿಸ್ಟೋರಿ ಆಫ್ ಶೃಂಗೇರಿ' ಮಹಾಪ್ರಬಂಧ, ಕ. ವಿ. ವಿ. ಧಾರವಾಡ, ೧೯೭೬. ಮಾರ್ಗದರ್ಶಕರು : ಡಾ. ಜಿ ಎಸ್. ದೀಕ್ಷಿತ ಭಾರತದ ಶ್ರೇಷ್ಠ ಇತಿಹಾಸ ತಜ್ಞ.

೧೦) ೧೯೬೩-೬೪ ರ ಅವಧಿಯಲ್ಲಿ ಬೀದರಿನ ಬಿ.ವಿ.ಬಿ. ಕಾಲೇಜಿನಲ್ಲಿ ಇತಿಹಾಸದ ಉಪನ್ಯಾಸಕರಾಗಿ ಒಂದು ವರ್ಷ ಸೇವೆ.

೧೧) ೧೯೬೪-೧೯೯೮ ರ ಅವಧಿಯಲ್ಲಿ ಶಿರಸಿಯ ಎಂ ಇ. ಸೊಸೈಟಿಯ ಎಂ.ಎಂ. ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯದಲ್ಲಿ ಬಹುದೀರ್ಘ ಕಾಲ (೩೪ ವರ್ಷಗಳು) ಮಕ್ಕಳಿಗೆ ಇತಿಹಾಸ ಬೋಧನೆ; ವಿಭಾಗದ ಮುಖ್ಯಸ್ಥ.

೧೨) ೧೯೮೦-೮೨ ರ ಅವಧಿಯಲ್ಲಿ ಭಾರತೀಯ ಇತಿಹಾಸ ಅನುಸಂಧಾನ ಪರಿಷತ್ತಿನ (ಐ.ಸಿ.ಎಚ್.ಆರ್.) ಸಂಶೋಧನಾ ಕಾರ್ಯದ ನಿರ್ದೇಶಕ ನಾಗಿ ಸೇವೆ.

೧೩) ರಾಜ್ಯ ಮತ್ತು ರಾಷ್ಟ್ರಮಟ್ಟದ ಇತಿಹಾಸ ಸಮ್ಮೇಳನದ ಗೋಷ್ಠಿಗಳಿಗೆ ಅಧ್ಯಕ್ಷನಾಗಿ ಕಾರ್ಯನಿರ್ವಹಣೆ ಮತ್ತು ಅನೇಕ ಸಂಶೋಧನಾತ್ಮಕ ಲೇಖನಗಳ ಮಂಡನೆ.

೧೪) ಕರ್ನಾಟಕ ವಿಶ್ವವಿದ್ಯಾಲಯದ ಬೋರ್ಡ್ ಆಫ್ ಸ್ಟಡೀಸ್‌ನ ಸದಸ್ಯ.

೧೫) ಕರ್ನಾಟಕ ಹಿಸ್ಟೋರಿ ಕಾಂಗ್ರೆಸ್, ಕರ್ನಾಟಕ ಇತಿಹಾಸ ಅಕಾದೆಮಿ, ಕರ್ನಾಟಕ ರಾಜ್ಯ ಪತ್ರಾಗಾರ, ಕರ್ನಾಟಕ ಹಿಸ್ಟೋರಿಕಲ್ ರಿಸರ್ಚ ಸೊಸೈಟಿ ಮುಂತಾದ ಸಂಶೋಧನಾ ಸಂಸ್ಥೆಗಳಲ್ಲಿ ಸಕ್ರಿಯ ಕಾರ್ಯನಿರ್ವಹಣೆ.

೧೬) ಕರ್ನಾಟಕ ರಾಜ್ಯದ ಐತಿಹಾಸಿಕ ದಾಖಲೆಗಳ ಪರಿಪೀಕ್ಷಣಾ ಸಮಿತಿ ಮತ್ತು ಮೈಸೂರು ಅರಮನೆಯ ಚಾರಿತ್ರಿಕ ದಾಖಲೆಗಳ ಅಧ್ಯಯನ ಸಮಿತಿಯ ಸದಸ್ಯನಾಗಿ ರಾಜ್ಯಪಾಲರಿಂದ ನೇಮಕ (ಅವಧಿ : ೧೯೯೫, ೧೯೯೬)

೧೭) ೧೯೯೭ ರ ಅಕ್ಟೋಬರ್ ತಿಂಗಳಿನಲ್ಲಿ ಶಿರಸಿಯಲ್ಲಿ ಜರುಗಿದ ಕರ್ನಾಟಕ ಇತಿಹಾಸ ಅಕಾಡೆಮಿಯ ಹನ್ನೊಂದನೆಯ ಸಮ್ಮೇಳನದಲ್ಲಿ ಸ್ಥಳೀಯ ಸಮಿತಿಯ ಪ್ರಧಾನ ಕಾರ್ಯದರ್ಶಿಯಾಗಿ ಸೇವೆ.

೧೮) **ಪಠ್ಯೇತರ ಚಟುವಟಿಕೆಗಳು :**

i) ಪೋಲ್‌ವಾಲ್ಟ, ಉದ್ದ ಜಿಗಿತ ಮತ್ತು ತ್ರಿವಿಧ ಜಿಗಿತಗಳಲ್ಲಿ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಪ್ರಥಮ ಸ್ಥಾನ. ಪೋಲ್‌ವಾಲ್ಟ ನಲ್ಲಿವಿಶ್ವ ವಿದ್ಯಾಲಯಕ್ಕೆ ಹೊಸ ವಿಕ್ರಮ. ಅಖಿಲಭಾರತ ಅಂತರ ವಿಶ್ವವಿದ್ಯಾಲಯಗಳ ಕ್ರೀಡಾಕೂಟಕ್ಕೆ ಕರ್ನಾಟಕ ವಿಶ್ವವಿದ್ಯಾ ಲಯದ ನಾಯಕನಾಗಿ ಆಯ್ಕೆ (೧೯೬೧) ಅಥ್ಲೆಟಿಕ್ಸ್‌ನಲ್ಲಿ ರಾಜ್ಯ ಮಟ್ಟದ ಪ್ರಶಸ್ತಿ.

ii) ಅಥ್ಲೆಟಿಕ್ ಕೋಚ್ ಎಂದು ರಾಜ್ಯಕ್ಕೆ ಪ್ರಥಮ ಸ್ಥಾನ (೧೯೬೫)

iii) ಎನ್.ಸಿ.ಸಿ. ನೌಕಾದಳದ ಸಬ್‌ಲೆಫ್ಟಿನೆಂಟ್ ಆಗಿ ಸೇವೆ (೧೯೬೬–೧೯೭೦).

iv) ಶಿರಸಿಯ ಯುಥ್ ಸ್ಪೋರ್ಟ್ಸ್ ಕ್ಲಬ್‌ನ ಅಧ್ಯಕ್ಷ.

v) ರೋಟರಿ ಕ್ಲಬ್‌ನ ಮಾಜಿ ಜೊಯಿಂಟ್ ಸೆಕ್ರೆಟರಿ.

vi) ಕರ್ನಾಟಕ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದಾಗ ಅತ್ಯುತ್ತಮ ಶ್ರಮದಾನ ಕಾರ್ಯ ಪ್ರಶಸ್ತಿ.

vii) ಅನೇಕ ಕ್ರಿಡಾಕೂಟಗಳನ್ನು ಸಂಘಟಿಸಿದ ಅನುಭವ.

# ಡಾ. ಎ. ಕೆ. ಶಾಸ್ತ್ರಿ ಅವರ ಕೃತಿಗಳು

---

i) 'ಎ ಹಿಸ್ಟೊರಿ ಆಫ್ ಶೃಂಗೇರಿ', ಕ.ವಿ ವಿ., ಧಾರವಾಡ. ೧೯೮೨

ii) 'ಕಂಟೆಂಟ್ಸ್ ಆಫ್ ದಿ ಕಡತಾಸ್ ಆಫ್ ದಿ ಶೃಂಗೇರಿ ಮಠ' (ಅಪ್ರಕಟಿತ), ಕರ್ನಾಟಕ ರಾಜ್ಯ ಪತ್ರಾಗಾರ, ೧೯೭೪.

iii) 'ಸಿಲೆಕ್ಷನ್ಸ್ ಫ್ರಾಮ್ ದಿ ಕಡತಾಸ್ ಆಫ್ ದಿ ಶೃಂಗೇರಿ ಮಠ' (ಅಪ್ರಕಟಿತ), ಐ.ಸಿ.ಎಚ್.ಆರ್., ೧೯೮೨.

iv) 'ದಿ ರಿಕಾರ್ಡ್ಸ್ ಆಫ್ ದಿ ಶೃಂಗೇರಿ ಮಠ ರಿಲೇಟಿಂಗ್ ಟು ಕೆಳದಿ' (ಅಪ್ರಕಟಿತ), ಕೆಳದಿ ವಸ್ತುಸಂಗ್ರಹಾಲಯ, ೧೯೯೨.

v, vi) 'ಎ ಕ್ಯಾಟಲಾಗ್ ಆಫ್ ದಿ ರಿಕಾರ್ಡ್ಸ್ ಇನ್ ದಿ ಶೃಂಗೇರಿ ಮಠ' (ಎರಡು ಸಂಪುಟಗಳು), ಕರ್ನಾಟಕ ರಾಜ್ಯ ಪತ್ರಾಗಾರ, ೧೯೯೫, ೧೯೯೬.

vii) 'ಶೃಂಗೇರಿ ಧರ್ಮ ಸಂಸ್ಥಾನ', ಶೃಂಗೇರಿ ಮಠ, ೧೯೮೩.

viii) 'ಶೃಂಗೇರಿಯ ಇತಿಹಾಸ', ಕ.ವಿ.ವಿ. (ಮೂರು ಆವೃತ್ತಿಗಳು).

ix) 'ಶೃಂಗೇರಿ', ರಾಜ್ಯ ಸಂಪನ್ಮೂಲ ಕೇಂದ್ರ, ಮೈಸೂರು, ೧೯೯೫.

x) 'ಫ್ರಾನ್ಸ್ ದೇಶದ ಮಹಾಕ್ರಾಂತಿ', ಕ.ವಿ.ವಿ., ೧೯೭೧.

xi) 'ಶಿರಸಿ ತಾಲೂಕಿನ ಇತಿಹಾಸ', ೧೯೮೮.

xii) 'ಶಿರಸಿ ತಾಲೂಕಾ ದರ್ಪಣ', ಎಂ.ಇ. ಸೊಸೈಟಿ, ಶಿರಸಿ, ೧೯೮೮.

xiii) 'ಉಪಾಖ್ಯಾನ' (ಕವನ ಸಂಕಲನ), ೧೯೮೨,

xiv) 'ಅನಿಸಿಕೆಗಳು' (ಕವನ ಸಂಕಲನ). ೧೯೯೩.

xv) 'ಶ್ರೀ ಸೋಂದಾ ಸ್ವರ್ಣವಲ್ಲಿ ಮಹಾಸಂಸ್ಥಾನ ಐತಿಹಾಸಿಕ ದಾಖಲೆಗಳು', ಕರ್ನಾಟಕ ರಾಜ್ಯ ಪತ್ರಾಗಾರ, ೧೯೯೭.

xvi) 'ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನ', ಶ್ರೀ ಸರ್ವಜ್ಞೇಂದ್ರ ಸರಸ್ವತೀ ಪ್ರತಿಷ್ಠಾನ, ೧೯೯೭.

xvii) 'ದಿ ಕರ್ನಾಟಕ ಹಿಸ್ಟಾರಿಕಲ್ ರಿವ್ಯೂ' (ಸಂಪಾದಕ), ಕರ್ನಾಟಕ ಹಿಸ್ಟೊರಿಕಲ್ ರಿಸರ್ಚ್ ಸೊಸೈಟಿ, ಸಂ. xxvi.

xviii) 'ಬನವಾಸಿ, ಕದಂಬೋತ್ಸವ ಸ್ಮರಣ ಸಂಚಿಕೆ', (ಸಂ.), ೧೯೯೬.

xix) 'ಕನ್ನಡದಲ್ಲಿ ಕಡತಗಳು', ಕನ್ನಡ ಸಾಹಿತ್ಯ ಪರಿಷತ್ತು, ೧೯೯೭.

xx) 'ಶ್ರೀ ಮಂಜುಗುಣಿ ಕ್ಷೇತ್ರದ ಚಾರಿತ್ರಿಕ ದಾಖಲೆಗಳು, ಕರ್ನಾಟಕ ರಾಜ್ಯ ಪತ್ರಾಗಾರ, ೧೯೯೩.

# ಡಾ. ಎ. ಕೆ. ಶಾಸ್ತ್ರಿ ಅವರ ಸಂಶೋಧನ ಲೇಖನಗಳು

ಡಾ. ಎ. ಕೆ. ಶಾಸ್ತ್ರಿಯವರ ಕನ್ನಡ ಮತ್ತು ಇಂಗ್ಲಿಷ್‌ನಲ್ಲಿಯ ಸಂಶೋಧನಾತ್ಮಕ ಲೇಖನಗಳು, ಇತಿಹಾಸದರ್ಶನ, ನಿಯತಕಾಲಿಕ ಪತ್ರಿಕೆಗಳು, ದಿನಪತ್ರಿಕೆಗಳು, ಅಭಿನಂದನಾ ಗ್ರಂಥಗಳು, ಸ್ಮರಣ ಸಂಚಿಕೆಗಳು, India Past and Present, Studies in Karnataka History and Culture, The Karnataka Historical Review, Journal of the ICHR ಗಳಲ್ಲಿ ಪ್ರಕಟವಾಗಿವೆ. ಅವು ಇಂತಿವೆ—

೧. ಸಂಶೋಧನೆಯ ಮಾರ್ಗ.

೨. ಶೃಂಗೇರಿ ಮಠದ ಸಂಕ್ಷಿಪ್ತ ಇತಿಹಾಸ.

೩. ಉಪಾಧಿಗೆ ಸಂಬಂಧಿಸಿದ ಶೃಂಗೇರಿ ಮಠದ ದಾಖಲೆಗಳು, 'ಇತಿಹಾಸ ದರ್ಶನ', ಸಂಪುಟ ೧೦, ೧೯೯೫, ಪು. ೧೮೬.

೪. ಚಿತ್ರದುರ್ಗಕ್ಕೆ ಸಂಬಂಧಿಸಿದ ಶೃಂಗೇರಿ ಮಠದ ದಾಖಲೆಗಳು, 'ಇತಿಹಾಸ ದರ್ಶನ', ಸಂಪುಟ ೭, ೧೯೯೨, ಪು. ೧೭೩.

೫. ಶೃಂಗೇರಿ ಮಠ ಮತ್ತು ಕೆಳದಿ ಇಮ್ಮಡಿ ಬಸವಪ್ಪ ನಾಯಕರ ಸಂಬಂಧ, 'ಇತಿಹಾಸದರ್ಶನ', ಸಂಪುಟ ೫, ೧೯೯೦, ಪು. ೧೪೭.

೬. ವಿಜಯನಗರದ ಇತಿಹಾಸದ ಮೇಲೆ ಬೆಳಕು ಬೀರುವ ಶೃಂಗೇರಿ ಕಡತಗಳು, 'ಸಂಗಮರ ಕಾಲದ ವಿಜಯನಗರ', ಸಂಪಾದಕರು : ಜಿ. ಎಸ್. ದೀಕ್ಷಿತ, ಬಿ.ಎಂ ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೧೯೯೧, ಪು. ೧೬೯.

೭. ಕೆಳದಿಯ ಹಿರಿಯ ವೆಂಕಟಪ್ಪನಾಯಕ ಮತ್ತು ಶೃಂಗೇರಿ ಮಠ, 'ಬರಹ ಬಾಗಿನ', ಸಂಪಾದಕರು : ಪ್ರೊ. ಎಚ್. ವಿ. ನಾಗೇಶ, ಸಹನಾ ಪ್ರಕಾಶನ, ಶಿವಮೊಗ್ಗ, ೧೯೯೬, ಪು. ೫೮೪.

೮. ಕಡತಗಳು, 'ಹರತಿಸಿರಿ', ಸಂಪಾದಕರು : ಲಕ್ಷ್ಮಣ ತೆಲಗಾವಿ, ವಾಲ್ಮೀಕಿ ಸಾಹಿತ್ಯಸಂಪದ, ಹರ್ತಿಕೋಟೆ, ೧೯೮೭, ಪು. ೨೨೩.

೯. ಶೃಂಗೇರಿ ಮಠದ ಶ್ರೀ ಶ್ರೀ ಸಚ್ಚಿದಾನಂದ ಶಿವಾಭಿನವ ನರಸಿಂಹ ಭಾರತೀ ಸ್ವಾಮಿಗಳಿಗೆ ಮೈಸೂರಿನ ರಾಜಪ್ರತಿನಿಧಿ ಕೆಂಪರಾಜಮ್ಮಣ್ಣಿ ವಾಣೀವಿಲಾಸ ರವರ ಆಮಂತ್ರಣ ಪತ್ರಿಕೆಗಳು,

೧೦. ಶೃಂಗೇರಿ ಮತ್ತು ಕೆಳದಿ.

೧೧. ಕೆಳದಿಯ ವೀರಭದ್ರ ನಾಯಕರು ಮತ್ತು ಶೃಂಗೇರಿ ಮಠ

೧೨. ಶೃಂಗೇರಿ ಮತ್ತು ಮೈಸೂರು.

೧೩. ಶೃಂಗೇರಿ ಮತ್ತು ಮರಾಠರು.

೧೪. ಶೃಂಗೇರಿ ಮತ್ತು ವಿಜಯನಗರ.

೧೫. ಶೃಂಗೇರಿ ಮತ್ತು ಮುಸಲ್ಮಾನ ದೊರೆಗಳು.

೧೬. ಶೃಂಗೇರಿ ಮಠದ ಪತ್ರಾಗಾರದಲ್ಲಿ ದಿವಾನ ಸರ್ ಕೆ. ಶೇಷಾದ್ರಿ ಅಯ್ಯರವರ ಪತ್ರಗಳು.

೧೭. ಕಡತಗಳ ಅಂತರಂಗ.

೧೮. ದಿವಾನ ಪೂರ್ಣಯ್ಯ ಮತ್ತು ಶೃಂಗೇರಿ ಮಠ.

೧೯. ಶೃಂಗೇರಿ ಮಠದ ಅಪೂರ್ವ ದಾಖಲೆಗಳು.

೨೦. ಕೆಳದಿಯ ಚೆನ್ನಮ್ಮಾಜಿ ಮತ್ತು ಶೃಂಗೇರಿ ಮಠ (ಅಪ್ರಕಟಿತ)

೨೧. ಕೆಳದಿಯ ಶಿವಪ್ಪನಾಯಕ ಮತ್ತು ಶೃಂಗೇರಿ ಮಠ (ಅಪ್ರಕಟಿತ).

೨೨. ಶೃಂಗೇರಿ ಜಗದ್ಗುರುಗಳೊಂದಿಗೆ ನವಾಬ ಹೈದರಲಿಯ ಸಂಬಂಧ(ಅಪ್ರಕಟಿತ)

೨೩. ಶೃಂಗೇರಿ ಮಠದೊಂದಿಗೆ ಟೀಪು ಸುಲ್ತಾನನ ಸಂಬಂಧ (ಅಪ್ರಕಟಿತ).

೨೪. ಅಗಲಿದ ಮಹಾಸ್ವಾಮಿಗಳೊಂದಿಗೆ, 'ಶಂಕರ ಕೃಪಾ'.

೨೫. ಶಿರಸಿ ನಗರದ ಇತಿಹಾಸ, 'ತ್ರಿಶಕ್ತಿ'. ಶ್ರೀ ಮಾರಿಕಾಂಬಾ ದೇವಸ್ಥಾನದ ಸ್ಮರಣ ಸಂಚಿಕೆ, ೧೯೯೦, ಪು. ೮೦.

೨೬. ಬನವಾಸಿ : ಐತಿಹಾಸಿಕ ಹಿನ್ನೆಲೆ, 'ಬನವಾಸಿ', ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೪. ಪು. ೧.

೨೭. ಕದಂಬ ಕಾಲದ ಆಡಳಿತ ವ್ಯವಸ್ಥೆ ಮತ್ತು ಆರ್ಥಿಕ ಸ್ಥಿತಿ, ಕದಂಬೋತ್ಸವ ಸ್ಮರಣ ಸಂಚಿಕೆ, ೧೯೯೬, ಪು. ೩೩.

೨೮. ಹೊನ್ನೆಹಳ್ಳಿ ಸರ್ವಜ್ಞೇಂದ್ರ ಸರಸ್ವತಿಗಳಿಗೆ ಬನವಾಸಿ ಚೆನ್ನೆಯಣೊಡೆಯರ ಭೂದಾನ ಪಟ್ಟೆ, ಪ್ರಾಚ್ಯವಸ್ತು ಇಲಾಖೆ, ಮೈಸೂರು, ೧೯೯೭.

೨೯. ಸ್ವರ್ಣವಲ್ಲೀ ಮಠಕ್ಕೆ ಸೋದೆಯ ಮಧುಲಿಂಗನಾಯಕರು ನೀಡಿದ ಧರ್ಮ ಸಾಧನಗಳು, ಸ್ವರ್ಣವಲ್ಲೀ ಮಠ, ೧೯೯೭.

೩೦. ಗಂಗೆಯಿಂದ ಶಾಲ್ಮಲೆಯವರೆಗೆ, 'ಧ್ಯೇಯನಿಷ್ಠ ಪತ್ರಕರ್ತ', ಶಿರಸಿ, ೧೫-೬-೧೯೯೭.

೩೧. ಸ್ವರ್ಣವಲ್ಲೀ ಮಠಕ್ಕೆ ಸೋದೆಯ ಇಮ್ಮಡಿ ಅರಸಪ್ಪನಾಯಕನ ಧರ್ಮಶಾಸನಗಳು, 'ಇತಿಹಾಸ ದರ್ಶನ', ಸಂ. ೧೨, ಬೆಂಗಳೂರು, ೧೯೯೭, ಪು. ೪೩.

೩೨. ಸ್ವರ್ಣವಲ್ಲೀ ಸ್ವಾದಿ ಸಂಬಂಧ, 'ಪತ್ರಕರ್ತ', ಶಿರಸಿ, ೨೬-೧೦-೧೯೯೭.

೩೩. ಉತ್ತರಕನ್ನಡ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ, 'ಲೋಕಧ್ವನಿ' ದಿನಪತ್ರಿಕೆ, ಶಿರಸಿ, ೨೩-೧೦-೧೯೯೭.

೩೪. ಕೆಳದಿಗೆ ಸಂಬಂಧಿಸಿದ ಸ್ವರ್ಣವಲ್ಲೀ ಮಠದ ಚಾರಿತ್ರಿಕ ದಾಖಲೆಗಳು, 'ಕೆಳದಿ ಶ್ರೀ ಗುಂಡಾ ಜೋಯಿಸ್ ಅಭಿನಂದನಾ ಗ್ರಂಥ', ಸಂಪಾದಕರು : ಡಾ. ಜಿ.ವಿ. ಕಲ್ಲಾಪುರ, ಮಲೆನಾಡು ರಿಸರ್ಚ್ ಅಕಾದೆಮಿ, ಶಿವಮೊಗ್ಗ, ೧೯೯೭, ಪು. ೧೨೭.

೩೫. ಶ್ರೀ ಸೋಂದಾ ಸ್ವರ್ಣವಲ್ಲಿ ಮಹಾಸಂಸ್ಥಾನದ ಚಾರಿತ್ರಿಕ ದಾಖಲೆಗಳ ಕಿರು ಪರಿಚಯ, 'ಇತಿಹಾಸ ದರ್ಶನ', ಸಂ. ೧೧, ಬೆಂಗಳೂರು, ೧೯೯೬, ಪು. ೧೫೦.

೩೬. ಸ್ವಾದಿಯ ಚರಿತ್ರೆ, 'ಸರ್ವಜ್ಞೇಂದ್ರ ಸರಸ್ವತೀ', ಸಂಪಾದಕರು : ವಿದ್ವಾನ್ ಭಾಲಚಂದ ಶಾಸ್ತ್ರೀ, ಸ್ವರ್ನವಲ್ಲೀ ಮಹಾಸಂಸ್ಥಾನ ಶಿರಸಿ, ಉ.ಕ. ೧೯೯೧.

೩೭. ಸ್ವಾದಿ ಅರಸರ ಆಕರ ಸಾಮಗ್ರಿ, 'ಸ್ವಾದಿ ಅರಸು ಮನೆತನ', ಸಂಪಾದಕರು : ಡಾ. ಎಂ.ಎಂ. ಕಲಬುರ್ಗಿ ಮತ್ತು ಡಾ. ಅ. ಸುಂದರ, ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯ ಮಠ, ಗದಗ, ೧೯೯೫, ಪು ೩೫.

೩೮. ಬಿಳಗಿಗೆ ಸಂಬಂಧಿಸಿದ ಚಾರಿತ್ರಿಕ ದಾಖಲೆಗಳು, 'ಬಿಳಗಿ ಅರಸು ಮನೆತನ', ಸಂಪಾದಕರು : ಡಾ. ಎಚ್. ಆರ್ ರಘುನಾಥ ಭಟ್, ಡಾ. ಎಂ. ಎಂ. ಕಲಬುರ್ಗಿ, ಶ್ರೀ ನಾಗನೂರು ರುದ್ರಾಕ್ಷಿಮಠ, ಬೆಳಗಾವಿ, ೧೯೯೫, ಪು. ೧೭

೩೯. ಶಿರಸಿ ತಾಲೂಕಿನ ಐತಿಹಾಸಿಕ ಆಕರಗಳು, 'ಇತಿಹಾಸ ದರ್ಶನ', ಸಂ. ೩, ಬೆಂಗಳೂರು ೧೯೮೮, ಪು. ೨೦೦.

೪೦. ಹೊಯ್ಸಳ ಕಲಾವೈಭವ (ಅಪ್ರಕಟಿತ), ಆಕಾಶವಾಣಿ ಕೇಂದ್ರ, ಕಾರವಾರ,

೪೧. ಶಿಕ್ಷಣ, 'ನಂದನ' ಸ್ಮರಣ ಸಂಚಿಕೆ, ಶತಮಾನೋತ್ಸವ, ಅಜ್ಜೀಬಳ ಕನ್ನಡ ಹಿರಿಯ ಪ್ರಾಥಮಿಕ ಶಾಲೆ, ಅಜ್ಜೀಬಳ ಶಿರಸಿ ತಾಲೂಕು, ಉ.ಕ., ೧೯೯೧, ಪು. ೧೨.

೪೨. Kaḍatas of the Śriṅgēri Maṭha, 'Sringeri', Shri Sharada Trust, Śriṅgēri, p. 53.

೪೩. Kaḍitas of Śriṅgēri Maṭha, 'The Karnataka Historical Review', Vol. XIV, No. 2, Karnataka Historical Research Society, Dharwad, 1979, p. 60.

೪೪. Hyder and Tipu's contacts with the Śriṅgēri Maṭha, 'Studies in Karnataka History and Culture', Bangalore, 1985.

೪೫. The Kaḍitas of the Śriṅgēri Maṭha, 'India Past and Present', Vol. III, No. 1, Institute of Historical Research, Bombay, 1986, p. 57.

೪೬. Relation between the Śriṅgēri Maṭha and the Keḷadi Rulers, 'Giridharaśri', Ed. A. V. Narasimha Murthy and K.V. Ramesh, Agam Kala Prakashan, 1987, p 137.

೪೭. Land endowments from the Vijayanagar Emperors to the Śriṅgēri Maṭha, 'The Karnataka Historical Review', Vol XXIV, No. 1-2, Karnataka Historical Research Society, Dharwad, 1990, p. 1.

೪೮. Vīrabhadra Nayaka of Keḷadi and Śriṅgēri Maṭha, The Karnataka Historical Review, Vol. XXVI, Karnataka Historical Research Society, Dharwad, 1992, p. 6.

೪೯. Basavappa Nāyaka II and the Śriṅgēri Maṭha (Unpub.)

೫೦. Divan Pūrṇayya and the Śriṅgēri Maṭha (Unpub.).

೫೧. Veṅkatappa Nāyaka of Keḷadi and the Śriṅgēri Maṭha (Unpub.).

೫೨. The letters of Divan Sheshadri Iyer in the Śriṅgēri Maṭha (Uupub.)

೫೩. The records of the Śriṅgēri Maṭha.

೫೪. Tipu Sultan and the Śriṅgēri Maṭha.

೫೫. Spiritual Unification of India : Shankara's contribution, AIR, Dharwad.

೫೬. Shivappa Nāyaka of Keḷadi and the Śriṅgēri Maṭha.

೫೭. Social conditions in the Śriṅgēri Dharma Samsthāna.

೫೮. Śrī Śrī Abhinava Vidyātīrth Mahāswāmiji, as I saw.

೫೯. Records from the Kaḍatas of the Śriṅgēri Maṭha, relating to the Uttara Kannada District.

೬೦. Records of the Śriṅgēri Maṭha relating to 'Upādhi'.

೬೧. Chennammaji of Keḷadi and the Śriṅgēri Matha

೬೨. Coinage and prices in the Śriṅgēri Dharma Samsthāna.

೬೩. Śriṅgēri Kaḍatas as sources of Vijayanagar History.

೬೪. Sources of Sirsi Taluk's History.

೬೫. A brief History of the Swarṇavalli Mahāsamsthāna, 'Mayoor', M. M. Arts and Science College, Sirsi, 1995–96.

೬೬. Sources for the Early History of India, 'Mayoor', Arts and Science College, Sirsi, 1965, p. 49.

೬೭. Track and Field in Athletics, 'Mayoor', Arts and Science College, Sirsi, 1966, p. 14.

೬೮. Whither Humanity ?, 'Mayoor', Arts and Science College, Sirsi, 1967, p. 14.

**ವಿ.ಸೂ. :** ಕೆಲವು ಪ್ರಕಟಿತ ಮತ್ತು ಅಪ್ರಕಟಿತ ಲೇಖನಗಳಿಗೆ ಸಂಬಂಧಿಸಿದ ಸಂಚಿಕೆಗಳು ದೊರೆಯದ್ದರಿಂದ, ಪ್ರಕಾಶನಕ್ಕೆ ಸಂಬಂಧಿಸಿದ ಮಾಹಿತಿ ನೀಡಲಾಗಿಲ್ಲ. ಹೆಚ್ಚಿನ ಮಾಹಿತಿಗಾಗಿ ಲೇಖಕರನ್ನು ಸಂಪರ್ಕಿಸಬಹುದು.

ವಿಳಾಸ : **ಡಾ. ಎ. ಕೆ. ಶಾಸ್ತ್ರಿ** ದೂರವಾಣಿ : 08384 - 27633
ಟಿ. ಎಸ್. ಎಸ್. ರೈಸ್‌ಮಿಲ್ ಹತ್ತಿರ,
ಶಿರಸಿ (ಉ.ಕ.), – 581402



## ಲೇಖಕರ ವಿಳಾಸ

ಡಾ. ಎ. ಕೆ. ಶಾಸ್ತ್ರಿ
ನಿವೃತ್ತ ಇತಿಹಾಸ ಪ್ರಾಧ್ಯಾಪಕರು
ಭವಾನಿ, ಟಿ. ಎಸ್. ಎಸ್. ರೈಸ್ ಮಿಲ್ ಹತ್ತಿರ
ಶಿರಸಿ, ಉತ್ತರ ಕನ್ನಡ ಜಿಲ್ಲೆ-೫೮೧ ೪೦೨

ಡಾ. ಜಿ. ಎಂ. ಹೆಗಡೆ
ಕನ್ನಡ ಪ್ರಾಧ್ಯಾಪಕರು
ಕಿಟೆಲ್ ಆರ್ಟ್ಸ ಕಾಲೇಜು, ಧಾರವಾಡ-೫೮೦ ೦೦೧

ಡಾ. ಪಾ. ರಾ. ಪಂಚಮುಖಿ
ನಿರ್ದೇಶಕರು, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ,
ಧಾರವಾಡ-೫೮೦ ೦೦೧

ಪ್ರೊ. ಪಿ. ಆಯ್. ಹೆಗಡೆ
ಮುಖ್ಯಸ್ಥರು, ಭೌತಶಾಸ್ತ್ರ ವಿಭಾಗ
ಎಂ. ಎಂ. ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯ
ಶಿರಸಿ, ಉತ್ತರ ಕನ್ನಡ-೫೮೧ ೪೦೨

ಶ್ರೀಮತಿ ಲಲಿತ ಯು. ಹೆಗಡೆ
C/o. ಯು. ಎಸ್. ಹೆಗಡೆ, ಜ್ಯೋತಿಷಿಗಳು
'ಅಶ್ವಿನಿ' ನಿರ್ಮಲ ನಗರ, ಧಾರವಾಡ-೫೮೦ ೦೦೩

ಕಾಲೇಜುಗಳಲ್ಲಿಯ ಇತಿಹಾಸ ಮತ್ತು ಕನ್ನಡ ಪ್ರಾಧ್ಯಾಪಕರಿಗೆ ಬೇರೆ ವಿಷಯಗಳ ಪ್ರಾಧ್ಯಾಪಕರಿಗಿಂತ ಹೆಚ್ಚಿನ ಹೊಣೆಗಾರಿಕೆ ಇದೆ. ಇವರು ಕೇವಲ ಬೋಧಕರಾಗಿ ಉಳಿಯದೆ ಅಲ್ಲಲ್ಲಿ ಕರ್ನಾಟಕ ಸಂಸ್ಕೃತಿಯ ಶೋಧಕರಾಗಿ, ಪ್ರಸಾರಕರಾಗಿ ಬೆಳೆಯಬೇಕಾಗುತ್ತದೆ. ಈ ಮಾತಿಗೆ ಅರ್ಥ ತುಂಬುವ ರೀತಿಯಲ್ಲಿ ವೃತ್ತಿಜೀವನ ನಡೆಸಿದ ನಾಡಿನ ಕೆಲವೇ ಜನ ಇತಿಹಾಸ ಪ್ರಾಧ್ಯಾಪಕರಲ್ಲಿ ಡಾ. ಎ. ಕೆ. ಶಾಸ್ತ್ರಿ ಮುಖ್ಯರಾಗಿದ್ದಾರೆ.

ಉತ್ತರ ಕನ್ನಡದ ಶಿರಸಿಯಲ್ಲಿ ಮೂಲೆ ಹಿಡಿದು ಕುಳಿತುಕೊಳ್ಳದೆ ಆ ಪ್ರದೇಶದಲ್ಲಿ ಸ್ಥಳೀಯ ಸಾಂಸ್ಕೃತಿಕ ರಾಯಭಾರಿಯಂತೆ ಡಾ. ಎ. ಕೆ. ಶಾಸ್ತ್ರಿ ಅವರು ದುಡಿಯುತ್ತ ಬಂದಿದ್ದಾರೆ. ಅವರಂತೆ ಎಲ್ಲರೂ ಅಲ್ಲಲ್ಲಿ ದುಡಿದರೆ ಕರ್ನಾಟಕದ ಪರಂಪರೆ ಬೆಳಕಿಗೆ ಬರುವುದೆಂಬುದಕ್ಕೆ ಡಾ. ಶಾಸ್ತ್ರಿಗಳು ಉತ್ತಮ ನಿದರ್ಶನವೆನಿಸಿದ್ದಾರೆ.

ಡಾ. ಎ. ಕೆ. ಶಾಸ್ತ್ರಿ ಅವರು ಸಂಪ್ರಬಂಧ, ಇತಿಹಾಸ ಸಂಶೋಧನೆಯ ಗ್ರಂಥಗಳ ಮೂಲಕ ಸಂಶೋಧನ ಕ್ಷೇತ್ರಕ್ಕೆ ಸೇವೆ ಸಲ್ಲಿಸಿದ್ದರೂ ಅವರ ವಿಶೇಷ ಆಸಕ್ತಿಯ ಕ್ಷೇತ್ರ ಕರ್ನಾಟಕದ ಕಡತಗಳು. ಸಾಮಾನ್ಯವಾಗಿ ಯಾರೂ ಹೊರಳಿ ನೋಡದ ಈ ಆಕರ ಸಾಮಗ್ರಿ, ಅಧ್ಯಯನ, ಪ್ರಕಟಣ ವಿಷಯದಲ್ಲಿ ಡಾ. ಶಾಸ್ತ್ರಿಗಳನ್ನು ಮೀರಿಸುವವರು ಇಂದು ಯಾರೂ ಇಲ್ಲವೆಂದೇ ಹೇಳಬೇಕು. ಶೃಂಗೇರಿ ಮಠ, ಸ್ವರ್ಣವಲ್ಲೀ ಮಠಗಳಲ್ಲಿಯ ಸಾವಿರ ಸಾವಿರ ಕಡತಗಳ ಅವರ ಅಧ್ಯಯನ, ಪ್ರಕಟಣೆ ಈ ಮಾತಿಗೆ ಸಾಕ್ಷಿಯೆನಿಸಿದೆ. ಈ ಮೂಲಕ ಇವರು ಬಹಳ ದಿನ ನಿಲ್ಲುವ ಕೊಡುಗೆಯನ್ನು ಕರ್ನಾಟಕ ಇತಿಹಾಸಕ್ಕೆ ನೀಡಿದ್ದಾರೆ.

ನಮ್ಮ ರಾಜ್ಯದ ಇತಿಹಾಸ ಸಂಶೋಧನೆಗೆ ಸಂಬಂಧಪಟ್ಟಂತೆ ದೊಡ್ಡ ಕಾಣಿಕೆಯನ್ನು ಸಲ್ಲಿಸಿರುವ ಡಾ. ಎ. ಕೆ. ಶಾಸ್ತ್ರಿಯವರನ್ನು ಕುರಿತು ಹೊರ ಬರುತ್ತಿರುವ 'ಇತಿಹಾಸ ಸಂಶೋಧಕ' ಅಭಿನಂದನ ಗ್ರಂಥ ಕೇವಲ ಡಾ. ಶಾಸ್ತ್ರಿಗಳಿಗೆ ಸಲ್ಲಿಸಿದ ಗೌರವವಾಗಿರದೆ ಇತಿಹಾಸ ಸಂಶೋಧನೆಗೆ ಸಲ್ಲಿಸಿದ ಗೌರವವೂ ಆಗಿದೆ. ಈ ಉತ್ತಮ ಕಾರ್ಯಕ್ಕಾಗಿ ಸಂಪಾದಕರನ್ನೂ, ಸಂಬಂಧಪಟ್ಟವರನ್ನೂ ಹೃದಯಾರೆ ಅಭಿನಂದಿಸುತ್ತೇನೆ. ಡಾ. ಶಾಸ್ತ್ರಿಗಳ ಸಂಶೋಧನ ಕಾರ್ಯ ನಿರಂತರವಾಗಿ ಮುಂದುವರಿಯಲೆಂದು ಹಾರೈಸುತ್ತೇನೆ.

ಡಾ. ಎಂ. ಎಂ. ಕಲಬುರ್ಗಿ
ಕುಲಪತಿಗಳು
ಕನ್ನಡ ವಿಶ್ವವಿದ್ಯಾಲಯ, ಹಂಪಿ